# ಕನ್ನಡ ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಹರೀಶ ಆರ್.

ಮಾರ್ಗದರ್ಶಕರು
ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ಭಾಷಾನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಕನ್ನಡ ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಹರೀಶ ಆರ್.**

ಮಾರ್ಗದರ್ಶಕರು

**ಡಾ. ರಹಮತ್ ತರೀಕೆರೆ**

ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಭಾಷಾನಿಕಾಯ**

**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೯

# ಸಂಶೋಧಕರ ಪ್ರಮಾಣ ಪತ್ರ

**'ಕನ್ನಡ ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ರಹಮತ್ ತರೀಕೆರೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾನಿಕಾಯದ **ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸಂಶೋಧಕರು**

Haree.R

**ಹರೀಶ ಆರ್.**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ದಿನಾಂಕ: 14/11/2019
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**'ಕನ್ನಡ ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಹರೀಶ ಆರ್**. ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ., ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಡಾ. ರಹಮತ್ ತರೀಕೆರೆ**
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

ದಿನಾಂಕ: 14/11/2019
ಸ್ಥಳ : ವಿದ್ಯಾರಣ್ಯ

## ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

ಅಧ್ಯಾಯ : ಒಂದು

# ಅಧ್ಯಯನದ ಸ್ವರೂಪ

## ಪ್ರಸ್ತಾವನೆ

ಆಧುನಿಕ ಕನ್ನಡ ಸಾಹಿತ್ಯವು ಕಥನದ ಅಂಶವುಳ್ಳ ಕಥೆ, ಕಾದಂಬರಿ, ಪ್ರವಾಸ ಕಥನ, ಕಥನಕಾವ್ಯ, ಮಹಾಕಾವ್ಯ ಹೀಗೆ ಹಲವಾರು ಪ್ರಕಾರಗಳನ್ನು ಸೃಷ್ಟಿಸಿದೆ. ಈ ಕಥನ ಪ್ರಕಾರಗಳಲ್ಲಿ ಆತ್ಮಕಥೆಯೂ ಒಂದು. ಬೇರೆಲ್ಲಾ ಕಥನ ಪ್ರಕಾರಗಳಿಗೆ ಹೋಲಿಸಿದರೆ ಆತ್ಮಕಥೆಗಳು ಚಲನಶೀಲ ಸಮಾಜದ ಬೆಳವಣಿಗೆಗಳ ಜತೆ ಹೆಚ್ಚಿನ ಸಂಬಂಧ ಹೊಂದಿವೆ. ವ್ಯಕ್ತಿ ಮತ್ತು ಸಮಾಜದ ನಡುವಿನ ಅಂತರ್‌ಸಂಬಂಧವು ಈ ಚಲನಶೀಲತೆಗೆ ಕಾರಣವಾಗಿದೆ. ಆತ್ಮಕಥನಕಾರರು ತಮಗೆ ಸಂಬಂಧಿಸಿದ ಬದುಕು ಇತರರಿಗಿಂತ ಭಿನ್ನವಾಗಿದೆ ಎಂಬ ಪರಿಭಾವನೆಯಲ್ಲಿ ತಮ್ಮ ಜೀವನಾನುಭವಗಳನ್ನು ಅಕ್ಷರ ರೂಪಕ್ಕಿಳಿಸುವರು. ಈ ಅನುಭವಗಳು ಅವರ ಆತ್ಮಾಭಿವ್ಯಕ್ತಿ, ಆತ್ಮವಿಮರ್ಶೆಗಳು ಆಗಿರುವ ಹಾಗೆ ಸಮಾಜವು ಆತ್ಮವಿಮರ್ಶೆ ಮಾಡಿಕೊಳ್ಳುವ ಚಾರಿತ್ರಿಕ ಆಯಾಮಗಳನ್ನು ಹೊಂದಿರುತ್ತವೆ.

ಆತ್ಮಕಥೆ ಬರೆಯುವುದು ಒಂದು ಬಗೆಯಲ್ಲಿ ವ್ಯಕ್ತಿಗಳ ಮತ್ತು ಸಾಮಾಜಿಕ ಅನುಭವಗಳ ಮರುಹುಟ್ಟು ಎನ್ನಬಹುದು. ಏಕೆಂದರೆ ಆತ್ಮಕಥೆ ಬರೆಯುವಾಗ ಲೇಖಕರು ತಮ್ಮ ಗತಕಾಲದ ನೆನಪುಗಳನ್ನು ಮಾತ್ರ ಮರುಕೊಳಿಕೆ ಮಾಡುತ್ತಿರುವುದಿಲ್ಲ. ಅವುಗಳನ್ನು ಸಮಕಾಲೀನ ಅನುಭವ ಚಿಂತನೆಗಳ ಒಳಗೆ ಹಾಯಿಸಿ ಅವುಗಳ ಮೌಲ್ಯಮಾಪನವನ್ನೂ ಮಾಡುತ್ತಿರುತ್ತಾರೆ. ಬರೆಯುವಾಗ ಅವರು ಕೆಲವು ಅನುಭವಗಳನ್ನು ಆಯ್ಕೆ ಮಾಡಿಕೊಳ್ಳುವ ಮತ್ತು ಮಾಡಿಕೊಳ್ಳದಿರುವ ಸಾಧ್ಯತೆಗಳಿವೆ. ಬರೆಯಲು ಆಯ್ಕೆ ಮಾಡಿಕೊಂಡ ಅನುಭವಗಳನ್ನು ಯಾಂತ್ರಿಕವಾಗಿ ದಾಖಲಿಸದೆ ಅವನ್ನು ವಿಶಿಷ್ಟ ನಿರೂಪಣ ಶೈಲಿಯ ಮೂಲಕ ಅಭಿವ್ಯಕ್ತಿಸುತ್ತ, ಕಲಾತ್ಮಕ ರೂಪವನ್ನೂ ಕೊಡುವರು. ಆತ್ಮಕಥೆಗಳ ವಿಶಿಷ್ಟತೆಯೆಂದರೆ ಲೇಖಕರೆಂದು ಖ್ಯಾತರಾಗಿಲ್ಲದವರು ಸಹ ಬರೆಯಲು ಸಾಧ್ಯವಾಗಿರುವುದು. ಈ ಕಾರಣದಿಂದಲೇ ರಾಜಕಾರಣಿಗಳು, ನಟ, ನಟಿಯರು, ಅಂಚೆ ಪೇದೆಗಳು, ಗೃಹಿಣಿಯರು, ವ್ಯಾಪಾರಿಗಳು, ವೈದ್ಯರು, ಅಧಿಕಾರಿಗಳು, ಚಳವಳಿಗಾರರು ಸಹ ಆತ್ಮಕಥೆ ಬರೆದಿದ್ದಾರೆ. ಈ ಆತ್ಮಕಥೆಗಳು 'ಪ್ರಧಾನ' ಲೇಖಕರು ಮತ್ತು ಇತರೆ ಸಾಹಿತ್ಯ ಪ್ರಕಾರಗಳಾದ ಕಥೆ, ಕಾದಂಬರಿ ಮುಂತಾದವು ಹೇಳಲಾಗದ ಎಷ್ಟೋ ಸಂಗತಿಗಳನ್ನು ಹೇಳುವ ಪ್ರಯತ್ನ ಮಾಡಿವೆ. 'ಗೊಂದಲಿಗ್ಯಾ',

'ಮಣೆಗಾರ', 'ಸಂಬೋಳಿ' ಆತ್ಮಕಥೆಗಳನ್ನು ಇದಕ್ಕೆ ಉದಾಹರಣೆಗಳಾಗಿ ನೋಡಬಹುದಾಗಿದೆ. ಈ ರೀತಿಯಲ್ಲಿ ಸೃಷ್ಟಿಯಾದ ಆತ್ಮಕಥೆಗಳು ಕೇವಲ ವ್ಯಕ್ತಿಗತ ವಿವರಗಳನ್ನು ಮಾತ್ರ ಒಳಗೊಳ್ಳದೇ ಆತ್ಮಕಥನಕಾರ ಬದುಕಿದ ಕಾಲಘಟ್ಟದ ಸಾಂಸ್ಕೃತಿಕ ಅನುಭವಗಳ ಸಂಕೀರ್ಣತೆಗಳನ್ನು ಮತ್ತು ಅವುಗಳ ಸೂಕ್ಷ್ಮತೆಗಳನ್ನು ಒಳಗೊಂಡಿರುತ್ತವೆ. ಈ ಕಾರಣದಿಂದಲೇ ಆತ್ಮಕಥೆಗಳು ವ್ಯಕ್ತಿಯ ಮೂಲಕ ಪ್ರಕಟವಾಗುವ ಸಮುದಾಯದ ಅಥವಾ ಕಾಲಘಟ್ಟದ ಕಥನಗಳಾಗಿವೆ. ಈ ದಿಸೆಯಲ್ಲಿ ಚಿಂತಕರಾದ ಬಸವರಾಜ ಕಲ್ಗುಡಿಯವರ ಅಭಿಪ್ರಾಯ ಗಮನಾರ್ಹ. ಅವರು ಆತ್ಮಕಥೆಗಳ ಬಗ್ಗೆ ಬರೆಯುತ್ತ "ಪಶ್ಚಿಮದ ಆತ್ಮಕಥನದ ನಾಯಕ ಚರಿತ್ರೆಯನ್ನು ಕಟ್ಟಲೆಂದೇ ಸಮೂಹದಿಂದ ಪ್ರತ್ಯೇಕಗೊಂಡರೆ, ಒಡೆದು ಹೋದ ಸಮುದಾಯದ ದಾರುಣ ಚರಿತ್ರೆ ಇಲ್ಲಿನ ವ್ಯಕ್ತಿಯನ್ನು ಸಂವಾದಕ್ಕೆ ಎಳೆಸುವಂತೆ ಮಾಡುತ್ತಿದೆ." ಎಂದು ಅಭಿಪ್ರಾಯ ಪಡುತ್ತಾರೆ. ಪಾಶ್ಚಾತ್ಯ ಆತ್ಮಕಥನಕಾರರಾದ ರೂಸೊ, ನೀಶೆ ಮುಂತಾದವರು ಹೊಸ ತಾತ್ವಿಕತೆ ಮತ್ತು ಬೌದ್ಧಿಕ ತಿಳುವಳಿಕೆ ಸೃಷ್ಟಿಸಿರುವ ಸಲುವಾಗಿಯೇ ತಮ್ಮ ಬದುಕು ವಿಶಿಷ್ಟ ಎಂದು ಬರೆದುಕೊಳ್ಳುತ್ತಾರೆ.

ಭಾರತೀಯ ಆತ್ಮಕಥೆಗಳಲ್ಲಿ ತಮ್ಮ ಬದುಕನ್ನು ಚಿತ್ರಿಸುವುದರ ಮೂಲಕ ಸಮಷ್ಟಿ ಸಮಾಜವನ್ನು ನಿರ್ಮಿಸುವ ಆಶಯದ ತುಡಿತವೇ ಹೆಚ್ಚಾಗಿದೆ. ಅದರಲ್ಲೂ ದಲಿತರ ಮತ್ತು ಮಹಿಳೆಯರ ಆತ್ಮಕಥೆಗಳಲ್ಲಿ ಈ ಗುಣ ಹೆಚ್ಚಾಗಿರುವುದನ್ನು ಕಾಣಬಹುದು. ಕಷ್ಟ, ನೋವು, ಶೋಷಣೆ ಹಾಗೂ ಪ್ರತಿರೋಧಗಳು ಬಹುತೇಕ ಆತ್ಮಕಥೆಗಳ ಅಭಿವ್ಯಕ್ತಿಯ ಹಿಂದೆ ಸಾಮಾನ್ಯವಾಗಿ ಕಾಣುವ ಸಂಗತಿಗಳಾಗಿವೆ. ಇವುಗಳ ಜೊತೆಗೆ ತನ್ನ ಸಾಧನೆ, ಸಂಭ್ರಮವನ್ನು ಹೇಳಿಕೊಳ್ಳಬೇಕೆಂಬ ತುಡಿತವಿದ್ದರೂ ತನಗೆ ಹಾಗೂ ತನ್ನ ಸಮುದಾಯಕ್ಕೆ ಆದ ನೋವನ್ನು ಹೇಳಿಕೊಳ್ಳಬೇಕೆಂಬ ತಹತಹವೇ ಹೆಚ್ಚು ಕಾಣುತ್ತದೆ. ಉದಾಹರಣೆಗೆ 'ಉಚಲ್ಯಾ' ಆತ್ಮಕಥೆಯಲ್ಲಿ ಲಕ್ಷ್ಮಣ ಗಾಯಕವಾಡ ಅವರು "ಮಧ್ಯಮ ವರ್ಗದವರಿಗೆ, ಬುದ್ಧಿಜೀವಿಗಳಿಗೆ, ಪಟ್ಟಭದ್ರರಿಗೆ ನಮ್ಮ ಸಮಾಜದ ನೋವಿನ ಕಥೆ ಗೊತ್ತಿಲ್ಲವೆಂಬ ಅರಿವು ನನಗಾಯಿತು. ಹೀಗಾಗಿ ಈ ನೋವಿನ ಕತೆಯನ್ನು ಜನರೆದುರಿಗೆ ತೋಡಿಕೊಳ್ಳಬೇಕೆಂಬ ಪ್ರಯತ್ನವೇ ಈ ಬರವಣಿಗೆಯ ಉದ್ದೇಶ." ಎಂದು ತಮ್ಮ ಬರವಣಿಗೆಯ ಹಿಂದಿರುವ ಆಶಯವನ್ನು ಹೇಳಿಕೊಳ್ಳುತ್ತಾರೆ. ಇಂತಹ ಅಪಮಾನಗಳನ್ನು ದಾಖಲಿಸುವುದರ ಮೂಲಕ ಶೋಷಕರು ಸಹ ಆತ್ಮವಿಮರ್ಶೆ ಮಾಡಿಕೊಳ್ಳಲು ಸಾಧ್ಯವಾಗುವಂತಹ ಅನುಭವಗಳನ್ನು ನೀಡಿದ್ದು ಮರಾಠಿ ದಲಿತ ಆತ್ಮಕಥೆಗಳ ಹಿರಿಮೆಯಾಗಿದೆ. ಅವುಗಳ ಪ್ರಭಾವ ಕನ್ನಡದಲ್ಲೂ ಆಗಿದ್ದು, ದಲಿತರು ಮಾತ್ರವಲ್ಲ ದಲಿತೇತರರು, ಮಹಿಳೆಯರು, ತೃತೀಯ ಲಿಂಗಿಗಳು ತಮ್ಮ ಅಪಮಾನ ಮತ್ತು ಪ್ರತಿರೋಧದ ಅಂಶಗಳನ್ನು ದಿಟ್ಟವಾಗಿ ಹೇಳಿಕೊಳ್ಳುವುದಕ್ಕೆ ಆರಂಭಿಸಿದರು. ಈ ಅರ್ಥದಲ್ಲಿ ಕನ್ನಡ ಆತ್ಮಕಥೆಗಳಲ್ಲಿ ಎರಡು ಮಾದರಿಗಳಿವೆ. ಮೊದಲನೆಯದು ಮಾಡಿದ ಸಾಧನೆಯನ್ನು ಅಭಿವ್ಯಕ್ತಿಗೊಳಿಸುವುದು ಮುಖ್ಯವಾಗಿದ್ದರೆ, ಇನ್ನೊಂದೆಡೆ ಪಟ್ಟಪಾಡನ್ನು ಹೇಳಿಕೊಳ್ಳುವುದೇ ಮುಖ್ಯವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಕನ್ನಡದ ಪ್ರಾತಿನಿಧಿಕ ಆತ್ಮಕಥೆಗಳನ್ನು, ಅವಮಾನ ಮತ್ತು ಪ್ರತಿರೋಧಗಳೆಂಬ ಪರಿಕಲ್ಪನೆಯ ಮೂಲಕ ಚರ್ಚಿಸಲಾಗಿದೆ. ಆತ್ಮಕಥೆಗಳಿಗೂ ಮತ್ತು ಅವಮಾನ, ಪ್ರತಿರೋಧಗಳಿಗೂ ನೇರವಾದ ಸಂಬಂಧಗಳಿವೆ. ವ್ಯಕ್ತಿಗಳ ಸಾಮಾಜಿಕ ಮತ್ತು ವೈಯಕ್ತಿಕ ಅನುಭವಗಳ ನಿರೂಪಣೆಗಳು ಆತ್ಮಕಥೆಗಳ ಮುಖ್ಯ ಲಕ್ಷಣವಾಗಿದೆ. ಹೀಗಾಗಿ ಆತ್ಮಕಥೆಗಳಲ್ಲಿ ಭಾರತದ ಹಲವು ಸಾಮಾಜಿಕ ವ್ಯವಸ್ಥೆಗಳನ್ನು ಕಾಣಬಹುದು. ಸಮಾಜದಲ್ಲಿ ಬಡವ–ಶ್ರೀಮಂತ, ಮೇಲ್ಜಾತಿ–ಕೆಳಜಾತಿ, ಹಳ್ಳಿ–ನಗರ, ಪುರುಷ–ಮಹಿಳೆ, ಮಾಂಸಾಹಾರ–ಸಸ್ಯಹಾರ, ಬಿಳಿಬಣ್ಣ–ಕಪ್ಪುಬಣ್ಣ, ಕನ್ನಡ–ಇಂಗ್ಲಿಷ್ ಹಾಗೂ ಧರ್ಮಾಧಾರಿತವಾಗಿ ಮುಂತಾದ ನೆಲೆಗಳ ಮೇಲೆ ತರತಮ ಮಾಡುವ ಗುಣಗಳಿವೆ. ಅಧಿಕಾರಸ್ಥರು ಮತ್ತು ಪ್ರಬಲರು ಅಧಿಕಾರರಹಿತರನ್ನು ಮತ್ತು ದುರ್ಬಲರನ್ನು ದಮನಿಸಿ ಅವಮಾನಿಸುವುದರ ಒಂದು ದೀರ್ಘವಾದ ಚರಿತ್ರೆಯೇ ಇದೆ. ಯಾವಾಗಲೂ ಶ್ರೇಣೀಕರಣ ಅಥವಾ ತಾರತಮ್ಯಗಳು ಅವಮಾನಗಳಿಗೆ ಕಾರಣವಾಗುತ್ತವೆ. ಈ ಅವಮಾನಗಳು ಏಕಮುಖವಾಗಿರುವುದಿಲ್ಲ. ಬದಲಿಗೆ ಹಲವು ಸ್ವರೂಪಗಳಲ್ಲಿ ಮತ್ತು ಸ್ತರಗಳಲ್ಲಿ ಇರುತ್ತವೆ. ತಳಸಮುದಾಯಗಳು ಜಾತಿ ಕಾರಣಕ್ಕಾಗಿ, ಮಹಿಳೆಯರು ಲಿಂಗದ ಕಾರಣಕ್ಕಾಗಿ, ಕೆಲವರು ಬಣ್ಣಕ್ಕಾಗಿ, ಅನಕ್ಷರತೆಗಾಗಿ, ಮಾಂಸಾಹಾರಿಯಾಗಿದ್ದಕ್ಕಾಗಿ ಅವಮಾನಗಳನ್ನು ಅನುಭವಿಸುತ್ತಾ ಬಂದಿದ್ದಾರೆ. ಇಲ್ಲಿ ಉಲ್ಲೇಖವಾಗಿರುವ ಅವಮಾನಗಳು ಕೆಲವೊಮ್ಮೆ ಏಕಮುಖವಾಗಿದ್ದರೆ, ಮತ್ತೆ ಕೆಲವೊಮ್ಮೆ ವ್ಯಕ್ತಿ ಮತ್ತು ಸಮೂಹದ ಸಾಮಾಜಿಕ, ಆರ್ಥಿಕ ಮತ್ತು ಪ್ರಾದೇಶಿಕ ಹಿನ್ನೆಲೆಗಳನ್ನು ಆಧರಿಸಿ ಭಿನ್ನವಾಗಿರುತ್ತವೆ.

ಅಧಿಕಾರ ರಚನೆಯಲ್ಲಿಯೂ ಶ್ರೇಣೀಕರಣವಿದ್ದು, ಅಲ್ಲಿ ಕೆಳಹಂತದವರು ಮೇಲು ಹಂತದವರಿಂದ ಶೋಷಣೆ ಅನುಭವಿಸುತ್ತಾರೆ. ದಮನಿತರಿಗೆ ಅವಮಾನದ ಪ್ರಜ್ಞೆ ಇದ್ದರೆ ಮಾತ್ರ ತಮಗಾಗುವ ಶೋಷಣೆಯು ಅರಿವಿಗೆ ಬರುತ್ತದೆ. ಆಗ ಅವಮಾನವನ್ನು ಪ್ರತಿರೋಧಿಸುವುದಕ್ಕೆ ಸಾಧ್ಯ. ಕೆಲವೊಂದು ಬಾರಿ ಅವಮಾನದ ಪ್ರಜ್ಞೆ ಇದ್ದರೂ ಪ್ರತಿರೋಧಿಸಲಾಗದ ಅಸಹಾಯಕತೆ ಕಂಡುಬರುತ್ತದೆ. ಅವಮಾನವನ್ನು ಪ್ರತಿರೋಧಿಸಲು ಸರಿಯಾದ ಸಂದರ್ಭ ಒದಗಿದಾಗ ಕ್ರಿಯೆ ಹಲವು ಸ್ತರಗಳಲ್ಲಿ ಪ್ರಕಟವಾಗುತ್ತವೆ. ಅವಮಾನ ಮತ್ತು ಪ್ರತಿರೋಧಗಳು ಒಂದಕ್ಕೊಂದು ಸಂಬಂಧ ಹೊಂದಿದ್ದು ಒಂದು ಇನ್ನೊಂದರ ಕಾರಣ ಮತ್ತು ಪರಿಣಾಮ ಆಗಿರುವುದುಂಟು. ಕೌಟುಂಬಿಕ ಹಿಂಸೆಯಿಂದ ಹೆಣ್ಣೊಬ್ಬಳು ಮನೆಬಿಟ್ಟು ಹೋಗುವುದರಿಂದ ಹಿಡಿದು ವ್ಯವಸ್ಥೆಯನ್ನು ಬದಲಿಸುವ ಕ್ರಾಂತಿಕಾರಕ ಚಳವಳಿಯವರೆಗೂ ಈ ಪ್ರತಿರೋಧದ ವ್ಯಾಪ್ತಿ ವಿಸ್ತರಿಸಿದೆ. ಸ್ವಾಭಿಮಾನಕ್ಕೆ ಧಕ್ಕೆ ಬರುವಂತಹದ್ದನ್ನು ನಿರಾಕರಿಸುವುದು ಹಾಗೂ ತಮ್ಮ ಅಸಹಾಯಕ ಬದುಕಿನೊಳಗೆ ಚೈತನ್ಯವನ್ನು ಉಳಿಸಿಕೊಳ್ಳುವುದು ಕೂಡ ಪ್ರತಿರೋಧದ ಭಾಗವೇ ಆಗಿದೆ. ಚರಿತ್ರೆಯಲ್ಲಿ ವ್ಯಕ್ತಿಗೆ ಆಗುವ ಅವಮಾನ ಹೋರಾಟಕ್ಕೆ ಕಾರಣವಾಗಬಹುದು. ಅಂಬೇಡ್ಕರ್‌ಗೆ ಅಸ್ಪೃಶ್ಯತೆ ಕುರಿತಂತೆ ಆದ ಅವಮಾನ ಇಡೀ ಜಾತಿ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡಲು ಪ್ರೇರಣೆಯಾಯಿತು. ಹೀಗೆ ಅವಮಾನ ಅನುಭವಿಸಿದ

ನಂತರ ಪ್ರತಿರೋಧಿಸಬೇಕೆಂಬ ಒತ್ತಡ ಬರಬಹುದು ಅಥವಾ ಪ್ರತಿರೋಧಿಸಲು ಹೋಗಿ ಅವಮಾನವನ್ನು ಅನುಭವಿಸಬೇಕಾದ ಪರಿಸ್ಥಿತಿಯೂ ಬರಬಹುದು. ಪ್ರತಿರೋಧಗಳು ಕೆಲವೊಮ್ಮೆ ವಿಫಲವಾಗಬಹುದು ಅಥವಾ ಯಶಸ್ಸನ್ನೂ ಪಡೆಯಬಹುದು. ಈ ಎಲ್ಲಾ ಕ್ರಿಯೆಗಳು ವ್ಯಕ್ತಿಯ ಅಥವಾ ಸಮೂಹದ ಬಾಳನ್ನು ಸಂಘರ್ಷಮಯವನ್ನಾಗಿ ಮಾಡುತ್ತವೆ. ಆತ್ಮಕಥೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಅವಮಾನ ಮತ್ತು ಪ್ರತಿರೋಧಗಳೆಂಬ ಈ ಎರಡೂ ಆಶಯಗಳ ಮೇಲೆ ಅಧ್ಯಯನ ಮಾಡುವುದೆಂದರೆ, ಅದು ವ್ಯಕ್ತಿಯ ಕಥೆಯನ್ನು ಮಾತ್ರವಲ್ಲ ಪರೋಕ್ಷವಾಗಿ ಆ ವ್ಯಕ್ತಿಯು ಬದುಕಿದ ಕಾಲಘಟ್ಟದ ಸಾಂಸ್ಕೃತಿಕ ಚರಿತ್ರೆಯನ್ನು ಅಧ್ಯಯನ ಮಾಡಿದಂತೆಯೇ ಆಗುತ್ತದೆ. ನಿದರ್ಶನಕ್ಕೆ, ಸಿದ್ಧಲಿಂಗಯ್ಯನವರ ಆತ್ಮಕಥನದ('ಊರುಕೇರಿ') ಅಧ್ಯಯನವೆಂದರೆ, ಅವಮಾನಗಳ ಜೊತೆಗೆ ಕರ್ನಾಟಕದಲ್ಲಿನ ಮಹಾಜನ್ ವರದಿ ಜಾರಿಗೆ ಚಳವಳಿ, ಬೂಸಾ ಪ್ರಕರಣ ಮುಂತಾದ ಹಲವು ಚಾರಿತ್ರಿಕ ಸಂಗತಿಗಳನ್ನು ಅಧ್ಯಯನ ಮಾಡುವುದೇ ಆಗಿದೆ. ಈ ಕಾರಣಗಳಿಂದ ಆತ್ಮಕಥೆಗಳನ್ನು ಈ ಹಿಂದೆ ನಡೆದಿರುವ ಲಿಂಗ, ಜಾತಿ, ಲೇಖಕ ಕೇಂದ್ರಿತ ಅಧ್ಯಯನಗಳಿಗಿಂತ ಹೆಚ್ಚಿನದಾಗಿ ಅವಮಾನ ಮತ್ತು ಪ್ರತಿರೋಧಗಳೆಂಬ ಆಶಯದ ಮೂಲಕ ಮುಖಾಮುಖಿ ಮಾಡಲಾಗಿದೆ.

## ೧.೧ ಅಧ್ಯಯನದ ಉದ್ದೇಶ

೧. ವ್ಯಕ್ತಿಯ ಆತ್ಮಕಥೆಯು ವ್ಯಕ್ತಿಯ ಕಥೆ ಮಾತ್ರವಾಗಿರದೆ, ಅದು ಕುಟುಂಬದ, ಊರಿನ, ಸಮುದಾಯದ ಕಥೆಯೂ ಆಗಿರುತ್ತದೆ. ಆತ್ಮಕಥೆಗಳು ಈ ನಾಲ್ಕು ಬಗೆಯ ವಿಸ್ತರಣೆಯನ್ನು ಪಡೆಯುವುದರಿಂದ ಅದೊಂದು ಸಾಂಸ್ಕೃತಿಕ ಚರಿತ್ರೆಯಾಗಿ ರೂಪುಗೊಳ್ಳುತ್ತದೆ. ಹಾಗಾಗಿ ಈ ನಾಲ್ಕು ಆಯಾಮಗಳ ಸ್ವರೂಪವನ್ನು ಅರಿಯುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

೨. ಅವಮಾನ ಮತ್ತು ಪ್ರತಿರೋಧದ ಪರಿಕಲ್ಪನೆಗಳ ಮೂಲಕ ಸಾಮಾಜಿಕ ಶ್ರೇಣೀಕರಣದ ವಿವಿಧ ಆಯಾಮಗಳನ್ನು ಹಾಗೂ ಪರಂಪರಾಗತ ಬದುಕಿನ ಶೋಷಣೆಯ ವಿವಿಧ ಮಜಲುಗಳನ್ನು ಶೋಧಿಸುವುದು. ಜೊತೆಗೆ ದಮನದ ಬದುಕಿನ ಒಳಗಡೆಯೇ ಇರುವ ಚೈತನ್ಯಶೀಲತೆ, ಮಾನವೀಯತೆಯನ್ನು ಗುರುತಿಸುವುದು.

೩. ಆತ್ಮಕಥೆಗಳನ್ನು ಅವಮಾನ ಮತ್ತು ಪ್ರತಿರೋಧಗಳೆಂಬ ಪರಿಕಲ್ಪನೆಗಳ ಮೂಲಕ ವಿಶ್ಲೇಷಿಸುವುದರಿಂದ ಆತ್ಮಕಥೆಗಳ ಮತ್ತು ಅವು ಹುಟ್ಟಿದ ಸಾಮಾಜಿಕ ಸನ್ನಿವೇಶದ ಬಗ್ಗೆ ಒಳನೋಟಗಳನ್ನು ಪಡೆಯುವುದು ಹಾಗೂ ಆತ್ಮಕಥೆಗಳ ಒಟ್ಟು ತಾತ್ವಿಕ ಸ್ವರೂಪವನ್ನು ವಿಶ್ಲೇಷಿಸುವುದು.

೪. ಅವಮಾನ ಮತ್ತು ಪ್ರತಿರೋಧಗಳು ಪ್ರಕಟವಾಗುವಾಗ ವ್ಯಕ್ತಿ ಮತ್ತು ಸಮುದಾಯದ ಪ್ರತಿಕ್ರಿಯೆಯನ್ನು ಲೇಖಕರು ಯಾವ ಭಾಷೆ, ರೂಪಕ, ಕಥನಕ್ರಮಗಳ ಮೂಲಕ ಅಭಿವ್ಯಕ್ತಿಸುತ್ತಾರೆ ಎನ್ನುವುದನ್ನು ಕಂಡುಕೊಳ್ಳುವುದು.

೫. ಕತೆ, ಕಾದಂಬರಿ, ಕಾವ್ಯ, ನಾಟಕಗಳಿಗೆ ಹೋಲಿಸಿದರೆ ಸಂಶೋಧನೆಯ ದೃಷ್ಟಿಯಿಂದ ಆತ್ಮಕಥೆಗಳು ನಿರ್ಲಕ್ಷಿತವಾದ ಪ್ರಕಾರವಾಗಿದೆ. ನಿರ್ದಿಷ್ಟ ಪರಿಕಲ್ಪನೆಯ ಮೂಲಕ ಅವುಗಳ ಅಧ್ಯಯನವನ್ನು ಮಾಡುವುದರಿಂದ ಸಿಗುವ ಒಳನೋಟಗಳನ್ನು ಕಂಡುಕೊಳ್ಳುವುದು.

## ೧.೨ ಅಧ್ಯಯನದ ಮಹತ್ವ

ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿರುವ ತರತಮ, ಪ್ರತಿರೋಧ, ಬಿಕ್ಕಟ್ಟುಗಳು, ಸಾಧ್ಯತೆಗಳು, ವಿಮೋಚನ ಹೋರಾಟಗಳು, ಮುಂತಾದವನ್ನು ಆತ್ಮಕಥೆಗಳ ಅಧ್ಯಯನಗಳ ಮೂಲಕ ತಿಳಿಯುವ ಅಗತ್ಯವಿದೆ. ಇರುವ ಸಾಮಾಜಿಕ ಬಿಕ್ಕಟ್ಟುಗಳು ಹಾಗೂ ಅವುಗಳಿಂದ ಹೊರಬರುವ ಸಾಧ್ಯತೆ ಮತ್ತು ಅಗತ್ಯವನ್ನು ಅರ್ಥಮಾಡಿಕೊಳ್ಳಲು ಆತ್ಮಕಥೆಗಳ ಮೇಲಿನ ಅಧ್ಯಯನ ಉಪಯುಕ್ತವೆನಿಸುತ್ತದೆ. ಈ ಅಧ್ಯಯನದಿಂದ ನಾಡಿನ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ನೆಲೆಯಲ್ಲಿನ ಸಮಸ್ಯೆಗಳನ್ನು ವ್ಯಕ್ತಿಗಳು ತಮ್ಮ ಬದುಕಿನಲ್ಲಿ ಮುಖಾಮುಖಿಯಾದ ಬಗೆಯನ್ನು ಅರಿಯಬಹುದಾಗಿದೆ. ಆತ್ಮಕಥೆಗಳು ಇರುವ ಸಮಾಜದ ಬಗ್ಗೆ ಮಾತ್ರ ಹೇಳುವುದಿಲ್ಲ, ಭವಿಷ್ಯದಲ್ಲಿ ಇರಬೇಕಾದ ಸಮಾಜದ ಬಗ್ಗೆ ಕೂಡ ಹೇಳುತ್ತವೆ. ಆತ್ಮಕಥೆಗಳಲ್ಲಿರುವ ಈ ಸಾಮಾಜಿಕ ನಿರೂಪಣೆಗಳನ್ನು ಅಧ್ಯಯನದಲ್ಲಿ ಚರ್ಚಿಸಿಲಾಗಿದೆ. ಆತ್ಮಕಥೆಗಳಲ್ಲಿ ದಮನಿತರ ಮೇಲಾದ ಅಪಮಾನಗಳು ಹಾಗೂ ಅವುಗಳನ್ನು ಮೀರುವ ಪ್ರತಿರೋಧಾತ್ಮಕ ಸಂಗತಿಗಳ ಚರಿತ್ರೆ ಹಲವು ವಿನ್ಯಾಸಗಳಲ್ಲಿವೆ. ಇವು ಹೊಸಬಗೆಯ ಚರಿತ್ರೆಯನ್ನು ಕಟ್ಟುವಲ್ಲಿ ಸಹಕಾರಿಯಾಗುತ್ತವೆ. ಹೀಗಾಗಿ ಅವಮಾನ ಮತ್ತು ಪ್ರತಿರೋಧಗಳ ಹಲವು ವಿನ್ಯಾಸಗಳನ್ನು ಆತ್ಮಕಥೆಗಳ ಮೂಲಕ ಅಧ್ಯಯನ ಮಾಡುವುದು ಒಂದು ಸಾಂಸ್ಕೃತಿಕ ಅಗತ್ಯದ ವಿಷಯವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಅಧ್ಯಯನ ವಿಷಯಕ್ಕೆ ಪೂರಕವಾಗಿ ಅಧ್ಯಯನದ ವ್ಯಾಪ್ತಿಯನ್ನು ಹೀಗೆ ಗುರುತಿಸಿಕೊಳ್ಳಲಾಗಿದೆ. ವ್ಯಕ್ತಿಗೆ ಆಗುವ ಸಾಮಾಜಿಕ, ಆರ್ಥಿಕ, ಲಿಂಗ, ಧಾರ್ಮಿಕ, ವೃತ್ತಿ, ಕಾರಣಗಳನ್ನಾಧರಿಸಿದ ಶೋಷಣೆಗಳಿಗೂ ಅವಮಾನ ಮತ್ತು ಪ್ರತಿರೋಧಗಳಿಗೂ ನೇರ ಸಂಬಂಧವಿದೆ. ಆದ್ದರಿಂದ ಅಧ್ಯಯನಕ್ಕೆ ಬೇಕಾದ ಮೂಲ ಆತ್ಮಕಥೆಗಳನ್ನು ಪ್ರಾದೇಶಿಕ ಹಾಗೂ ಆತ್ಮಕಥನಕಾರರ ಸಾಮಾಜಿಕ ಹಿನ್ನೆಲೆಯನ್ನಾಧರಿಸಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

| ಆತ್ಮಕಥನಕಾರರು | ಆತ್ಮಕಥೆಗಳು | ಪ್ರಾದೇಶಿಕತೆ | ಸಮುದಾಯ |
|---|---|---|---|
| ಅರವಿಂದ ಮಾಲಗತ್ತಿ | ಗೌರ್ಮೆಂಟ್ ಬ್ರಾಹ್ಮಣ | ವಿಜಯಾಪುರ | ದಲಿತ |
| ಸಿದ್ಧಲಿಂಗಯ್ಯ | ಊರುಕೇರಿ | ರಾಮನಗರ | ದಲಿತ |
| ಲಕ್ಷ್ಮಣ್. ಎಂ | ಸಂಬೋಳಿ | ಚಿಕ್ಕನಾಯಕನಹಳ್ಳಿ | ದಲಿತ |
| ಪ್ರತಿಭಾ ನಂದಕುಮಾರ್ | ಅನುದಿನದ ಅಂತರಂಗ | ಬೆಂಗಳೂರು | ಬ್ರಾಹ್ಮಣ |

| | | | |
|---|---|---|---|
| ಉಮಾಶ್ರೀ | ಬೆಂಕಿಬೆಡಗು | ತುಮಕೂರು | ನೇಕಾರ |
| ಎಸ್.ಎಲ್.ಭೈರಪ್ಪ | ಭಿತ್ತಿ | ಹಾಸನ | ಬ್ರಾಹ್ಮಣ |
| ಸ.ಜ. ನಾಗಲೋಟಿಮಠ | ಬಿಚ್ಚಿದಜೋಳಿಗೆ | ಬೆಳಗಾವಿ | ಲಿಂಗಾಯತ |
| ಸಮತಾ ದೇಶಮಾನೆ | ಮಾತಂಗಿ ದೀವಟಿಗೆ | ಕಲಬುರಗಿ | ದಲಿತ |
| ಎ.ಎಂ.ಮದರಿ | ಗೊಂದಲಿಗ್ಯಾ | ಕೊಪ್ಪಳ | ಅಲೆಮಾರಿ ಸಮುದಾಯ |
| ಬಿ.ಎ ಮೊಹಿದೀನ್ | ನನ್ನೊಳಗಿನ ನಾನು | ದಕ್ಷಿಣ ಕನ್ನಡ | ಮುಸ್ಲಿಂ |
| ಸಾ.ರಾ ಅಬೂಬಕ್ಕರ್ | ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು | ದಕ್ಷಿಣ ಕನ್ನಡ | ಮುಸ್ಲಿಂ |

ಕರ್ನಾಟಕದ ಬೇರೆ ಬೇರೆ ಭಾಗದ ಜನರಿಗೆ ಹಾಗೂ ವಿವಿಧ ಸಾಮಾಜಿಕ, ಆರ್ಥಿಕ ಹಿನ್ನೆಲೆ ಇರುವವರಿಗೆ ಅವಮಾನ ಮತ್ತು ಪ್ರತಿರೋಧಗಳು ಹಲವು ಸ್ತರ ಮತ್ತು ಆಯಾಮಗಳಲ್ಲಿ ಅನುಭವಕ್ಕೆ ಬಂದಿರುವ ಸಾಧ್ಯತೆಗಳಿವೆ. 'ಊರುಕೇರಿ' ಹಾಗೂ 'ಗೌರ್ಮೆಂಟ್ ಬ್ರಾಹ್ಮಣ' ಮುಂತಾದ ಆತ್ಮಕಥೆಗಳು ಭಾಷಿಕವಾಗಿ, ಸಾಮಾಜಿಕವಾಗಿ ಭಿನ್ನ ಭಿನ್ನವಾಗಿ ಅಭಿವ್ಯಕ್ತಗೊಂಡಿರುವುದೇ ಇದಕ್ಕೆ ಸಾಕ್ಷಿ. ಸಾಮಾಜಿಕ ಹಿನ್ನೆಲೆಯಿಂದ ನೋಡಿದರೆ ದಲಿತರಾಗಿದ್ದಕ್ಕಾಗಿ ತುಂಬಾಡಿ ರಾಮಯ್ಯ ಅವಮಾನ ಅನುಭವಿಸಿದರೆ, ಸಾಮಾಜಿಕವಾಗಿ ಮೇಲ್ಜಾತಿ ಸಮುದಾಯದಿಂದ ಬಂದ ಸ.ಜ. ನಾಗಲೋಟಿಮಠ ಬಡತನದ ಕಾರಣಕ್ಕೆ ಅವಮಾನ ಅನುಭವಿಸಿದ್ದಾರೆ. ಅದೇ ರೀತಿ ಸಾಮಾಜಿಕ ಹಿನ್ನೆಲೆಯಿಂದ ಬ್ರಾಹ್ಮಣರಾದ ಪ್ರತಿಭಾ ನಂದಕುಮಾರ್ ಅವರು ಮಹಿಳೆಯಾದ ಕಾರಣಕ್ಕೆ ಅವಮಾನ ಅನುಭವಿಸಿದ್ದಾರೆ. ಈ ಹಿಂದೆ ಕಲಾ ಪ್ರಪಂಚದಲ್ಲಿ ಕಲಾವಿದೆಯರನ್ನು ಬಹುತೇಕ ನೀತಿಗೆಟ್ಟವರಂತೆ ನೋಡಲಾಗುತ್ತಿತ್ತು. ಇದೇ ಕಾರಣಕ್ಕಾಗಿ ಉಮಾಶ್ರೀಯವರು ಅವಮಾನ ಅನುಭವಿಸಿದರೂ ತಮ್ಮ ಅದಮ್ಯ ಚೈತನ್ಯದ ಮೂಲಕ ಮತ್ತೆ ಹೊಸ ಬದುಕನ್ನು ಕಟ್ಟಿಕೊಂಡರು. ಈ ಕಾರಣದಿಂದ 'ಬೆಂಕಿ ಬೆಡಗು' ಆತ್ಮಕಥೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಜಾತಿ ವ್ಯವಸ್ಥೆಯ ಹಿಡಿತ ಹೊಂದಿರುವ ಗ್ರಾಮೀಣ ಬದುಕಿನಲ್ಲಿ ಆಗುವ ಅವಮಾನಗಳಿಗೂ ಹಾಗೂ ಅಲ್ಪಮಟ್ಟಿಗಿನ ಸಡಿಲಿಕೆ ಕಾಣುವ ನಗರ ಪ್ರದೇಶಗಳಲ್ಲಿ ಆಗುವ ಅವಮಾನಗಳಿಗು ಸಾಕಷ್ಟು ವ್ಯತ್ಯಾಸಗಳಿವೆ. ಈ ಹಿನ್ನೆಲೆಗಳಲ್ಲಿ ಪ್ರಾದೇಶಿಕವಾಗಿ ಹಾಗೂ ಸಾಮಾಜಿಕ ಹಿನ್ನೆಲೆಯನ್ನಾಧರಿಸಿ ಆತ್ಮಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಅವಮಾನ ಎನ್ನುವುದು ದಲಿತರಿಗೆ, ಮಹಿಳೆಯರಿಗೆ, ಬಡವರಿಗೆ ಮಾತ್ರ ಸೀಮಿತವಾಗದೇ ದೇಶಭಕ್ತಿಯ ಹೆಸರಲ್ಲಿ ಮುಸ್ಲಿಮರು ಪರಕೀಯತೆಗೆ ಒಳಗಾಗುವಂತಹದ್ದನ್ನು ಕಾಣಬಹುದು. ಇತರೆ ಧರ್ಮದಲ್ಲಿರುವಂತೆ ಮುಸ್ಲಿಂ, ಕ್ರೈಸ್ತ ಧರ್ಮಗಳಲ್ಲೂ ಇರುವ ಒಳ ಶ್ರೇಣೀಕರಣಗಳು ಅಪಮಾನಗಳಿಗೆ ಕಾರಣಗಳಾಗಿವೆ. ಈ ರೀತಿ ಅವಮಾನಗೊಂಡ ಲೇಖಕರು ಬರೆದ ಆತ್ಮಕಥೆಗಳ ಪ್ರಮಾಣ ಕಡಿಮೆ ಇರುವ ಕಾರಣ ಇತರೆ ಆತ್ಮಕಥನಾತ್ಮಕ ಬರಹಗಳನ್ನೂ ಆಯ್ಕೆ ಮಾಡಿಕೊಂಡು ಹಾಗೂ ಕೆಲವು ಲೇಖಕರನ್ನು ಸಂದರ್ಶನ ಮಾಡುವುದರ ಮೂಲಕ

ಅಧ್ಯಯನ ಮಾಡಲಾಗಿದೆ. ಇದರ ಜೊತೆಗೆ ಕನ್ನಡದಲ್ಲಿಯೇ ರಚನೆಯಾದ ಮತ್ತು ಅನುವಾದಿತ ಆತ್ಮಕಥೆಗಳನ್ನು ಪ್ರಾಸಂಗಿಕವಾಗಿ ಮತ್ತು ಆಶಯಕ್ಕೆ ಪೂರಕವಾಗಿ ಚರ್ಚಿಸಲಾಗಿದೆ. ಈ ಆಕರಗಳು ಪ್ರಾದೇಶಿಕ ಮತ್ತು ಸಾಮಾಜಿಕ ಹಿನ್ನೆಲೆಗಳನ್ನು ಅರ್ಥಪೂರ್ಣವಾಗಿ ವಿಸ್ತರಿಸಿವೆ.

### ೧.೪ ಅಧ್ಯಯನದ ವಿಧಾನ

೧. ಪ್ರಸ್ತುತ ಅಧ್ಯಯನವು ಪರಿಕಲ್ಪನೆ ಪ್ರಧಾನ ಅಧ್ಯಯನವಾಗಿದ್ದು, ಈ ಪರಿಕಲ್ಪನೆಗಳ ಒಳಗಡೆ ಇರುವ ವೈವಿಧ್ಯತೆ ತಿಳಿಯುವ ವಿಧಾನವನ್ನು ಅಳವಡಿಸಿಕೊಳ್ಳಲಾಗುತ್ತದೆ. ಅಂದರೆ ಅವಮಾನ ಮತ್ತು ಪ್ರತಿರೋಧಗಳೆಂಬ ಆಶಯಗಳನ್ನು ಬೇರೆ ಬೇರೆ ಆತ್ಮಕಥೆಗಾರರು ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗುವುದು. ಮೇಲ್ಜಾತಿಯೆಂದು ಆರೋಪಿಸಿರುವ ಸಮುದಾಯದಿಂದ ಬಂದ ವ್ಯಕ್ತಿಗಳು ಬಡತನದ ಕಾರಣಕ್ಕೆ ಅವಮಾನ ಅನುಭವಿಸಿದರೆ, ತುಳಿತಕ್ಕೆ ಒಳಪಟ್ಟ ಸಮುದಾಯದಿಂದ ಬಂದ ವ್ಯಕ್ತಿ ಜಾತಿ, ಬಣ್ಣ, ವೃತ್ತಿ, ಆಹಾರ ಕ್ರಮ ಮುಂತಾದ ಕಾರಣಗಳಿಗೆ ಅವಮಾನ ಅನುಭವಿಸುತ್ತಾರೆ; ಇವರಿಬ್ಬರ ಸಾಮಾಜಿಕ ಹಿನ್ನೆಲೆ ಬೇರೆ ಬೇರೆಯಾಗಿರುವುದರಿಂದ ಅವಮಾನ ಮತ್ತು ಪ್ರತಿರೋಧಗಳ ಬಗೆಗಳು ಕೂಡ ಬೇರೆ ಬೇರೆಯಾಗಿರುತ್ತವೆ. ಹೀಗಾಗಿ ಬೇರೆ ಬೇರೆ ಕಾಲಘಟ್ಟ, ಸಮುದಾಯ, ರಚನಾ ವಿನ್ಯಾಸ ಹಾಗೂ ಪ್ರದೇಶದಿಂದ ಬಂದ ಆತ್ಮಕಥೆಗಳು ಅವಮಾನ ಮತ್ತು ಪ್ರತಿರೋಧಗಳನ್ನು ಹೇಗೆ ಭಿನ್ನ ಭಿನ್ನವಾಗಿ ಕಾಣಿಸುತ್ತವೆ ಎನ್ನುವ ವೈವಿಧ್ಯತೆಗಳನ್ನು ತಿಳಿಯುವ ವಿಧಾನವನ್ನು ಅನುಸರಿಸಲಾಗುವುದು.

೨. ಅವಮಾನ ಮತ್ತು ಪ್ರತಿರೋಧದ ಆಶಯಗಳು ಯಾವ ವಿನ್ಯಾಸದಲ್ಲಿ (ವ್ಯಂಗ್ಯ, ವಿಡಂಬನೆ, ಗಂಭೀರ, ಸಂಭಾಷಣೆ) ಮತ್ತು ಯಾವ ಭಾಷಿಕ ತೀವ್ರತೆಯಲ್ಲಿ ಅಭಿವ್ಯಕ್ತಿಗೊಂಡಿವೆ ಎಂಬ ಸಂಗತಿಯನ್ನು ಆತ್ಮಕಥೆಗಳ ಕಥನಕ್ರಮದ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

೩. ವರ್ಗ ಸಂಘರ್ಷ, ದಲಿತ ಸಂಘರ್ಷ ಸಮಿತಿಯ ಜಾತಿ ವಿನಾಶದ ಹೋರಾಟಗಳು, ಸ್ತ್ರೀವಾದಿ ಚಳವಳಿಗಳು ಆತ್ಮಕಥೆಗಳ ಸೃಷ್ಟಿಗೆ ಇರುವ ಕಾರಣಗಳಲ್ಲಿ ಪ್ರಮುಖ ಕಾರಣಗಳಾಗಿವೆ. ಈ ಕಾರಣದಿಂದ ಚಳವಳಿಗಳ ಹೋರಾಟಗಳ ತಿಳುವಳಿಕೆಯ ಮೂಲಕ ಆತ್ಮಕಥೆಗಳನ್ನು ವಿಶ್ಲೇಷಿಸಲಾಗುವುದು.

೪. ಆತ್ಮಕಥೆಗಳ ಜೊತೆಗೆ ಆಯಾ ಆತ್ಮಕಥೆಗಳ ಮೇಲೆ ಬಂದ ಲೇಖನಗಳನ್ನು ಇತರೆ ಆತ್ಮಕಥೆಗಳ ಮುನ್ನುಡಿಗಳನ್ನು ಹಾಗೂ ಅನುವಾದಿತ ಆತ್ಮಕಥೆಗಳನ್ನು ಆಶಯಕ್ಕೆ ಪೂರಕವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

೫. ಕೆಲವೊಂದು ಬಾರಿ ದಲಿತ ಮಹಿಳೆಗೆ ಲಿಂಗದ ಕಾರಣಕ್ಕಾಗಿ, ಬಡತನ, ಜಾತಿ, ಬಣ್ಣ ಹಾಗೂ ಇನ್ನಿತರ ಕಾರಣಗಳಿಗಾಗಿ ಅವಮಾನಗಳು ಒಟ್ಟೊಟ್ಟಿಗೆ ಆಗುವ ಸಾಧ್ಯತೆಗಳಿರುತ್ತದೆ. ಅಂತಹ ಸಂಗತಿಗಳನ್ನು ಕುರಿತು ಅಧ್ಯಯನ ಮಾಡಲಾಗುತ್ತದೆ.

೬. ಸಾಹಿತಿ, ನಟಿ, ಹೋರಾಟಗಾರ ಎಂಬ ಆತ್ಮಕಥೆಗಾರರ ಕ್ಷೇತ್ರ ವರ್ಗೀಕರಣದ ಆಧಾರದ ಮೇಲೆ ಈ ಅಧ್ಯಯನವನ್ನು ಮಾಡುವುದಿಲ್ಲ, ಬದಲಿಗೆ ಈ ಹಿನ್ನೆಲೆಗಳು ಆಶಯಗಳ ಒಳಗಡೆಯೇ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ಗಮನಿಸಲಾಗುವುದು.

ಪ್ರಸ್ತುತ ಅಧ್ಯಯನದಲ್ಲಿ ಅಧ್ಯಾಯಗಳನ್ನು ಲೇಖಕ ಕೇಂದ್ರಿತ ಮತ್ತು ಕೃತಿ ಕೇಂದ್ರಿತ ವಿಭಾಗ ಕ್ರಮ ಮಾಡಿಕೊಳ್ಳಬಹುದು. ಆದರೆ ಲೇಖಕ ಮತ್ತು ಕೃತಿ ಕೇಂದ್ರಿತ ನೆಲೆಯಿಂದ ವಿಭಾಗ ಮಾಡಿಕೊಂಡರೆ ಪ್ರತಿರೋಧ ಮತ್ತು ಅವಮಾನದ ಆಶಯಗಳು ಲೇಖಕರಿಗೆ ಅಥವಾ ಕೃತಿಗೆ ಮಾತ್ರ ಸೀಮಿತವಾಗುತ್ತವೆ. ಈ ಆಶಯಗಳು ಲೇಖಕ ಅಥವಾ ಕೃತಿಗೆ ಸೀಮಿತವಾಗದೆ ಸಮಾಜದಲ್ಲಿರುವ ಸಾರ್ವತ್ರಿಕ ಸಂಗತಿಗಳಾಗಿರುವುದರಿಂದ, ಎಲ್ಲಾ ಲೇಖಕರನ್ನೂ ಒಟ್ಟಿಗೆ ಚರ್ಚಿಸುವ ಸಾಧ್ಯತೆ ಇರುವ ಜಾತಿ, ವರ್ಗ, ಲಿಂಗ, ಧರ್ಮ, ತೌಲನಿಕ ನೆಲೆಯಲ್ಲಿ ವಿಭಾಗ ಕ್ರಮ ಮಾಡುವುದು ಹೆಚ್ಚು ಉಚಿತವಾಗಿದೆ. ಆತ್ಮಕಥೆಗಳಲ್ಲೂ ಜಾತ್ಯತೀತ, ವರ್ಗಾತೀತ, ಲಿಂಗಾತೀತ, ಧರ್ಮಾತೀತವಾದ ಆಯಾಮಗಳುಳ್ಳ ಸಮಾಜ ನಿರ್ಮಾಣ ಮಾಡುವ ಆಶಯಗಳಿರುವ ಕಾರಣಗಳಿಂದ, ಈ ಆಶಯಗಳಲ್ಲಿರುವ ವಿಶಿಷ್ಟತೆಗಳನ್ನು ಹೆಚ್ಚು ತೌಲನಿಕ ಅಧ್ಯಯನ ವಿಧಾನವನ್ನು ಅನುಸರಿಸಿ ವಿಶ್ಲೇಷಣೆ ಮಾಡಲಾಗುತ್ತದೆ.

ಅಧ್ಯಾಯ : ಎರಡು

# ಪೂರ್ವ ಅಧ್ಯಯನಗಳ ಸಮೀಕ್ಷೆ

೨.೧. ಪ್ರಕಟಗೊಂಡ ಪುಸ್ತಕಗಳ ಸಮೀಕ್ಷೆ

೨.೨. ಸಂಶೋಧನಾ ಪ್ರಬಂಧಗಳ ಸಮೀಕ್ಷೆ

೨.೩. ಆತ್ಮಕಥೆಗಳ ಮೇಲೆ ಬಂದ ಲೇಖನಗಳ ಸಮೀಕ್ಷೆ

ಅಧ್ಯಾಯ : ಎರಡು

# ಪೂರ್ವ ಅಧ್ಯಯನಗಳ ಸಮೀಕ್ಷೆ

ಸಂಶೋಧನೆಯಲ್ಲಿ ಪೂರ್ವ ಅಧ್ಯಯನಗಳ ಸಮೀಕ್ಷೆ ಎಂಬುದು ಮುಂದಿನ ಅಧ್ಯಯನವು ಸಾಗಬೇಕಾದ ದಾರಿಯನ್ನು ನಿರ್ಮಿಸಿಕೊಳ್ಳಲು ಮತ್ತು ಖಚಿತಪಡಿಸಿಕೊಳ್ಳಲು ಆವಶ್ಯಕವಾದಂತಹ ಪೂರ್ವಪೀಠಿಕೆಯಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಆತ್ಮಕಥೆಗಳ ಮೇಲೆ ಈ ಹಿಂದೆ ನಡೆದ ಪ್ರಾತಿನಿಧಿಕ ಅಧ್ಯಯನಗಳನ್ನು ಮುಖಾಮುಖಿಯಾಗುವುದರ ಮೂಲಕ ಅಧ್ಯಯನವನ್ನು ಹೆಚ್ಚು ವಿಸ್ತರಿಸಿಕೊಳ್ಳಲಾಗುತ್ತದೆ. ಈ ಅಧ್ಯಯನಗಳ ಸಮೀಕ್ಷೆ ಮಾಡುವಾಗ ಲೇಖಕರು, ವಿಮರ್ಶಕರು, ಅವಮಾನ ಮತ್ತು ಪ್ರತಿರೋಧಗಳೆಂಬ ಪರಿಕಲ್ಪನೆಗಳಿಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಆತ್ಮಕಥೆಗಳಿಗೆ ಹೇಗೆ ಮುಖಾಮುಖಿಯಾಗಿದ್ದಾರೆ ಎಂಬುದಕ್ಕೆ ಒತ್ತುಕೊಟ್ಟು ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಪ್ರಸ್ತುತ ಅಧ್ಯಯನ ಸಮೀಕ್ಷೆಯನ್ನು ಮೂರು ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

**೨.೧. ಪ್ರಕಟಗೊಂಡ ಪುಸ್ತಕಗಳ ಸಮೀಕ್ಷೆ**

೨.೧.೧. ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ – ಬಿ.ಎಂ.ಪುಟ್ಟಯ್ಯ

**೨.೨. ಸಂಶೋಧನ ಪ್ರಬಂಧಗಳ ಸಮೀಕ್ಷೆ**

೨.೨.೧. ಲಿಂಗ–ಜಾತಿ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಆತ್ಮಕಥೆಗಳ ಸಾಮಾಜಿಕ ವಿಶ್ಲೇಷಣೆ – ಹೇಮಾವತಿ ಸಿ.ಹೆಚ್

೨.೨.೨. ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ – ಶರಣಮ್ಮ ಅ. ಗೋರೇಬಾಳ

**೨.೩. ಆತ್ಮಕಥೆಗಳ ಮೇಲೆ ಬಂದ ಲೇಖನಗಳ ಸಮೀಕ್ಷೆ**

೨.೩.೧. ದಲಿತ ಆತ್ಮಕಥೆಗಳು – ನೀಲಗಿರಿ ತಳವಾರ

೨.೩.೨. ಹಸಿವು, ಅಕ್ಷರ, ಅಭಿವ್ಯಕ್ತಿ ಮತ್ತು ಇತ್ಯಾದಿ – ವಿಠಲರಾವ್ ಗಾಯಕ್ವಾಡ್

೨.೩.೩. ಆತ್ಮಕಥೆ: ಕನ್ನಡ ಗದ್ಯದ ಅಧೋಲೋಕ – ರಹಮತ್ ತರೀಕೆರೆ

೨.೩.೪. ಕನ್ನಡ ಮಹಿಳಾ ಆತ್ಮಕಥೆಗಳು ಅನುಸಂಧಾನ – ಡಾ. ಚಂದ್ರಮತಿ ಸೋಂದಾ

೨.೩.೫. ಆತ್ಮಕಥನ: ವಾಗ್ವಾದ ಮತ್ತು ಸಂವಾದ ಮತ್ತು..... – ಬಸವರಾಜ್ ಕಲ್ಗುಡಿ

೨.೩.೬. ಬಡವರ ನಗುವಿನ ಶಕ್ತಿ – ಡಿ.ಆರ್. ನಾಗರಾಜ್

ಮೇಲ್ಕಂಡ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸುವಾಗ ಪ್ರತಿಪಾದನೆ, ಉತ್ತಮ ಅಂಶಗಳು, ಅಧ್ಯಯನದ ಕೊರತೆ, ಕೊರತೆಯನ್ನು ನೀಗಿಸಿಕೊಳ್ಳಲು ಅನುಸರಿಸಬೇಕಾದ ಕ್ರಮಗಳು ಎಂಬ ಪ್ರಮುಖ ಅಂಶಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ.

### ೨.೧. ಪ್ರಕಟಗೊಂಡ ಪುಸ್ತಕಗಳ ಸಮೀಕ್ಷೆ

#### ೨.೧.೧. ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ – ಬಿ.ಎಂ.ಪುಟ್ಟಯ್ಯ

ಆತ್ಮಕಥೆಗಳ ಅಧ್ಯಯನ ಕುರಿತಂತೆ ಗಮನಿಸಬೇಕಾದ ಮಹತ್ವದ ಕೃತಿಗಳಲ್ಲಿ ಬಿ.ಎಂ. ಪುಟ್ಟಯ್ಯ ಅವರು ಬರೆದ 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ' ಎಂಬ ಕೃತಿಯೂ ಒಂದು. ಈ ಅಧ್ಯಯನದಲ್ಲಿ ಸಂಶೋಧಕರು ಆತ್ಮಕಥೆಗಳನ್ನು ಏನು, ಏಕೆ, ಹೇಗೆ ಎಂಬ ಮೂರು ಪ್ರಶ್ನೆಗಳನ್ನಿಟ್ಟುಕೊಂಡು ಚರ್ಚೆ ಮಾಡಿದ್ದಾರೆ. ಆತ್ಮಕಥೆಗಳನ್ನು ಬಡತನ, ಜಾತಿ, ಸ್ವಾತಂತ್ರ್ಯ, ಹೋರಾಟ, ಭಾಷೆ ಹೀಗೆ ಹಲವಾರು ಪರಿಕಲ್ಪನೆಗಳ ಮೂಲಕ ಮುಖಾಮುಖಿಯಾಗುತ್ತಾ ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಗೆ ಒಳಪಡಿಸುವ ಕೆಲಸವನ್ನು ಮಾಡಿದ್ದಾರೆ. "ಕರ್ನಾಟಕವು ಈ ಶತಮಾನದಲ್ಲಿ ಬೇರೆ ಬೇರೆ ವರ್ಗದ, ವಿಭಿನ್ನ ಮನೋಧರ್ಮದ ಜನರು ತಮ್ಮ ಬದುಕನ್ನು, ಏಕಕಾಲಕ್ಕೆ ಕರ್ನಾಟಕದ ಬದುಕನ್ನು ಹೇಗೆ ಕಂಡಿದ್ದಾರೆ ಎಂಬುದರ ಚರ್ಚೆ ಈ ಅಧ್ಯಯನದ ಸ್ವರೂಪವಾಗಿದೆ"[೧] ಎಂದು ಸ್ಪಷ್ಟಪಡಿಸುತ್ತಾರೆ. ಆತ್ಮಕಥೆಗಳ ಮೂಲಕ ಹಲವು ವ್ಯಕ್ತಿಗಳು ಕರ್ನಾಟಕವನ್ನು ಕಂಡ ಹಲವು ಆಯಾಮಗಳನ್ನು ಚರ್ಚಿಸುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಪ್ರಮುಖ ಪ್ರತಿಪಾದನೆಗಳನ್ನು ಈ ಕೆಳಗಿನಂತೆ ಗಮನಿಸಹುದಾಗಿದೆ.

ಆತ್ಮಕಥೆಗಳು ಕೇವಲ ವ್ಯಕ್ತಿ ಕೇಂದ್ರಿತ ದಾಖಲೆಗಳಲ್ಲ ಎಂಬುದು ಅಧ್ಯಯನಕಾರರ ಮುಖ್ಯ ಪ್ರತಿಪಾದನೆಯಾಗಿದೆ. ಈ ಅಭಿಪ್ರಾಯವು ವಾಸ್ತವವೂ ಆಗಿದೆ. ವ್ಯಕ್ತಿ ಬದುಕುವುದು ಸಮಾಜದಲ್ಲಿ. ಸಮಾಜದಲ್ಲಿ ಬದುಕಿದ ವ್ಯಕ್ತಿ ಸಮೂಹದೊಂದಿಗೆ ವ್ಯವಹರಿಸಲೇಬೇಕು. ಹೀಗಾಗಿ ವ್ಯಕ್ತಿಯು ಬರೆದ ಆತ್ಮಕಥೆ ಹಲವು ಸಾಮೂಹಿಕ ಸಂಗತಿಗಳ ಭಾಷಿಕ ಅಭಿವ್ಯಕ್ತಿಯಾಗಿರುತ್ತದೆ. ಉಮಾಶ್ರೀಯವರ 'ಬೆಂಕಿ ಬೆಡಗು' ಆತ್ಮಕಥೆಯು ಕನ್ನಡ ಸಿನಿಮಾ ಜಗತ್ತಿನ ಅನೇಕ ವಿಷಯಗಳ ಬಗ್ಗೆ ಹೇಳುತ್ತದೆ. ಹೀಗಾಗಿ ಆತ್ಮಕಥೆಗಳು ಕೇವಲ ವ್ಯಕ್ತಿ ಕೇಂದ್ರಿತ ದಾಖಲೆಗಳಾಗದೆ ಅವು ಸಮಷ್ಟಿ ಅನುಭವಗಳ ಅಭಿವ್ಯಕ್ತಿಯಾಗಿರುತ್ತದೆ. ಕಥೆ, ಕಾದಂಬರಿಗಳಂತೆ ಆತ್ಮಕಥೆಗಳು ಕೂಡ ಸೃಜನಶೀಲ ಕೃತಿಗಳಾಗಿವೆ. "ಆತ್ಮಕಥೆಗಳು ಕೇವಲ ಗತಕಾಲದ ನಿರ್ದಿಷ್ಟತೆಯಲ್ಲಿ ಗಿರಕಿ ಹೊಡೆಯುವ, ವಿಶ್ರಾಂತಿ ಪಡೆಯುವ ಜಡ ಬರಹಗಳಾಗಿರುವುದಿಲ್ಲ..........ಗತವನ್ನು ವರ್ತಮಾನದಲ್ಲಿ ಪರಿಗ್ರಹಿಸುವ ಮತ್ತು ಅದೇ ಕಾಲಕ್ಕೆ ಗತಕಾಲದ ಬೆಳಕಿನಲ್ಲಿ ವರ್ತಮಾನವನ್ನು ವ್ಯಾಖ್ಯಾನಿಸುವ ಮತ್ತು ಮೌಲ್ಯಿಕರಿಸುವ ಸೃಜನಶೀಲವಾದ ಕೆಲಸವಾಗಿದೆ"[೨] ಎಂದು ಪುಟ್ಟಯ್ಯನವರು ಹೇಳುತ್ತಾರೆ. ಆತ್ಮಕಥನಕಾರರು ಬದುಕನ್ನು ನಿರೂಪಿಸುವಾಗ ಯಥಾವತ್ತು ನಿರೂಪಿಸದೆ ಅದಕ್ಕೊಂದು ಕಲಾತ್ಮಕ ಚೌಕಟ್ಟನ್ನು ನೀಡಿ ಅಭಿವ್ಯಕ್ತಿಸುತ್ತಾರೆ.

ಈ ಕಾರಣಕ್ಕೆ ಎಸ್.ಎಲ್.ಭೈರಪ್ಪನವರ 'ಭಿತ್ತಿ' ಆತ್ಮಕಥೆಯು ಏಕಕಾಲಕ್ಕೆ ಆತ್ಮಕಥೆಯಂತೆಯೂ, ಕಾದಂಬರಿಯಂತೆಯು ಓದಿಸಿಕೊಂಡು ಹೋಗುತ್ತದೆ. ನಿರೂಪಕರು ತಮ್ಮ ಅನುಭವವನ್ನು ಭಾಷಿಕವಾಗಿ ಕಟ್ಟುವಾಗ ಕಲಾತ್ಮಕತೆಯೆಂಬ ಜೀವ ತುಂಬಬೇಕಾಗುತ್ತದೆ. ಇದು ಓದುಗರನ್ನು ಏಕಕಾಲಕ್ಕೆ ಕುತೂಹಲ, ಆಸಕ್ತಿ, ಮನರಂಜನೆಯ ಜೊತೆಗೆ ಆಲೋಚನೆ ಮಾಡುವಂತೆ ಪ್ರೇರೇಪಿಸುತ್ತದೆ. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆ ಕುರಿತಂತೆ ರಹಮತ್ ತರೀಕೆರೆಯವರು "ಮಾಲಗತ್ತಿಯವರದು ವೇದನೆ ತುಂಬಿದ ದಾರ್ಶನಿಕನಂತೆ ವಿವೇಚನೆ ಮಾಡುವ ಗಂಭೀರ ಬರಹವಾಗಿದೆ. ಅವರ ಬರಹದ ಶಕ್ತಿ ಇರುವುದು ಅತ್ಯಂತ ವಿಶಿಷ್ಟವಾದ ಅನುಭವಗಳಲ್ಲಷ್ಟೇ ಅಲ್ಲ. ಆ ಅನುಭವಗಳನ್ನು ನಿರೂಪಿಸಲು ಬಳಸುವ ಚಿತ್ರಮಯ ಭಾಷೆಯಲ್ಲಿ"[೩] ಎಂದು ಹೇಳಿರುವುದು ಲೇಖಕರ ಭಾಷಾ ಪ್ರೌಢಿಮೆ ಮತ್ತು ನಿರೂಪಿತ ಅನುಭವಗಳು ಓದುಗರನ್ನು ಸೆರೆಹಿಡಿದಿದೆ ಎಂಬುದನ್ನು ಸಾಕ್ಷೀಕರಿಸುತ್ತದೆ. ಹೀಗಾಗಿ ಆತ್ಮಕಥೆಗಳು ಒಂದು ಬಗೆಯ ಸೃಜನಶೀಲ ಬರಹಗಳೇ ಆಗಿವೆ.

ಬ್ರಾಹ್ಮಣೇತರ ಲೇಖಕರಲ್ಲಿ ಜಾತಿ ಆಚರಣೆಯ ವಿವರಣೆ ಮತ್ತು ಅದರಿಂದಾಗುವ ಅವಮಾನಗಳ ಬಗ್ಗೆ ಚರ್ಚಿಸಲಾಗಿದೆ. ಅದನ್ನು ನಾವು ಕುವೆಂಪುರವರು ಸಂಸ್ಕೃತ ಕಲಿಯುವಲ್ಲಿ ಆದ ಅವಮಾನದಲ್ಲಿ ಗುರುತಿಸಬಹುದು. ಇಲ್ಲಿ ಸಮುದಾಯ ಮತ್ತು ಭಾಷೆಗಳೆರಡೂ ಮಿಳಿತವಾಗಿ ಕುವೆಂಪುರವರು ಅವಮಾನ ಅನುಭವಿಸಿರುವುದನ್ನು ಕಾಣಬಹುದು. ಸಿದ್ಧಲಿಂಗಯ್ಯನವರ ತಂದೆ ಹೊಲದಲ್ಲಿ ಎತ್ತಿನಂತೆ ನೊಗ ಊರುವುದು ಮತ್ತು 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಲ್ಲಿ ಒಂದೊತ್ತಿನ ಕೂಳಿಗಾಗಿ ದಲಿತರು ಮಾಡುವ ಹೋರಾಟವು ಬ್ರಾಹ್ಮಣೇತರ ಲೇಖಕರಲ್ಲಿ ಜಾತಿ ಕೇಂದ್ರಿತ ಅವಮಾನಗಳು ಹೇಗೆ ನಡೆದಿವೆ ಎಂಬುದರ ಅರಿವು ಉಂಟಾಗುತ್ತದೆ. ಬಿ.ಎಂ.ಪುಟ್ಟಯ್ಯನವರು ಗುರುತಿಸಿರುವ ಜಾತಿಯ ಒಳ ವಿನ್ಯಾಸಗಳು ಅವಮಾನಗಳ ಒಳ ವಿನ್ಯಾಸಗಳನ್ನು ಗುರುತಿಸುವುದಕ್ಕೂ ಸಹಾಯವಾಗುತ್ತವೆ. ಇಲ್ಲಿ ಮೂರು ಬಗೆಯ ಜಾತಿ ವಿನ್ಯಾಸಗಳಿವೆ.

* ಬ್ರಾಹ್ಮಣರು ಬ್ರಾಹ್ಮಣೇತರರರನ್ನು ನೋಡುವ ಬಗೆ.
* ಬ್ರಾಹ್ಮಣೇತರರು ಬ್ರಾಹ್ಮಣರನ್ನು ನೋಡುವ ಬಗೆ.
* ದಲಿತರು ಸವರ್ಣೀಯರನ್ನು ನೋಡುವ ಬಗೆ.

ಈ ಮೂರೂ ಸಂಗತಿಗಳು ಅವಮಾನದ ಹಲವು ಸ್ವರೂಪಗಳನ್ನು ಬಿಚ್ಚಿಡುತ್ತವೆ. ಕೆಲವು ಬ್ರಾಹ್ಮಣ ಲೇಖಕರು ದಲಿತರ ಮೇಲಾಗುವ ಅಸ್ಪೃಶ್ಯತೆಯ ಅವಮಾನಗಳನ್ನು ಸಹಜ ಎಂಬಂತೆ ವಿಶ್ಲೇಷಿಸಿದ್ದಾರೆ. ಎ.ಎನ್ ಮೂರ್ತಿರಾಯರು ಜಾತೀಯತೆಯ ಬಗ್ಗೆ ಹೀಗೆ ಹೇಳಿದ್ದಾರೆ. "ಹೊಳೆಯಲ್ಲಿ ಕೂಡ ಬ್ರಾಹ್ಮಣರು ಸ್ನಾನ ಮಾಡುವ ಸ್ಥಳಕ್ಕೂ ಅಬ್ರಾಹ್ಮಣರು ಮಾಡುವ ಸ್ಥಳಕ್ಕೂ ನಾಲ್ಕಾರೂ ಗಜದಷ್ಟು ದೂರ ಇವೆಲ್ಲ ಅಲಿಖಿತ ನಿಯಮಗಳು. ಆದರೂ ಇದಕ್ಕಾಗಿ ಆಗಿನ ಜನರನ್ನು

ದೂರುವುದು ಸರಿಯಲ್ಲ, ಸಮಾಜದ ಬೆಳವಣಿಗೆಯಲ್ಲಿ ಅಂಥದೊಂದು ಘಟ್ಟ ಎಲ್ಲ ದೇಶಗಳಲ್ಲೂ ಕಾಣುತ್ತದೆ. ಭಾರತಕ್ಕೆ ವಿಶಿಷ್ಟವಾದದ್ದಲ್ಲ" ಈ ಮೇಲಿನ ಮೂರ್ತಿರಾಯರ ಹೇಳಿಕೆಯಲ್ಲಿ ಅಸ್ಪೃಶ್ಯತೆ ಎಂಬುದು ದಲಿತರಿಗೆ ಮಾಡುವ ಅವಮಾನದ ಸಂಕೇತ ಎಂಬ ಆಲೋಚನೆಯೇ ಇಲ್ಲದಿರುವ ಪರಿಸ್ಥಿತಿ ಮತ್ತು ಅವಮಾನದ ಕುರಿತು ತಟಸ್ಥ ನೀತಿಯನ್ನು ಅನುಸರಿಸುತ್ತಿರುವ ಸಾಂಸ್ಕೃತಿಕ ಜಾಣತನವನ್ನು ಕಾಣಬಹುದು. ಬ್ರಾಹ್ಮಣೇತರ ಲೇಖಕರು ಬ್ರಾಹ್ಮಣರ ಶೋಷಣೆಯನ್ನು ವಿರೋಧಿಸುತ್ತಲೇ, ತಾವು ಕೂಡ ದಲಿತರಿಗೆ ಶೋಷಣೆ ಮಾಡುತ್ತಿರುವುದನ್ನು ಮರೆಮಾಚಿರುವುದನ್ನು ಕಾಣಬಹುದು. ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' ಆತ್ಮಕಥೆಯ ಸಂಸ್ಕೃತ ಕಲಿಯುವ ಸನ್ನಿವೇಶವಾಗಿರಬಹುದು ಹಾಗೂ ಬಸವರಾಜ ಕಟ್ಟೀಮನಿ ಅವರು ತಮ್ಮ ಬ್ರಾಹ್ಮಣ ಗೆಳೆಯನ ಮನೆಯ ಹೊರಗಡೆ ನಿಂತು ಊಟ ಮಾಡಿದ ಸಂಗತಿಯಾಗಿರಬಹುದು. ಈ ಎರಡೂ ಸನ್ನಿವೇಶಗಳನ್ನು ಅಭಿವ್ಯಕ್ತಿಸುವಾಗ ಆತ್ಮಕಥನಕಾರರು ತಮ್ಮ ಸಮುದಾಯಗಳು ಕೂಡ ದಲಿತರನ್ನು ಶೋಷಿಸುತ್ತಿರುವ ಹಲವು ಬಗೆಗಳ ಬಗ್ಗೆ ಚರ್ಚಿಸುವುದಿಲ್ಲ.

ದಲಿತರಿಗೆ ಅವಮಾನಿಸುವವರು ಬ್ರಾಹ್ಮಣರಾದರೇನು, ಲಿಂಗಾಯಿತರಾದರೇನು, ಒಕ್ಕಲಿಗರಾದರೇನು ಎಲ್ಲರೂ ಒಂದೇ ಎಂಬುದು ಅಧ್ಯಯನಕಾರರು ಗುರುತಿಸಿರುವ ಸೂಕ್ಷ್ಮ ಸಂಗತಿಯಾಗಿದೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಬರುವ 'ನಾಳಿನ ಕಸದ ಪಾಳಿ ಮಾಲಕತ್ತಿ' ಎಂದು ಶಾಲಾ ಬೋರ್ಡಿನ ಮೇಲೆ ಬರೆಯುವ ಸನ್ನಿವೇಶದಲ್ಲಿ ಅವಮಾನಿಸಿದ ವ್ಯಕ್ತಿಯ ಜಾತಿಯು ಎಲ್ಲೂ ಪ್ರಸ್ತಾಪವಾಗಿಲ್ಲ. ದಲಿತರಿಗೆ ಅವಮಾನಿಸುವರೆಲ್ಲರೂ ಒಂದೇ ಆಗಿದ್ದಾರೆ. ಮತ್ತೊಂದು ಬಹುಮುಖ್ಯವಾದ ಅಂಶವೆಂದರೆ ಶೋಷಣೆ ಎಂದರೆ ಸಾಕು ಬ್ರಾಹ್ಮಣರನ್ನು ಮಾತ್ರ ವಿಮರ್ಶಿಸುವ ಬಹುತೇಕ ಮಾದರಿಗಳನ್ನು ನೋಡಿದ್ದೇವೆ. ಶೋಷಣೆಯ ಮೂಲ ಬ್ರಾಹ್ಮಣರಾದರೂ, ಲಿಂಗಾಯಿತ, ಒಕ್ಕಲಿಗ ಹಾಗೂ ಇತರ ಸಮುದಾಯಗಳಲ್ಲಿರುವ ಬ್ರಾಹ್ಮಣ್ಯವೂ, ಆರ್ಥಿಕ ದರ್ಪವೂ ದಲಿತರು ಇಂದಿಗೂ ಅವಮಾನಗಳನ್ನು ಅನುಭವಿಸುವುದಕ್ಕೆ ಕಾರಣವಾಗಿವೆ. ಬ್ರಾಹ್ಮಣೇತರ ಶೂದ್ರರು ತಮ್ಮ ಮೇಲಿನ ಬ್ರಾಹ್ಮಣಿಕೆಯ ಶೋಷಣೆಯನ್ನು ವಿರೋಧಿಸಲು ದಲಿತರನ್ನು ಬಳಸಿಕೊಂಡು, ಈ ಮೂಲಕ ಇಂದಿಗೂ ಸಹಿತ ಶೋಷಕರೆಂದರೆ ಬ್ರಾಹ್ಮಣರೇ ಎನ್ನುವಂತಹ ನಂಬಿಕೆ ಸೃಷ್ಟಿ ಮಾಡಲಾಗಿದೆ. ತಾವು ಹಳ್ಳಿಗಳಲ್ಲಿ, ಇನ್ನಿತರ ಕಡೆಗಳಲ್ಲಿಯೂ ಶೋಷಿಸುವುದನ್ನು ಮರೆಮಾಚಿದ್ದಾರೆ. ಶೋಷಕರೆಂದರೆ ಪುರೋಹಿತಶಾಹಿಗಳೇ ಎಂಬ ಗಿಳಿಪಾಠವನ್ನು ಚರ್ಚೆಗಳಲ್ಲಿ ಹೇಳಲಾಗುತ್ತಿದೆ. ಇವುಗಳಾಚೆಗೆ ಇನ್ನೂ ಒಂದು ಹೆಜ್ಜೆ ಮುಂದುವರಿದು ನೋಡುವುದಾದರೆ ಅಸ್ಪೃಶ್ಯರು ಕೇವಲ ಬ್ರಾಹ್ಮಣರ, ಲಿಂಗಾಯಿತರ, ಒಕ್ಕಲಿಗರಿಂದ ಮಾತ್ರ ಶೋಷಣೆಗೊಳಗಾಗದೆ ಹಿಂದುಳಿದ ವರ್ಗಗಳಿಂದಷ್ಟೆ ಅಲ್ಲದೆ ದಲಿತರೊಳಗಡೆಯೇ ಅವಮಾನಿಸುವ ಶ್ರೇಣೀಕರಣಗಳಿರುವುದನ್ನು ಪ್ರಸ್ತುತ ಅಧ್ಯಯನದ ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಬಹುದಾಗಿದೆ.

ಅಧ್ಯಯನದ ಕೊರತೆಗಳನ್ನು ಗಮನಿಸುವುದಾದರೆ 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ' ಎಂಬ ಶೀರ್ಷಿಕೆಯಲ್ಲಿಯೇ ಬಹುತ್ವವಿದೆ, ಆದರೆ ಅಧ್ಯಯನದ ಆ ಸಮಯಕ್ಕಾಗಲೇ ಪ್ರಕಟವಾಗಿದ್ದ ಮಹಿಳಾ ಆತ್ಮಕಥೆಗಳನ್ನು ಕುರಿತು ಅಧ್ಯಯನದಲ್ಲಿ ಚರ್ಚಿಸದೆ ಹೋಗಿರುವುದು. ಮಹಿಳೆಯರು ಆತ್ಮಕಥೆ ಬರೆಯುವುದೇ ಸವಾಲಿನ ಮತ್ತು ಅನೇಕ ಸಮಸ್ಯೆಗಳನ್ನು ತಂದೊಡ್ಡುವ ಕೆಲಸವಾಗಿರುವುದು ಸಾಮಾಜಿಕ ವಾಸ್ತವವಾಗಿದೆ. ಇಂತಹ ಸಂದರ್ಭಗಳ ನಡುವೆಯೂ ಮತ್ತು ಆ ಸಂದರ್ಭಕ್ಕಾಗಲೇ ಪ್ರಕಟವಾಗಿದ್ದ ವಾಸಂತಿ ಪಡುಕೋಣೆಯವರ 'ಜೀವನ ಹೋರಾಟ' ಅನುಪಮಾ ನಿರಂಜನರವರ 'ನೆನಪು ಸಿಹಿಕಹಿ' ಇನ್ನೂ ಮುಂತಾದ ಆತ್ಮಕಥೆಗಳ ಬಗ್ಗೆ ಲೇಖಕರು ವಿಶ್ಲೇಷಿಸುವ ಆವಶ್ಯಕತೆಯಿತ್ತು.

ಬ್ರಾಹ್ಮಣರು, ಬ್ರಾಹ್ಮಣೇತರರನ್ನು ನೋಡುವ ಕ್ರಮ, ಬ್ರಾಹ್ಮಣೇತರರು, ಬ್ರಾಹ್ಮಣರನ್ನು ನೋಡುವ ಕ್ರಮ, ದಲಿತರ ಮೂಲಕ ಬ್ರಾಹ್ಮಣರನ್ನು, ಬ್ರಾಹ್ಮಣೇತರನ್ನು ನೋಡುವ ಕ್ರಮ ಹೀಗೆ ಮೂರು ನೆಲೆಯಲ್ಲಿ ಜಾತಿ ವಿನ್ಯಾಸಗಳನ್ನು ಗುರುತಿಸುವ ಅಧ್ಯಯನಕಾರರು ದಲಿತರೊಳಗಡೆಯೇ ಇರಬಹುದಾದ ಶ್ರೇಣೀಕರಣ, ಅವಮಾನಗಳನ್ನು ಎಲ್ಲಿಯೂ ಉಲ್ಲೇಖಿಸುವುದಿಲ್ಲ. ಸ್ಪೃಶ್ಯ-ಅಸ್ಪೃಶ್ಯತೆ ಎಂಬುದು ಕೇವಲ ದಲಿತ, ದಲಿತೇತರರಿಗೆ ಮಾತ್ರ ಸೀಮಿತವಾಗಿಲ್ಲ. ದಲಿತರೊಳಗೆ ಸ್ಪೃಶ್ಯತೆ-ಅಸ್ಪೃಶ್ಯತೆ ಇರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ತುಂಬಾಡಿ ರಾಮಯ್ಯನವರ 'ಮಣೆಗಾರ' ಆತ್ಮಕಥೆಯಲ್ಲಿ ಲೇಖಕರು "ನಮ್ಮ ಹಳ್ಳಿಯಲ್ಲಿ ಮಣೆಗಾರರಿಗೆ ಒಂದು ಬಾವಿ, ಹೊಲೆಯರಿಗೆ ಒಂದು ಬಾವಿ ಇತ್ತು, ಅವರ ಬಾವಿಯಲ್ಲಿ ನಾವಾಗಲಿ ಅಥವಾ ನಮ್ಮ ಬಾವಿಯಲ್ಲಿ ಅವರಾಗಲೀ ಎಂದೂ ನೀರು ಸೇದುವಂತಿರಲಿಲ್ಲ ಹೊಲೆಯರ ಹೆಂಗಸರು ನಮ್ಮ ಹಟ್ಟಿಗೆ ಕೂಲಿಯಾಳುಗಳನ್ನು ಕರೆಯಲು ಬಂದಾಗ, ಕೆಂಡದ ಮೇಲೆ ನಡೆದು ಬರುವಂತೆ ಬಂದು ಹೋಗುತ್ತಿದ್ದರು, ತಮ್ಮ ಹಟ್ಟಿಗೆ ಹೋದ ಕೂಡಲೇ ಸಗಣಿ-ಗಂಜಲ ತುಳಿದು ತಮ್ಮ ಕಾಲುಗಳನ್ನು ಪಾವನವಾಗಿಸಿಕೊಳ್ಳುತ್ತಿದ್ದರು"[೫] ಎಂದು ಬರೆದುಕೊಳ್ಳುತ್ತಾರೆ. ಈ ಉಲ್ಲೇಖಿತ ಸಾಲುಗಳು ದಲಿತರೊಳಗಡೆಯೇ ಇರಬಹುದಾದ ಜಾತಿ ಶ್ರೇಣೀಕರಣವನ್ನು ಸಾಕ್ಷೀಕರಿಸುತ್ತಿದೆ. ದಲಿತರೊಳಗಡೆಯೇ ಇರುವಂತಹ ಇಂತಹ ತಾರತಮ್ಯಗಳು ಗಮನಾರ್ಹ ಅಂಶಗಳಾಗಿವೆ.

'ಊರುಕೇರಿ' ಆತ್ಮಕಥೆಗೆ ಡಿ.ಆರ್.ನಾಗರಾಜ್‌ರವರು ಬರೆದಿರುವ ಹಿನ್ನುಡಿಗೆ ಪ್ರತಿಕ್ರಿಯೆ ನೀಡುತ್ತ ಡಿ.ಆರ್ ನಾಗರಾಜರವರು ಬಡತನವನ್ನು ಆರ್ಥಿಕೇತರ ಆಯಾಮದಲ್ಲಿ ವೀಕ್ಷಿಸುವುದನ್ನು ಒಪ್ಪದೆ ಪುಟ್ಟಯ್ಯನವರು ಟೀಕಿಸುತ್ತಾರೆ. "ರಾಜಕೀಯ, ಆರ್ಥಿಕೇತರ ಹಿನ್ನೆಲೆಯಲ್ಲಿ ಬಡತನವನ್ನು ಕಾಣಬೇಕೆಂಬುದು ಅವರ ನಿಲುವು ಮತ್ತು ಸಾಮಾಜಿಕ, ರಾಜಕೀಯ, ಆರ್ಥಿಕ ಹಿನ್ನೆಲೆಯಲ್ಲಿ ನೋಡುವುದು ಬಡವನ ಸಮಗ್ರ ಬದುಕನ್ನು ವೀಕ್ಷಿಸಿದಂತೆ, ವರ್ಗ ದೃಷ್ಟಿಕೋನವನ್ನು ವರ್ಗಾಯಿಸುವುದು ನಾಜೂಕಾದ ಪಾರಂಪರಿಕ ವಿಧಾನ ಹಾಗಾಗಿ ಡಿ.ಆರ್ ನಾಗರಾಜ್ ಕಮ್ಯುನಿಸಂನ ಪಕ್ಕಾ ವಿರೋಧಿ ಮತ್ತು ಬಡತನ ಯಥಾಸ್ಥಿತಿಯಲ್ಲಿ ಮುಂದುವರಿಯಬೇಕು ಎಂದು ನಯವಾಗಿ ವರ್ಣಿಸುವ

ಸಾಮ್ರಾಜ್ಯಶಾಹಿ ವಕಾಲತ್ತುದಾರ"[೬] ಎನ್ನುತ್ತಾರೆ. ಆದರೆ ಈ ಟೀಕೆ ಬಹಳ ಅವಸರದ್ದೇನೋ ಎನಿಸುತ್ತದೆ. ಡಿ.ಆರ್. ನಾಗರಾಜ್‌ರವರು ಆತ್ಮಕಥೆಯಲ್ಲಿ ನಗುವಿನ ಶಕ್ತಿ ಗುರುತಿಸುವುದಕ್ಕೆ ಮೂರು ಕಾರಣಗಳಿವೆ. ದಲಿತ ಸಾಹಿತ್ಯವನ್ನು ಕೇವಲ ಶೋಷಣೆ, ಅವಮಾನಗಳ ಹಿನ್ನೆಲೆಯಲ್ಲಿ ನೋಡಲಾಗುತ್ತಿತ್ತು, ಹಾಗಾಗಿ ದಲಿತ ಸಾಹಿತ್ಯದೊಳಗೂ ಕಲಾತ್ಮಕತೆ, ಪ್ರತಿರೋಧವಿದೆ ಎಂಬುದನ್ನು ಗುರುತಿಸುವುದು ಮೊದಲನೆಯ ಕಾರಣವಾದರೆ. 'ಊರುಕೇರಿ' ಆತ್ಮಕಥೆಯ ನಿರೂಪಣ ವಿಧಾನ ಕೂಡ ವ್ಯಂಗ್ಯದಿಂದ ಕೂಡಿರುವುದರಿಂದಲೇ ಹೀಗೆ ನೋಡಿರುವ ಸಾಧ್ಯತೆಗಳಿರುವುದು ಎರಡನೆಯ ಕಾರಣವಾಗಿದೆ. ಜೊತೆಗೆ ನಗು ಕೂಡ ಪ್ರತಿರೋಧವಾಗಬಲ್ಲದು ಎಂಬ ಕಾರಣವು ಕೂಡ ಡಿ.ಆರ್. ಅವರ ವ್ಯಾಖ್ಯಾನಕ್ಕೆ ಪ್ರೇರಣೆಯಾಗಿರಬಹುದು. ಹೀಗೆ ಮೂರು ಕಾರಣಗಳಿಂದ ನಾಗರಾಜ್ ಅವರು ಆ ರೀತಿಯಾಗಿ ಹಿನ್ನುಡಿ ಬರೆದಿರಬಹುದೇ ಹೊರತು ಸಾಮಾಜಿಕ, ಆರ್ಥಿಕ ಕಾರಣಗಳಿಂದ ನೋಡಲೇಬಾರದೆಂಬ ನಿಲುವಿನಿಂದಲ್ಲ. ಹೀಗಾಗಿ ಪುಟ್ಟಯ್ಯನವರು ಏಕಮುಖವಾಗಿ ಟೀಕಿಸುವುದು ದುಡುಕಿನದ್ದಾಗಿದೆ.

ಆತ್ಮಕಥನಕಾರರು ತಮ್ಮ ವೈಯಕ್ತಿಕ ಬಡತನದ ಬಗ್ಗೆ ಹೇಳುತ್ತಾ ಇತರರ ಬಡತನದ ಬಗ್ಗೆ ಹೇಳಿಲ್ಲ ಹಾಗೂ ಇಂದಿಗೂ ಬಡತನ ಇದೆ ಎಂಬುದನ್ನು ಹೇಳಿಲ್ಲ ಎಂಬ ಆರೋಪವನ್ನು ಪುಟ್ಟಯ್ಯನವರು ಮಾಡಿದ್ದಾರೆ. ಆತ್ಮ ಇತರರೊಡನೆ ವ್ಯವಹರಿಸಿದಾಗ ಮಾತ್ರ ಕಥೆ ನಿರ್ಮಾಣವಾಗುತ್ತದೆ. ಮನುಷ್ಯನೊಬ್ಬನ ಸುಖ, ಸಂತೋಷ, ದುಃಖ ದುಮ್ಮಾನಗಳು ಕವಿ ಬೇಂದ್ರೆಯವರ 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ' ಎಂಬ ಕವಿತೆಯಂತೆ ತಕ್ಷಣ ಪ್ರತ್ಯಕ್ಷವಾಗುವಂತಹದ್ದಲ್ಲ, ಬದಲಿಗೆ ಸಮಾಜದೊಂದಿಗೆ ವ್ಯಕ್ತಿಯ ಸಂಬಂಧದಿಂದಾದ ಉತ್ಪನ್ನಗಳಾಗಿವೆ. ಹೀಗಾಗಿ ಆತ್ಮಕಥನಕಾರರ ನೋವು ಕೇವಲ ಅವರುಗಳಿಗೆ ಮಾತ್ರ ಸೀಮಿತವಾಗಿರುವುದಿಲ್ಲ. ಅದರಲ್ಲೂ ದಲಿತ ಆತ್ಮಕಥೆಗಳಲ್ಲಿ ಆತ್ಮಕಥನಕಾರರ ನೋವು ಇಡೀ ಸಮುದಾಯದ ನೋವಾಗಿರುತ್ತದೆ. ಆತ್ಮಕಥೆಗಳು ಕೂಡ ಸೂಕ್ಷ್ಮವಾದ ಸೃಜನಶೀಲ ಅಭಿವ್ಯಕ್ತಿಯನ್ನು ಒಳಗೊಂಡಿರುವ ಕಾರಣ ಬಡತನ ಇಂದಿಗೂ ಇದೆ ಮತ್ತು ಇತರರಿಗೂ ಇದೆ ಎಂಬುದನ್ನು ವಾಚ್ಯವಾಗಿಯೇ ಹೇಳಬೇಕಾಗಿಲ್ಲ. ಆತ್ಮಕಥನಕಾರರು ಅವಮಾನಕ್ಕೆ ಒಳಗಾದವರ ಪ್ರತಿನಿಧಿಯಾಗಿಯೇ ಅದನ್ನು ವ್ಯಕ್ತಪಡಿಸಿರುತ್ತಾರೆ. ಸಿದ್ಧಲಿಂಗಯ್ಯ ಅವರ 'ಊರುಕೇರಿ' ಆತ್ಮಕಥೆಯಲ್ಲಿ "ಆ ಜಮೀನಿನಲ್ಲಿ ಐನೋರ ಚಂದವಾದ ಮನೆ, ದೊಡ್ಡದಾದ ಬಾವಿ, ಪಂಪ್‌ಸೆಟ್ ಮನೆ ಇದ್ದವು. ಈ ಬಾವಿಯಿಂದ ಅವರ ಹೊಲಗದ್ದೆಗಳಿಗೆ ನೀರು ಹರಿಯುತ್ತಿತ್ತು. ನಮ್ಮ ಕೇರಿಯ ಜನಕ್ಕೆ ಕುಡಿಯಲು ನೀರು ಸಿಕ್ಕರೆ ಅದೇ ದೊಡ್ಡ ಸಂಗತಿ"[೭] ಎಂಬ ವಿವರಣೆಯೊಂದಿದೆ. ಈ ವಿವರಣೆಯು ಶೋಷಣೆಯು ತನಗಷ್ಟೇ ಸೀಮಿತವಾಗದೆ ಇಡೀ ದಲಿತ ಸಮುದಾಯಕ್ಕೆ ಸೇರಿದೆ ಎಂಬುದನ್ನು ಆತ್ಮಕಥೆ ಧ್ವನಿಸುತ್ತಿದೆ. 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಲ್ಲಿ ಲೇಖಕರು ತಮ್ಮ ಸಮುದಾಯಕ್ಕಿಂತ ತಳಮಟ್ಟಕ್ಕೆ ತಳ್ಳಲ್ಪಟ್ಟ ಸಮುದಾಯಗಳ ಬಗ್ಗೆ ಹೇಳುತ್ತಾರೆ. ಹೀಗೆ ಆತ್ಮಕಥೆಗಳಲ್ಲಿ ಸಮಷ್ಟಿ ಪ್ರಜ್ಞೆ ಹಾಸುಹೊಕ್ಕಾಗಿರುತ್ತದೆ. ಈ ಕಾರಣಗಳಿಂದ ಇತರರಿಗೂ

ಬಡತನವಿದೆ ಎಂದು ಹೇಳುವುದಿಲ್ಲ ಎಂಬ ಆರೋಪವನ್ನು ಮಾಡಲು ಬರುವುದಿಲ್ಲ, ಅದನ್ನು ಈ ಪತ್ರದ 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ' ಎಂಬ ಶೀರ್ಷಿಕೆಯೇ ಅಲ್ಲಗೆಳೆಯುತ್ತದೆ. ಆತ್ಮಕಥೆಗಳು ಕೇವಲ ವ್ಯಷ್ಟಿಯ ಅಭಿವ್ಯಕ್ತಿಗಳಾಗದೆ ಭೂತ, ವರ್ತಮಾನ, ಭವಿಷ್ಯದ ಹಿನ್ನೆಲೆಯಲ್ಲಿ ವ್ಯಕ್ತವಾಗಿರುತ್ತವೆ.

## ೨.೨. ಸಂಶೋಧನ ಪ್ರಬಂಧಗಳ ಸಮೀಕ್ಷೆ

### ೨.೨.೧. ಲಿಂಗ – ಜಾತಿ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಆತ್ಮಕಥೆಗಳ ಸಾಮಾಜಿಕ ವಿಶ್ಲೇಷಣೆ

– ಹೇಮಾವತಿ ಸಿ. ಹೆಚ್

ಲಿಂಗ–ಜಾತಿ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಆತ್ಮಕಥೆಗಳ ಸಾಮಾಜಿಕ ವಿಶ್ಲೇಷಣೆ ಎಂಬುದು ಹೇಮಾವತಿ ಸಿ.ಹೆಚ್ ಅವರು ೨೦೧೪ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧವಾಗಿದೆ. ಇಲ್ಲಿ ಅಧ್ಯಯನಕಾರರು ಕನ್ನಡದಲ್ಲಿ ರಚನೆಯಾದ ಹಾಗೂ ಕನ್ನಡಕ್ಕೆ ಅನುವಾದವಾದ ಪ್ರಾತಿನಿಧಿಕ ಆತ್ಮಕಥೆಗಳನ್ನು ಅಧ್ಯಯನದ ವ್ಯಾಪ್ತಿಗೆ ತಂದುಕೊಂಡು ಆತ್ಮಕಥೆಗಳ ಮೂಲಕ ಸಾಮಾಜಿಕ ವಿನ್ಯಾಸವನ್ನು, ವ್ಯವಸ್ಥೆಯಲ್ಲಿನ ಸತ್ಯಗಳನ್ನು ಹಾಗೂ ಒಳನೋಟಗಳನ್ನು ಅರಿಯುವ ಪ್ರಯತ್ನ ಮಾಡಿದ್ದಾರೆ. ಈ ಪ್ರಬಂಧದಲ್ಲಿರುವ ಮುಖ್ಯ ಒಳನೋಟಗಳು ಇಂತಿವೆ.

ಯಾವುದೇ ಸಮಾಜ ತನ್ನ ಒಡಲಾಳದಲ್ಲಿ ಲಿಂಗ–ಜಾತಿಯ ತಾರತಮ್ಯಗಳನ್ನು ಇಟ್ಟುಕೊಂಡೇ ಮುಂದುವರಿಯುತ್ತಿರುತ್ತದೆ ಎಂಬುದು ಅಧ್ಯಯನಕಾರರ ಮುಖ್ಯ ಪ್ರತಿಪಾದನೆಯಾಗಿದೆ. ಜಾತಿಯು ಪ್ರತಿ ಆತ್ಮಕಥೆಯಲ್ಲಿಯೂ ಒಂದು ಮುಖ್ಯ ಪ್ರಶ್ನೆಯಾಗಿ ಚರ್ಚೆಯಾಗಿರುತ್ತದೆ. ಸವರ್ಣೀಯರು ಬರೆದ ಆತ್ಮಕಥೆಗಳಲ್ಲಿ ತಳಸಮುದಾಯಗಳನ್ನು ಮುಟ್ಟಿಸಿಕೊಳ್ಳದುದರ ಕುರಿತು ಪ್ರಸ್ತಾಪವಾಗಿದ್ದರೆ, ತಳಸಮುದಾಯಗಳು ಅಸ್ಪೃಶ್ಯತೆಯನ್ನು ವಿರೋಧಿಸುವ ಸಂಗತಿಗಳು ಪ್ರಸ್ತಾಪವಾಗಿವೆ. ಇನ್ನು ಲಿಂಗದ ವಿಚಾರದಲ್ಲಿ ಮಹಿಳೆ ಎಲ್ಲಾ ಸಮುದಾಯಗಳಿಂದಲೂ ತುಳಿತಕ್ಕೆ ಒಳಪಟ್ಟಿದ್ದಾಳೆ. ಹೀಗೆ ಎಲ್ಲಾ ಆತ್ಮಕಥೆಗಳು ಸಾಮಾಜಿಕ, ಆರ್ಥಿಕ, ಶ್ರೇಣೀಕರಣದ ಪ್ರತಿಬಿಂಬಗಳಾಗಿವೆ. ತಳಸಮುದಾಯಗಳು ಅಲ್ಪ ಮಟ್ಟಿಗೆ 'ಉನ್ನತ' ಮಟ್ಟಕ್ಕೆ ಹೋದಂತೆ, 'ಉನ್ನತ' ಸಮುದಾಯಗಳನ್ನು ಅನುಕರಿಸುತ್ತಾರೆ. ಉದಾಹರಣೆಗೆ 'ಮಣೆಗಾರ' ಆತ್ಮಕಥೆಯಲ್ಲಿನ ಪ್ರಸ್ತಾವವೊಂದು ಹೀಗಿದೆ. "ಆ ಕಾಲಕ್ಕಾಗಲೇ ಹೊಲೆಯರಲ್ಲಿ ಮನೆಗೊಬ್ಬರಂತೆ ಸರ್ಕಾರಿ ನೌಕರರಿದ್ದರು. ಈ ಕಾರಣಕ್ಕಾಗಿಯೇ ಅವರು ದನದ ಮಾಂಸ, ಕೋಣದ ಮಾಂಸ ತಿನ್ನುವುದನ್ನು ಬಿಟ್ಟಿದ್ದರು."[೮] ಎನ್ನುವ ವಿವರಗಳಿವೆ. ಇಲ್ಲಿ ವೃತ್ತಿಯು ಸಿಕ್ಕ ಕೂಡಲೇ ದಲಿತರ ಆಹಾರ ಕ್ರಮದಲ್ಲಿ ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಇದನ್ನೇ ಸಮಾಜಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸ್ ಅವರು 'ಸಂಸ್ಕೃತೀಕರಣ' ಎಂದು ಕರೆದರು. ಇದು ಇನ್ನೂ ಮುಂದುವರಿದು ದಲಿತರು ಸತ್ಯನಾರಾಯಣ ಪೂಜೆ, ಯಾವುದೇ ಮಾಂಸವನ್ನು

ಸೇವಿಸದಿರುವುದು ಇನ್ನೂ ಮುಂತಾಗಿ ಬ್ರಾಹ್ಮಣೀಕರಣದ ಪ್ರಭಾವಕ್ಕೆ ಒಳಗಾಗುವುದನ್ನು ನೋಡಬಹುದು.

ಹೆಣ್ಣಿನ ಅಸ್ಮಿತೆಗೆ ಮಾನ್ಯತೆ ಇದುವರೆಗೂ ನೀಡಲಾಗಿಲ್ಲ ಎಂಬುದು ಅಧ್ಯಯನಕಾರರ ಪ್ರತಿಪಾದನೆಯಾಗಿದೆ. "ಹೆಣ್ಣು ಯಾವ ಜಾತಿಯೇ ಆಗಿರಲಿ ಗಂಡಿನ ಮೂಲಕವೇ ಅವಳ ಜಾತಿಯನ್ನು ಅಳೆಯಲಾಗುತ್ತದೆ. ಮಹಿಳೆ ಹೆಸರಿಗೆ ಯಜಮಾನಿ, ಕೆಲಸ ಮಾತ್ರ ಸೇವಕಿಯದು, ಕೇವಲ ಸೇವಕಿಯೆಂದರೆ ಒಪ್ಪದೇ ಇರುವುದಕ್ಕೆ ನೀನು ಯಜಮಾನಿ ಅಂತ ಉಬ್ಬಿಸಲಾಗುತ್ತದೆ."[೯] ಮಹಿಳೆ ಲೇಖಕಿಯಾಗಿರಲಿ, ಗೃಹಿಣಿಯಾಗಿರಲಿ, ಮುದುಕಿಯಾಗಿರಲಿ ಪುರುಷ ಪ್ರಧಾನ ವ್ಯವಸ್ಥೆಯು ಅವಳನ್ನು ದ್ವಿತೀಯ ವ್ಯಕ್ತಿಯಂತೆ ಪರಿಗಣಿಸುತ್ತದೆ. ಇವೆಲ್ಲ ಅಂಶಗಳು ಹೆಣ್ಣಿನ ಅಸ್ಮಿತೆಗೆ ಸರಿಯಾದ ಮಾನ್ಯತೆ ಸಿಕ್ಕಿಲ್ಲವೆಂಬುದನ್ನು ಹೇಳುತ್ತವೆ. ಬ್ರಿಟಿಷರ ಕೆಲವು ಕಾರ್ಯಕ್ರಮಗಳು ಸ್ತ್ರೀಯರ ಸ್ಥಾನಮಾನವನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಉದಾಹರಣೆಗೆ ಸತಿಸಹಗಮನ ಪದ್ಧತಿಯ ನಿಷೇಧ, ಸ್ತ್ರೀಯರಿಗೆ ಸಮಾನ ಶಿಕ್ಷಣ ನೀಡುವ ಕಾರ್ಯಗಳು ಇವು ಸ್ತ್ರೀಯರು ಇಂದು ತೋರಿಸುತ್ತಿರುವ ಪ್ರತಿರೋಧಗಳ ಮೇಲೆ ಪ್ರಭಾವ ಬೀರಿವೆ. ದಲಿತ ಪುರುಷರು ಇತರ ಎಲ್ಲಾ ಜಾತಿಗಳಿಂದ ಶೋಷಿತರಾದರೂ ಕೂಡ ದಲಿತ ಮಹಿಳೆಯರಿಗೆ ಶೋಷಕರಾಗಿಯೇ ಇರುತ್ತಾರೆ. ಹಾಗೆಯೇ ಬ್ರಾಹ್ಮಣ, ಲಿಂಗಾಯಿತ ಮಹಿಳೆಯರು ಮೇಲ್ಜಾತಿಗೆ ಸೇರಿದ್ದರೂ ಆಯಾ ಸಮುದಾಯಗಳ ಪುರುಷರಿಂದ ಶೋಷಿತರಾಗಿಯೇ ಇದ್ದಾರೆ. ಒಟ್ಟಿನಲ್ಲಿ ಹೆಣ್ಣಾದ ಕಾರಣಕ್ಕಾಗಿ ಶೋಷಕರಿಂದ ಅವಮಾನ, ನೋವು ಅನುಭವಿಸುವುದರ ಮೂಲಕ ಶೋಷಿತರಲ್ಲೇ ಅತೀ ಶೋಷಿತರಾಗುವ ಸ್ಥಿತಿ ಮಹಿಳೆಯರದ್ದಾಗಿದೆ.

ಆತ್ಮಕಥೆಗಳಲ್ಲಿ ಏಕಘನಾಕೃತಿಯ ಸಾಮಾಜಿಕ ವಿನ್ಯಾಸವಿಲ್ಲ, ಅದರಲ್ಲಿ ಅನೇಕ ಪದರಗಳು ಸ್ತರ ವಿನ್ಯಾಸಗಳು, ಏಣಿಶ್ರೇಣಿಗಳು, ಅಸಮಾನ ನೆಲೆಗಳು ನಿರೂಪಣೆಗೊಂಡಿರುತ್ತವೆ. ಈ ಮಾತು ಅಕ್ಷರಶಃ ಸತ್ಯವೆನ್ನಬಹುದು. ಭಾರತೀಯ ಸಮಾಜವು ಹಲವಾರು ಶ್ರೇಣೀಕರಣವನ್ನು ಒಳಗೊಂಡಿದೆ. ಜಾತಿ, ಲಿಂಗ, ವರ್ಗಾಧಾರಿತ ಶ್ರೇಣೀಕರಣಗಳು ಹಲವಾರು ತಾರತಮ್ಯಗಳ ಮೂಲಕ ಹಲವು ಬಗೆಯ ಅವಮಾನಗಳಿಗೆ ಕಾರಣವಾಗಿವೆ. ಸ್ತ್ರೀಯು ಹಲವು ಬಗೆಯ ಅವಮಾನಗಳನ್ನು ಅನುಭವಿಸಿರುವುದನ್ನು ಅಧ್ಯಯನಕಾರರು ನೇರವಾಗಿ ಹೇಳದಿದ್ದರೂ ಆತ್ಮಕಥೆಗಳಲ್ಲಿನ ವಿವರಗಳು ಅದನ್ನು ಮತ್ತೆ ಮತ್ತೆ ವಿವರಿಸುತ್ತವೆ. 'ಗೆರೆದಾಟಿದ ಮೇಲೆ' ಆತ್ಮಕಥನಾತ್ಮಕ ಬರೆಹದಲ್ಲಿ ಹೆಣ್ಣು ಮಗು ಹೆತ್ತಿದ್ದಕ್ಕಾಗಿ, ಗೀತಾ ನಾಗಭೂಷಣರವರು ಶಿಕ್ಷಣ ಪಡೆಯುವ ಸಲುವಾಗಿ, ಸುಶೀಲಾ ರಾಯ್ ಹಾಗೂ ಸೋಬಾನೆ ಹೊನ್ನಮ್ಮರವರು ಏಕಕಾಲಕ್ಕೆ ಹೆಣ್ಣಾಗಿದ್ದಕ್ಕೂ ಮತ್ತು ಕಪ್ಪು ವರ್ಣಿಯರಾಗಿದ್ದಕ್ಕೂ ಅವಮಾನಗಳು ಅನುಭವಿಸುವುದನ್ನು ಕಾಣಬಹುದಾಗಿದೆ. ಹೀಗೆ ಅವಮಾನಗಳು ಹಲವು ರೂಪಗಳಲ್ಲಿವೆ. ಅವಮಾನಗಳಿಗೂ ಮತ್ತು ಸಾಮಾಜಿಕ, ಆರ್ಥಿಕ ಹಿನ್ನೆಲೆಗಳಿಗೂ ಅಂತರ್‌ಸಂಬಂಧಗಳಿವೆ. ನಮ್ಮ ಸಮಾಜದಲ್ಲಿ ಕೆಲವೊಂದು ವಿಷಯಗಳಿಗೆ ನಕರಾತ್ಮಕವಾಗಿ

ಮೌಲ್ಯಮಾಪನ ಮಾಡಲಾಗುತ್ತದೆ. ಬಡವರನ್ನು ಮಾತ್ರ ಶಂಕಿಸುವ ಹಲವು ಪ್ರಸಂಗಗಳನ್ನು ಕಾಣಬಹುದು. ಹೀಗೆ ಅನುಮಾನಿಸುವುದು ಹಲವಾರು ಅವಮಾನಗಳಿಗೆ ಕಾರಣವಾಗುತ್ತವೆ.

ಅಧ್ಯಯನಕಾರರು ಕೆಲವೊಂದು ಕಡೆ ಸೂಕ್ಷ್ಮವಾದ ಸಂಗತಿಗಳನ್ನು ಹೆಚ್ಚು ವಿಶ್ಲೇಷಣೆಗೆ ಒಳಪಡಿಸದೆ ಹಾಗೆಯೇ ಸರಳಗೊಳಿಸುವಂತಹದ್ದು ಇನ್ನೂ ಹೆಚ್ಚಿನ ಅಧ್ಯಯನವನ್ನು ನಿರೀಕ್ಷಿಸುತ್ತದೆ. ಉಷಾ ಪಿ.ರೈ ಅವರು ತಮ್ಮ ಆತ್ಮಕಥೆಯಲ್ಲಿ "ಕೆಳವರ್ಗದವರನ್ನು ಮೇಲ್ವರ್ಗದವರು ಮುಟ್ಟಿಸಿಕೊಳ್ಳದಿದ್ದರೂ ಕೆಳವರ್ಗದವರ ಸಹಕಾರವಿಲ್ಲದೇ ಜೀವನ ಕಷ್ಟವಾಗಿತ್ತು. ಆದರೆ ಕಕ್ಕಸ್ಸು ಕ್ಲೀನ್ ಮಾಡುವ ಕೊರಪಳುವಿಗೆ ಹಾಗೂ ಕಾಪೌಂಡ್ ಕ್ಲೀನ್ ಮಾಡುತ್ತಿದ್ದ ಹೊಲತಿಗೆ ವರ್ಷಕ್ಕೊಮ್ಮೆ ಸತ್ಕರಿಸಲಾಗುತ್ತಿತ್ತು"[೧೦] ಎಂದು ಹೇಳಿರುವುದನ್ನು ಅಧ್ಯಯನಕಾರರು ಹೆಚ್ಚು ವಿಮರ್ಶಿಸದೆ "ಮೇಲ್ಜಾತಿ, ಮಧ್ಯಮ ಜಾತಿ, ಕೆಳಜಾತಿಗಳಿದ್ದರೂ ಕೂಡ ಅವೆಲ್ಲವೂ ಸೌಹಾರ್ದಯುತವಾಗಿತ್ತು ಎನ್ನುವುದು ಉಷಾರವರ ಅಭಿಪ್ರಾಯವಾಗಿದೆ"[೧೧] ಎಂದಷ್ಟೇ ಹೇಳಿರುವುದು ಅಧ್ಯಯನದ ಅಸೂಕ್ಷ್ಮತೆಯನ್ನು ಸೂಚಿಸುತ್ತದೆ. ಇಲ್ಲಿ ಕೆಳವರ್ಗದವರನ್ನು ಮುಟ್ಟಿಸಿಕೊಳ್ಳದ ಮೇಲ್ವರ್ಗದವರ ಶ್ರೇಣೀಕರಣವನ್ನು ಮತ್ತು ತಮ್ಮ ಹೊಲಸನ್ನು ಸ್ವಚ್ಛಗೊಳಿಸಲು ಮತ್ತೊಂದು ಸಮುದಾಯವನ್ನು ಸೀಮಿತಗೊಳಿಸಿದ ಈ ಅವ್ಯವಸ್ಥೆಯನ್ನು ಅಧ್ಯಯನಕಾರರು ವಿಮರ್ಶಿಸುವ ಆವಶ್ಯಕತೆಯಿತ್ತು.

ಅಧ್ಯಯನಕಾರರು ತಮ್ಮ ಮೂರನೇ ಅಧ್ಯಾಯದಲ್ಲಿ ಈ ಕೆಳಗಿನ ಹೇಳಿಕೆಯನ್ನು ನೀಡುತ್ತಾರೆ. "ಜಾತಿ ಹೇಗೆ, ಯಾವಾಗ, ಯಾವ ಉದ್ದೇಶದಿಂದ ಮೊದಲಾಯಿತು ಎನ್ನುವುದು ಈಗ ಅಪ್ರಸ್ತುತ ಆದರೆ ಈಗಿನವರು ಜಾತಿ ಪದ್ಧತಿಗೆ ಜವಾಬ್ದಾರರಲ್ಲ"[೧೨] ಎಂಬ ಅಧ್ಯಯನಕಾರರ ಈ ಹೇಳಿಕೆಯನ್ನು ಪರಾಮರ್ಶಿಸಬೇಕಿದೆ. ಆಧುನೀಕರಣ, ಶಿಕ್ಷಣ ಇವೆಲ್ಲಾ ಜಾತಿ ಪದ್ಧತಿಯನ್ನು ನಾಶಮಾಡುತ್ತವೆ ಎಂದು ನಂಬಲಾಗಿತ್ತು, ಆದರೆ ಅವುಗಳೇ ಇಂದು ಜಾತಿ ಪದ್ಧತಿಯನ್ನು ಬೇರೆ ಬೇರೆ ಸ್ವರೂಪಗಳಲ್ಲಿ ಸೃಷ್ಟಿಮಾಡುತ್ತಿವೆ. ಪ್ರಸ್ತುತ ದಿನಮಾನಗಳಲ್ಲಿ ಶೋಷಣೆಗಳು ಸ್ವಜಾತಿ ಕೇಂದ್ರಿತ ಮನೋಭಾವನೆ, ಮೀಸಲಾತಿಯನ್ನು ರಾಜಕಾರಣಕ್ಕೆ ಬಳಸುವ, ಹೀಗೆ ಹಲವು ಸ್ವರೂಪಗಳಲ್ಲಿ ಹೊಸಬಗೆಯ ಜಾತೀಯತೆಯು ಜಾತಿವಾದಿಗಳಿಂದ ನಿರ್ಮಾಣವಾಗುತ್ತಿದೆ. ಜಾತಿವಾದಿಗಳು ಹೊಸ ಸ್ವರೂಪದಲ್ಲಿ ಹುಟ್ಟುತ್ತಿರುವ ಇಂತಹ ಸಂದರ್ಭದಲ್ಲಿ, ಈಗಿನವರು ಜಾತಿ ಪದ್ಧತಿಗೆ ಜವಾಬ್ದಾರರಲ್ಲ ಎಂದು ಹೇಳುವುದು ಉದಾರವಾದಿ ಸರಳೀಕರಣವಾಗಿ ಕಾಣುತ್ತದೆ. ಇಂದಿನ ದಿನಗಳಲ್ಲಿ ಜಾತೀಯತೆ ಇಲ್ಲ ಎನ್ನುವುದನ್ನು ಸಮರ್ಥಿಸುವುದಕ್ಕಾಗಿ ಅಧ್ಯಯನಕಾರರು ಹೀಗೆ ಹೇಳಿರಬಹುದು. 'ತಲಪರಿಗೆ' ಕೃತಿಯಲ್ಲಿ ನೇತ್ರ ಅವರು ತಮ್ಮ ಬರಹದಲ್ಲಿ ಹೀಗೆ ಹೇಳಿಕೊಂಡಿದ್ದಾರೆ: "ಎಂದಿನಂತೆ ಶಾಲೆ ಮುಗಿದ ನಂತರ ಭಜನೆ ಮನೆಯ ವೆಂಕಟರಮಣಸ್ವಾಮಿ ದೇವಸ್ಥಾನದ ಕಾಂಪೌಂಡಿನೊಳಗೆ ಹೋಗಿ ಆಡುತ್ತಿದ್ದೆವು. ದೇವಸ್ಥಾನಕ್ಕೆ ಬಂದ ಶ್ರೀನಿವಾಸಗೌಡ ನನ್ನನ್ನು ಎಳೆದು ತಂದು ರಪರಪನೆ ಕೆನ್ನೆಗೆ ಬಾರಿಸಿ ಹೊರದಬ್ಬಿದ"[೧೩] ಎಂದು ಹೇಳುತ್ತಾರೆ. ಇಲ್ಲಿ ತಳ ಸಮುದಾಯದವರು ದೇವಸ್ಥಾನ

ಪ್ರವೇಶ ಮಾಡಬಾರದೆಂಬ ಆಲೋಚನೆ ಇರುವ ಕಾರಣಕ್ಕಾಗಿಯೇ, ಮುಗ್ಧ ಬಾಲಕಿಗೆ ಗೌಡ ಹಲ್ಲೆ ಮಾಡುತ್ತಾನೆ. ಇದಕ್ಕೆ ಪ್ರತಿಕ್ರಿಯೆ ನೀಡುವ ಅಧ್ಯಯನಕಾರರು ಇದರಲ್ಲಿ ಆಗಿನ ಸಾಮಾಜಿಕ ಸಂದರ್ಭವನ್ನು ಕಾಣಬಹುದು ಎಂದಷ್ಟೇ ಹೇಳುತ್ತಾರೆ. ಗುಡಿಯನ್ನು ಕಟ್ಟಲು ದಲಿತರನ್ನು ಬಳಸಿಕೊಂಡು, ಗುಡಿ ನಿರ್ಮಾಣವಾದಾಗ ಮಾತ್ರ ದಲಿತರಿಗೆ ಪ್ರವೇಶವಿಲ್ಲದಿರುವುದನ್ನು ಇಲ್ಲಿ ಕಾಣಬಹುದು. ಜಾತಿ ವ್ಯವಸ್ಥೆಯ ಇಂತಹ ಕುರುಡು ಆಚರಣೆಗಳನ್ನು ಅಧ್ಯಯನಕಾರರು ಹೆಚ್ಚು ವಿಶ್ಲೇಷಿಸಬೇಕಾದ ಅಗತ್ಯತೆ ಇತ್ತು.

ಇದರ ಜೊತೆಗೆ ಅಧ್ಯಯನಕಾರರು 'ಮಣೆಗಾರ' ಆತ್ಮಕಥೆಯ ಬಗ್ಗೆ ವಿಶ್ಲೇಷಣೆ ಮಾಡುತ್ತ "ಯಾವುದೇ ಬದಲಾವಣೆಗೆ ಸಮಾಜದ ಮನಸ್ಸಿಗಿಂತ ಪ್ರಭುತ್ವದ ಅಂಗೀಕಾರ ಕೂಡ ಮುಖ್ಯವಾಗುತ್ತದೆ"[೧೯] ಎಂಬ ಹೇಳಿಕೆಯನ್ನು ನೀಡುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಬದಲಾವಣೆ ಪ್ರಭುತ್ವದಿಂದಾದರೆ ಹೆಚ್ಚು ಪರಿಣಾಮಕಾರಿಯೋ ಅಥವಾ ಜನಸಾಮಾನ್ಯರ ಮನಸ್ಸಿನಿಂದಾದರೆ ಹೆಚ್ಚು ಪರಿಣಾಮಕಾರಿಯೋ ಎಂಬುದು. ಪ್ರಭುತ್ವವೆಂದರೆ ಇಲ್ಲಿ ಸರ್ಕಾರ, ಮೇಲ್ಜಾತಿ, ಮೇಲ್ವರ್ಗ, ಪುರುಷ ಪ್ರಾಧಾನ್ಯತೆ ಮುಂತಾದ ಅರ್ಥವನ್ನು ನೀಡಬಹುದು. ಸಂವಿಧಾನದಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ನಿಷೇಧಿಸಲಾಗಿದೆ. ವರದಕ್ಷಿಣೆ ನಿಷೇಧ ಕಾಯ್ದೆ ೧೯೬೧ರಲ್ಲಿಯೇ ಜಾರಿಗೆ ಬಂದಿದೆ. ಇವೆರಡೂ ಕಾನೂನುಗಳಿಗೆ ಪ್ರಭುತ್ವದ ಮೇಲ್ನೋಟದ ಅಂಗೀಕಾರವಿದೆ. ಆದರೆ ಈ ಸಮಸ್ಯೆಗಳು ಇಂದಿಗೂ ಸಮಾಜದಲ್ಲಿವೆ. ಇನ್ನೂ ಮೀಸಲಾತಿ ಕುರಿತ ಅಸಹಿಷ್ಣುತೆಯನ್ನು ಗಮನಿಸಬಹುದು. ಇಂತಹ ಸಂಗತಿಗಳಲ್ಲಿ ಪ್ರಭುತ್ವ ಬಾಹ್ಯವಾಗಿ ಸಮಾಜಮುಖಿ ಮುಖವಾಡ ಧರಿಸಿದಂತೆ ಕಂಡರೂ, ತರತಮದ ವಿಷಬೀಜ ಕೆಲವೊಮ್ಮೆ ಪ್ರಕಟವಾಗುತ್ತಿರುತ್ತದೆ. ಇದಕ್ಕೆ ಪೂರಕವಾಗಿ ದೇವನೂರ ಮಹಾದೇವ ಅವರ 'ಇಲ್ಲಿ ಆಗಿರುವ ಬದಲಾವಣೆಗಳು ಬಾಹ್ಯ ಒತ್ತಡದವು ಅಂತರಂಗ ಕತ್ತಲಲ್ಲೆ ಇದೆ.' ಎಂಬ ಅಭಿಪ್ರಾಯವನ್ನು ಗಮನಿಸಬಹುದು. ಕೇವಲ ಪ್ರಭುತ್ವ ಮಾತ್ರವಲ್ಲದೆ ಜನರ ಮನಸ್ಸುಗಳು ಸಹ ಸಮಾಜಮುಖಿ ಧೋರಣೆಯನ್ನು ಹೊಂದಿದರೆ, ಆ ಸಾಮಾಜಿಕ ವ್ಯವಸ್ಥೆಯು ಅತ್ಯಂತ ವೇಗವಾಗಿ ಜೀವಪರವಾಗುತ್ತದೆ. ಎಂಬುದು ಮುಖ್ಯವಾದ ಸಂಗತಿಯಾಗಿದೆ.

**೨.೨.೨. ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ – ಶರಣಮ್ಮ ಅ. ಗೋರೇಬಾಳ**

ಶರಣಮ್ಮ ಅ. ಗೋರೇಬಾಳ ಅವರ 'ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ' ಅಧ್ಯಯನವು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೨೦೦೨ರಲ್ಲಿ ಸಲ್ಲಿಸಿದ ಮಹಾ ಪ್ರಬಂಧವಾಗಿದೆ. ಪ್ರಸ್ತುತ ಅಧ್ಯಯನವು ಆತ್ಮಕಥೆ ಕುರಿತಂತೆ ನಡೆದ ಪ್ರಾರಂಭದ ಅಧ್ಯಯನವಾಗಿದ್ದೂ, ಈ ಪ್ರಬಂಧದಲ್ಲಿ ಅಧ್ಯಯನಕಾರರು ಆತ್ಮಕಥೆಗಳ ಪರಿಕಲ್ಪನೆ, ಸ್ವರೂಪದ ಬಗ್ಗೆ ಚರ್ಚಿಸಿದ್ದಾರೆ. ಇದರ ಜೊತೆಗೆ ಆತ್ಮಕಥೆಗಳಿಗೂ ಜೀವನ ಚರಿತ್ರೆಗಳಿಗೂ ಇರುವ ವ್ಯತ್ಯಾಸವನ್ನು ಗುರುತಿಸಿದ್ದಾರೆ.

ಆತ್ಮಕಥೆಯು ಜೀವನ ಚರಿತ್ರೆಯೊಳಗೆ ಸೇರಿ ಹೋಗಿತ್ತು ಎಂಬುದು ಶರಣಮ್ಮ ಅವರ ಪ್ರತಿಪಾದನೆಯಾಗಿದೆ. ಪಾಶ್ಚಿಮಾತ್ಯರ ಸಂಪರ್ಕದಿಂದ ಕನ್ನಡದಲ್ಲಿ ಮೊದಲು ಜೀವನ ಚರಿತ್ರೆಗಳು ನಿರ್ಮಾಣವಾದವು. ಎಂ.ಎಸ್. ಪುಟ್ಟಣ್ಣ ಅವರು ಬರೆದ 'ಕುಣಿಗಲ್ ರಾಮಶಾಸ್ತ್ರಿಗಳ ಚರಿತ್ರೆ' ಮುಂತಾದ ಜೀವನ ಚರಿತ್ರೆಗಳು ಕನ್ನಡದಲ್ಲಿ ನಿರ್ಮಾಣವಾಗುತ್ತಾ ಬಂದವು. ಜೀವನ ಚರಿತ್ರೆ ಅಥವಾ ವ್ಯಕ್ತಿಚಿತ್ರಗಳಲ್ಲಿ ವ್ಯಕ್ತಿಗಳು ಬದುಕಿದ ವಿವರಗಳು ಇರುತ್ತವೆ. ಆದರೆ ಆ ವ್ಯಕ್ತಿಯ ಬಾಹ್ಯ ಚಟುವಟಿಕೆಯನ್ನು ಮಾತ್ರ ಆಧರಿಸಿ ವ್ಯಕ್ತಿತ್ವವನ್ನು ನಿರ್ಧರಿಸಲಾಗುತ್ತದೆ. ಆದರೆ ಆತ್ಮಕಥೆಗಳಲ್ಲಿ ತಾನೇ ನಿರೂಪಕನೂ, ಆತ್ಮವಿಮರ್ಶಕನೂ ಆಗಿರುತ್ತಾನೆ. ಹೀಗೆ ಮೊದಲು ಜೀವನ ಚರಿತ್ರೆಯಲ್ಲಿ ಆತ್ಮಕಥೆಯು ಸೇರಿಕೊಂಡಿದ್ದರೂ ತದನಂತರ ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಬೆಳೆಯಿತು. ಆತ್ಮಕಥೆಯು ಪಾಶ್ಚಾತ್ಯರಿಂದ ಕನ್ನಡಕ್ಕೆ ಬಂದ ಪ್ರಕಾರವಾಗಿದೆ. ಯುರೋಪಿಯನ್ನರ ಸಂಪರ್ಕದಿಂದ ಭಾರತೀಯರಿಗೆ ಪಾಶ್ಚಾತ್ಯ ಮಾದರಿಯ ಶಿಕ್ಷಣ, ಆರೋಗ್ಯ, ಸಾಹಿತ್ಯವೂ ಪ್ರಭಾವ ಬೀರಿತು. ವ್ಯಕ್ತಿಗತ ಭಾವನೆಗಳಿಗೆ ಮಹತ್ವ ನೀಡುವ ಯುರೋಪಿಯನ್ನರಲ್ಲಿ ಆತ್ಮಕಥೆ ಬರೆಯುವುದು ಸಹಜ ಮತ್ತು ಸ್ವಾಭಾವಿಕವಾಗಿತ್ತು. ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾಗಿ ಪಾಶ್ಚಾತ್ಯ ಸಾಹಿತ್ಯದಿಂದ ಕಾದಂಬರಿ, ಸಣ್ಣಕಥೆ, ಆತ್ಮಕಥೆ ಇನ್ನೂ ಮುಂತಾದ ಪ್ರಕಾರಗಳು ಸಹಜವಾಗಿ ಭಾರತಕ್ಕೆ ಎರವಲು ಬಂದಿವೆ. ಆದರೂ ಆತ್ಮಕಥೆಯ ಅಂಶಗಳನ್ನು ನಾವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಪಂಪ ಹೇಳುವ "ಕದಳೀಗರ್ಭಶ್ಯಾಮಂ ಮೃದುಕುಟಿಲ ಶಿರೋರುಹಂ, ಸರೋರುಹವದನಂ...ಲಲಿತಮಧುರ ಸುಂದರ"[೧೫] ಎಂಬ ಸಾಲುಗಳನ್ನು ಗೋರೇಬಾಳ ಉಲ್ಲೇಖಿಸುತ್ತಾರೆ. ಈ ಸಾಲುಗಳಲ್ಲಿ ಕವಿ ಪಂಪ ತನ್ನ ದೇಹಸಿರಿಯನ್ನು ಕುರಿತು ಹೇಳುತ್ತಿರುವುದನ್ನು ಕಾಣಬಹುದು. ಅಕ್ಕಮಹಾದೇವಿಯ 'ಬೆಟ್ಟದ ಮೇಲೊಂದು ಮನೆಯ ಮಾಡಿ........' ವಚನವು ತಾನು ಬದುಕಿದ ಕಾಲಘಟ್ಟದಲ್ಲಿ ಅನುಭವಿಸಿದ ತೊಳಲಾಟಗಳನ್ನು ಹೇಳುತ್ತಿದೆ. ಹೀಗೆ ಪಂಪ, ಕುಮಾರವ್ಯಾಸ, ಹರಿಹರ ಮುಂತಾದ ಕವಿಗಳಲ್ಲಿ ಆತ್ಮಕಥೆಯ ಅಂಶಗಳನ್ನು ಗುರುತಿಸಬಹುದು.

ಈ ಪ್ರಬಂಧದ ಉತ್ತಮ ಅಂಶಗಳನ್ನು ಮುಂದಿನಂತೆ ಗುರುತಿಸಬಹುದಾಗಿದೆ. ಆತ್ಮಕಥೆಯನ್ನು ಆತ್ಮಾವಲೋಕನ ಎಂದು ಗುರುತಿಸಿರುವುದು ಹೆಚ್ಚು ಸೂಕ್ತವೂ, ಮುಖ್ಯವೂ ಆದಂತಹ ಸಂಗತಿಯಾಗಿದೆ. ಕನ್ನಡದ ಬಹುತೇಕ ಆತ್ಮಕಥೆಗಳು ಆತ್ಮವಿಮರ್ಶೆ ಮಾದರಿಯಲ್ಲಿಯೇ ರಚಿತವಾಗಿವೆ. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ', ಸ.ಜ. ನಾಗಲೋಟಿಮಠ 'ಬಿಚ್ಚಿದ ಜೋಳಿಗೆ' ಆತ್ಮಕಥೆಗಳಾಗಲಿ ಇವುಗಳಲ್ಲಿ 'ಆತ್ಮವಿಮರ್ಶಾತ್ಮಕ' ಅಂಶಗಳು ಬಹುತೇಕವಾಗಿವೆ. ಇನ್ನು ಕೊರತೆಗಳಿಗೆ ಸಂಬಂಧಿಸಿದಂತೆ ನೋಡುವುದಾದರೆ ಆತ್ಮಚರಿತ್ರೆಯ ಸ್ವರೂಪದ ಬಗ್ಗೆ ಸಾಮಾನ್ಯ ಸ್ವರೂಪ ಮತ್ತು ವಿಶಿಷ್ಟ ಸ್ವರೂಪ ಎನ್ನುವ ವಿಂಗಡಣೆಯನ್ನು ಮಾಡಲಾಗಿದೆ. ಆದರೆ ಈ ವಿಂಗಡಣೆಗಳೇ ಅಸಮಂಜಸವೆಂದೆನಿಸುತ್ತದೆ. ಯಾಕೆಂದರೆ ಯಾರ ಅನುಭವವು ಸಾಮಾನ್ಯವಲ್ಲ ಎಲ್ಲವೂ ವಿಶಿಷ್ಟ ಸಂವೇದನೆಯೇ ಆಗಿರುವಾಗ

ನಾವು ಸಾಮಾನ್ಯ, ವಿಶಿಷ್ಟ ಎಂದು ಗೆರೆ ಕೊರೆದಂತೆ ವಿಂಗಡಿಸುವುದು ಅಧ್ಯಯನದ ಮಿತಿಯಾಗುತ್ತದೆ. ಹಾಗಾಗಿ ಪ್ರತಿ ಆತ್ಮಕಥನಕಾರರ ಅನುಭವಗಳು ವಿಶಿಷ್ಟವಾಗಿರುತ್ತವೆ.

ಇದರ ಜೊತೆಗೆ ಗೋರೇಬಾಳ ಅವರು ಆತ್ಮಕಥೆಗಳಿಗಿಂತ ಜೀವನ ಚರಿತ್ರೆಗಳೇ ಹೆಚ್ಚು ಅಥೆಂಟಿಕ್ ಎಂದು ಹೇಳಿರುವುದು ಚರ್ಚಿಸಬೇಕಾದ ಸಂಗತಿಯಾಗಿದೆ. ಒಂದು ಸಾಮಾನ್ಯ ತಿಳುವಳಿಕೆಯ ಪ್ರಕಾರ ಯಾವುದೇ ವ್ಯಕ್ತಿಯನ್ನು ನಾವು ಸಂಪೂರ್ಣವಾಗಿ ಹೀಗೆಯೇ ಎಂದು ಹೇಳುವುದು ಕಷ್ಟ. ಅಂತರಂಗ ಮತ್ತು ಬಹಿರಂಗ ಇವೆರಡು ಒಂದಾಗುವುದು ಕಷ್ಟಸಾಧ್ಯವಾದದ್ದು. ವ್ಯಕ್ತಿ ಕೆಲವೊಮ್ಮೆ ತೋರಿಕೆಗೆ ಸಭ್ಯನಂತೆ, ಪರಾಕ್ರಮಿಯಂತೆ ತೋರ್ಪಡಿಸುತ್ತಿದ್ದರು, ಅವನೊಳಗೆ ಯಾವ ರೀತಿಯ ರಾಗದ್ವೇಷಗಳು ನಡೆಯುತ್ತಿರುತ್ತವೆ ಎಂದು ಹೇಳಲು ಬರುವುದಿಲ್ಲ. ಉದಾಹರಣೆಗೆ ವ್ಯಕ್ತಿ ಸಂತೋಷಕ್ಕೂ, ದುಃಖಕ್ಕೂ ಒಮ್ಮೊಮ್ಮೆ ಅಳುತ್ತಿರುತ್ತಾನೆ. ನಾವು ಕೇವಲ ಅಳುವನ್ನು ಮಾತ್ರ ನೋಡಿ ವ್ಯಕ್ತಿ ದುಃಖದಲ್ಲಿದ್ದಾನೆ ಎಂದು ಹೇಳುವುದು ಅಪರಿಪೂರ್ಣವಾಗುತ್ತದೆ. ಇದರ ಜೊತೆಗೆ ಆತ್ಮಕಥೆಯೂ ಸಂಪೂರ್ಣ ಅಥೆಂಟಿಕ್ ಎಂದು ಒಪ್ಪುವಂತಿಲ್ಲ. ಯಾಕೆಂದರೆ ಆತ್ಮಕಥನಕಾರನಿಗೂ ಸಹ ಆಯ್ಕೆ ಮತ್ತು ನಿರಾಕರಣೆ ಇರುವ ಕಾರಣ, ನಾವು ಜೀವನ ಚರಿತ್ರೆಯಾಗಲಿ, ಆತ್ಮಕಥೆಯಾಗಲಿ ಯಾವುದಾದರೂ ಒಂದು ಅಥೆಂಟಿಕ್ ಎಂದು ಹೇಳುವ ಬದಲು ನಿರೂಪಣೆಗೊಂಡ ಸಾಹಿತ್ಯದ ಮೂಲಕವೇ ಕಾಣುವ ಪ್ರಯತ್ನ ಮಾಡಬಹುದಾಗಿದೆ.

### ೨.೩. ಆತ್ಮಕಥೆಗಳ ಮೇಲೆ ಬಂದ ಲೇಖನಗಳ ಸಮೀಕ್ಷೆ

#### ೨.೩.೧. ಬಡವರ ನಗುವಿನ ಶಕ್ತಿ – ಡಿ.ಆರ್. ನಾಗರಾಜ್

೧೯೯೬ರಲ್ಲಿ ಸಿದ್ಧಲಿಂಗಯ್ಯನವರು ಬರೆದ 'ಊರುಕೇರಿ' ಆತ್ಮಕಥೆಗೆ ಡಿ.ಆರ್. ನಾಗರಾಜರವರು 'ಬಡವರ ನಗುವಿನ ಶಕ್ತಿ' ಎಂಬ ಹಿನ್ನುಡಿಯನ್ನು ಬರೆದಿದ್ದು, ಬಡವರ ನಗು ಇಲ್ಲಿ ಶೋಷಕ ವರ್ಗವನ್ನು ಆತ್ಮವಿಮರ್ಶೆಗೆ ಹಚ್ಚಿದೆ ಎಂಬುದು ಹಿನ್ನುಡಿಯ ಆಶಯವಾಗಿದೆ.

ಇಲ್ಲಿನ ಮುಖ್ಯ ಪ್ರತಿಪಾದನೆಯೆಂದರೆ ಬಡವರ ಬದುಕಿನಲ್ಲಿರುವ ಪ್ರತಿಭಾತ್ಮಕಥೆಯನ್ನು ಗುರುತಿಸುವುದು. ಡಿ.ಆರ್. ಅವರು ತಮ್ಮ ಹಿನ್ನುಡಿಯುದ್ದಕ್ಕೂ ಬಡವರಲ್ಲಿರುವ ಪ್ರತಿಭಾತ್ಮಕತೆ, ಕಲಾತ್ಮಕತೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ೭೦ರ ದಶಕವು ಕನ್ನಡ ಸಾಹಿತ್ಯಕ್ಕೆ ಹೊಸ ದಾರಿಯನ್ನು ನೀಡಿದಂತಹ ಕಾಲಘಟ್ಟವಾಗಿದೆ. ಈ ಕಾಲಘಟ್ಟವು ದಮನಿತರ ಮೇಲಾಗುವ ಶೋಷಣೆಯನ್ನು ತಮ್ಮ ಅಭಿವ್ಯಕ್ತಿಯ ಮುಖ್ಯ ವಸ್ತುವನ್ನಾಗಿಸಿತು. ಈ ಕಾರಣದಿಂದಲೇ ಬಡವರ ಬಡತನದ ಆಚೆಗೂ ಇರುವಂತಹ ನಗುವಿನ ಶಕ್ತಿಯನ್ನು ಗುರುತಿಸುವುದರ ಭಾಗವಾಗಿ ಈ ಹಿನ್ನುಡಿಯನ್ನು ಬರೆಯುತ್ತಿರುವುದಾಗಿ ಲೇಖಕರು ಹೇಳಿದ್ದಾರೆ. ಇದಕ್ಕೆ 'ಊರುಕೇರಿ' ಆತ್ಮಕಥೆಯ ನಿರೂಪಣೆಯೂ ಕಾರಣವಾಗಿದೆ. ಕಮ್ಯುನಿಸಮ್ ಮತ್ತು ಸುಧಾರಣವಾದ ಮುಂತಾದ ಸಿದ್ಧಾಂತಗಳು ದಲಿತರನ್ನು ಕೇವಲ ಅವಮಾನದ ಸರಕುಗಳಂತೆ ಗುರುತಿಸುತ್ತಿದ್ದವು. "ಸಮಾಜವಾದ ಮತ್ತು

ಕಮ್ಯುನಿಸಂ–ಬಡವರ ಆಸೆಗಳಿಗೆ ಕೊಟ್ಟ ಹೆಸರು ಎಂದರೂ ನಡೆದೀತು. ಆದರೆ ಇದೇ ಯುಗ, ಬಡವರ ಬಗ್ಗೆ ಧ್ಯಾನಿಸಿದಷ್ಟೂ ಬಡವರನ್ನು ಕುಗ್ಗಿಸುತ್ತಾ ಬಂತು. ಹೊಟ್ಟೆಯನ್ನು ನರನ ಜೀವಿತಕ್ಕೆ ಕೇಂದ್ರವಾಗಿಸಿದಷ್ಟೂ ಬಡವರ ವ್ಯಕ್ತಿತ್ವದ ಉಳಿದ ಆಯಾಮಗಳು ಕುಗ್ಗುತ್ತಾ ಹೋದವು."[೧೬] ದಮನಿತರ ಶೋಷಣೆಗಳಾಚೆನ ಇತರೆ ಸಂಗತಿಗಳನ್ನು ಗುರುತಿಸುವಲ್ಲಿ ಸಮಾಜವಾದ ಮತ್ತು ಕಮ್ಯುನಿಸಂ ವಿಫಲವಾದವು ಎನ್ನುತ್ತಾ, ದಮನಿತರು ಅಪಮಾನಕ್ಕೆ ಒಳಗಾಗಿರುವುದು ನಿಜವಾದರೂ, ನಗುವನ್ನು ಕಳಕೊಂಡಿಲ್ಲ. ಈ ನಗುವನ್ನು ಸಿದ್ಧಾಂತಗಳು ಗುರುತಿಸಿಲ್ಲ ಎಂಬುದು ಇಡೀ ಹಿನ್ನುಡಿಯ ಸಾರಂಶವಾಗಿದೆ. ಸಿದ್ಧಲಿಂಗಯ್ಯನವರ ಆತ್ಮಕಥೆಯ ನಿರೂಪಣ ವಿಧಾನವು ಸಹ ಡಿ.ಆರ್.ನಾಗರಾಜ್‌ರವರ ನಿಲುವನ್ನು ಸಮರ್ಥಿಸುವಂತಿದೆ. ಕೀಳರಿಮೆ, ಅಪಮಾನಗಳೆಲ್ಲವೂ ಇಲ್ಲಿ ವ್ಯಂಗ್ಯವಾಗಿ ನಿರೂಪಣೆಗೊಂಡಿವೆ. ದಲಿತರು ಶತಶತಮಾನಗಳಿಂದ ಶೋಷಣೆಯನ್ನು, ಅವಮಾನಗಳನ್ನು ಅನುಭವಿಸುತ್ತಿದ್ದರೂ, ತಮ್ಮ ಎದುರಾಳಿಗಳನ್ನು ಭೌತಿಕವಾಗಿ ಅಲ್ಲದೆ ಇದ್ದರೂ ಪರ್ಯಾಯವಾದ ಮಾರ್ಗದಲ್ಲಿ ಪ್ರತಿರೋಧಿಸುವುದನ್ನು ಮಾಡುತ್ತಾ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಡಿ.ಆರ್ ಅವರು ಬಡವರ ಅಸಹಾಯಕತೆಯನ್ನು ಮಾತ್ರ ಗುರುತಿಸುವ ಸಾಂಪ್ರದಾಯಿಕ ನೋಟವನ್ನು ಮೀರಿ ಹೊಸ ಬಗೆಯ ದೃಷ್ಟಿಕೋನವನ್ನು ಇಲ್ಲಿ ಪರಿಚಯಿಸಿದ್ದಾರೆ.

ಪ್ರಸ್ತುತ ಕೈಗೊಂಡಿರುವ ಅಧ್ಯಯನದ ಪ್ರಮುಖ ಪರಿಕಲ್ಪನೆಯಾದ ಪ್ರತಿರೋಧವನ್ನು ಹೆಚ್ಚು ವಿಶ್ಲೇಷಿಸಲು ಡಿ.ಆರ್ ಅವರ ಹಿನ್ನುಡಿ ಹೆಚ್ಚು ಸಹಕಾರಿಯಾಗುತ್ತದೆ. ಇಂದಿಗೂ ಸಹ ದಲಿತರು ಎಂದರೆ ಕೇವಲ ಅಪಮಾನಿತರು ಎಂದು ಭಾವಿಸುವರಿದ್ದಾರೆ. ದಲಿತರೊಳಗಿರುವ ಚೈತನ್ಯಾತ್ಮಕತೆಯನ್ನು ಗುರುತಿಸುವುದು ಅಪರೂಪದ ಸಂಗತಿಯಾಗಿದೆ. 'ಬಡವರ ನಗುವಿನ ಶಕ್ತಿ' ಎಂಬ ಲೇಖನವು ಇಂತಹ ಅಪರೂಪದ ಬರಹವಾಗಿದೆ. ಹಿನ್ನುಡಿಯ ಶೀರ್ಷಿಕೆಯಲ್ಲಿ ಜಾತಿ ಸಮಸ್ಯೆಯನ್ನು ವರ್ಗಕ್ಕೆ ಅನ್ವಯಿಸಿ ಬಡವರ ಎಂಬುದಾದ ಪದ ಬಳಕೆಯಾಗಿದ್ದರೆ, ನಗುವು ಎನ್ನುವ ಪದ ಕೂಡ ಒಂದು ಶಕ್ತಿಯಾಗಿಯೂ, ಪ್ರತಿರೋಧದ ಸಂಗತಿಯೂ ಆಗಿದೆ. "ದಲಿತನ ಸಿಟ್ಟಿನಿಂದ ಲೋಕ ಒಡೆದು ಹೋಗುವದು ಕೊಂಚ ಅನುಮಾನದ ಸಂಗತಿ. ಆದರೆ, ಇಲ್ಲಿ ಆತ ಗೊಳ್ಳೆಂದು ನಗುವ ರೀತಿಗೆ ಲೋಕ ಬೆಚ್ಚಿ ಜಾರಿ ಬೀಳುವುದು ಖಾತ್ರಿ."[೧೭] ಈ ಹೇಳಿಕೆಯಂತೆ ನಗು ಇಲ್ಲಿ ತನ್ನ ಎದುರಾಳಿಯ ಅಮಾನವೀಯ ಮನಸ್ಸನ್ನು ಕುಹಕದಿಂದ ನೋಡುತ್ತಿದೆ.

ಅಧ್ಯಯನದ ಕೊರತೆಗಳಿಗೆ ಸಂಬಂಧಿಸಿದಂತೆ ನಗುವೊಂದೆ ಸಂಪೂರ್ಣ ದಲಿತತ್ವವನ್ನು ಹಿಡಿದಿಡುವುದಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ದಲಿತರ ಬದುಕಿನಲ್ಲಿ ಅವಮಾನಗಳ ಜೊತೆಗೆ ಸಂಭ್ರಮ ಮತ್ತು ಚೈತನ್ಯಾತ್ಮಕತೆ ಇರುವುದು ನಿಜವಾದರೂ; ಸಂಭ್ರಮಕ್ಕೆ ಹೆಚ್ಚು ಮಹತ್ವ ಕೊಟ್ಟಷ್ಟು ದಲಿತ ಬದುಕನ್ನು ಸಂಪೂರ್ಣವಾಗಿ ಹಿಡಿದಿಟ್ಟಂತಾಗುವುದಿಲ್ಲ. ಕೇವಲ 'ಊರುಕೇರಿ' ಕೃತಿಯನ್ನು ಮಾತ್ರ ಇಟ್ಟುಕೊಂಡು ಇಡೀ ದಲಿತರನ್ನು ಸಾಧಾರಣೀಕರಿಸುವುದು ಪರಿಪೂರ್ಣವಲ್ಲ. ಏಕೆಂದರೆ

ದಲಿತರೊಳಗಡೆಯೇ ಜಾತಿ, ವರ್ಗ, ಲಿಂಗ ತಾರತಮ್ಯಗಳಿರುವುದು ಎಲ್ಲಾ ದಲಿತರು ಒಂದೇ ಎನ್ನುವ ಧೋರಣೆಯನ್ನು ನಿರಾಕರಿಸುತ್ತದೆ. ಆತ್ಮಕಥೆಯಾದರೂ ಸಹ ಅದೊಂದು ಸೃಜನಶೀಲ ಕೃತಿಯಾಗಿರುತ್ತದೆ. ಅಲ್ಲಿ ಸೃಷ್ಟಿಸಿರುವ ಜಗತ್ತು ಯಥಾವತ್ತಾಗಿ ಸಮಾಜದಲ್ಲಿರುತ್ತದೆಯೇ ಎಂಬುದನ್ನು ಪ್ರಶ್ನಿಸಿಕೊಳ್ಳಬೇಕಾಗುತ್ತದೆ. ಗೌಡನಿಂದ ಹೊಡೆತ ತಿಂದ ವ್ಯಕ್ತಿ ನಗುತ್ತಿರುತ್ತಾನೆಯೇ? ಕಂಬಾಲಪಲ್ಲಿಯಲ್ಲಿ ನಗು ಕಾಣುತ್ತದೆಯೇ? ಹೀಗೆ ಹಲವಾರು ಪ್ರಶ್ನೆಗಳನ್ನು ಇಟ್ಟುಕೊಂಡು ಡಿ.ಆರ್ ಅವರ ಲೇಖನವನ್ನು ನೋಡಬೇಕಾಗುತ್ತದೆ. ಇದೇ ಕಾರಣಕ್ಕಾಗಿ ಬಿ.ಎಂ ಪುಟ್ಟಯ್ಯನವರು 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ' ಕೃತಿಯಲ್ಲಿ "ರಾಜಕೀಯ, ಆರ್ಥಿಕೇತರ ಹಿನ್ನೆಲೆಯಲ್ಲಿ ಬಡತನವನ್ನು ಕಾಣಬೇಕೆಂಬುದು ಅವರ ನಿಲುವು ಮತ್ತು ಸಾಮಾಜಿಕ, ರಾಜಕೀಯ, ಆರ್ಥಿಕ ಹಿನ್ನೆಲೆಯಲ್ಲಿ ನೋಡುವುದು ಬಡವನ ಸಮಗ್ರ ಬದುಕನ್ನು ವೀಕ್ಷಿಸಿದಂತೆ, ವರ್ಗ ದೃಷ್ಟಿಕೋನವನ್ನು ವರ್ಗಾಯಿಸುವುದು ನಾಜೂಕಾದ ಪಾರಂಪರಿಕ ವಿಧಾನ ಹಾಗಾಗಿ ಡಿ.ಆರ್ ನಾಗರಾಜ್ ಕಮ್ಯುನಿಸಂನ ಪಕ್ಕಾ ವಿರೋಧಿ ಮತ್ತು ಬಡತನ ಯಥಾಸ್ಥಿತಿಯಲ್ಲಿ ಮುಂದುವರಿಯಬೇಕು ಎಂದು ನಯವಾಗಿ ವರ್ಣಿಸುವ ಸಾಮ್ರಾಜ್ಯಶಾಹಿ ವಕಾಲತ್ತುದಾರ"[೧೮] ಎಂದು ಡಿ.ಆರ್ ಅವರ ಅಭಿಪ್ರಾಯವನ್ನು ಟೀಕಿಸಿದ್ದಾರೆ.

ಸಾಮಾಜಿಕ, ಆರ್ಥಿಕ, ರಾಜಕೀಯೇತರವಾಗಿ ನೋಡುವುದರಿಂದ ದಲಿತತೆಯನ್ನು ಒಪ್ಪಿಕೊಂಡಂತ್ತಾಗುತ್ತದೆ ಎಂದು ಹೇಳುತ್ತಾ, ಸಮಸ್ಯೆಗಳ ಮೇಲೆ ಗಮನಹರಿಸಿದ್ದಕ್ಕಾಗಿಯೇ ಸಮಾಜವಾದ, ಕಮ್ಯುನಿಸಂ ನ್ಯಾಯ ಒದಗಿಸಿದವು ಎಂದು ಪುಟ್ಟಯ್ಯನವರು ಹೇಳುತ್ತಾರೆ. ದಮನಿತರನ್ನು ಆರ್ಥಿಕೇತರ ಆಯಾಮದಲ್ಲಿ ನೋಡುವುದರಿಂದ ದಲಿತರ ನಿಜವಾದ ಸಮಸ್ಯೆಗಳ ಚರ್ಚೆ ಪಲ್ಲಟಗೊಳ್ಳುವ ಸಾಧ್ಯತೆ ಇರುತ್ತದೆ ಎನ್ನಬಹುದು. ವಾಸ್ತವವಾಗಿ ದಲಿತರು ಎಂಬುದು ಹಲವು ಸ್ತರಗಳುಳ್ಳ ಪದವಾಗಿದೆ. ನೋವು, ಅಪಮಾನಗಳು ದಲಿತರೊಳಗಡೆಯ ಹಲವು ಜಾತಿಗಳಿಗೆ ಹಲವು ರೀತಿಗಳಲ್ಲಿ ಉಂಟಾಗುತ್ತವೆ. ದಲಿತರೊಳಗಡೆಯೇ ಲಿಂಗದ ಕಾರಣಕ್ಕಾಗಿ ಹೆಣ್ಣು ಅವಮಾನ ಅನುಭವಿಸುವಂತಹದ್ದನ್ನು ಕಾಣಬಹುದು. ಹೀಗೆ ಹಲವಾರು ಆಯಾಮಗಳಿರುವಾಗ ದಲಿತರು ಎಂದು ಸಾಮಾನ್ಯಿಕರಿಸುವುದು ಮಿತಿಯಾಗುತ್ತದೆ. ಶೋಷಿತರ ಬದುಕಿನಲ್ಲಿ ದಾರುಣತೆ ಮತ್ತು ಸಂಭ್ರಮಗಳೆರಡು ಇರುತ್ತವೆ. ನೋವು, ಅವಮಾನಗಳ ನಡುವೆಯೂ ತಮ್ಮದೆಯಾದ ಜ್ಞಾನ ಪರಂಪರೆಯನ್ನು, ಕಲಾತ್ಮಕ ಬದುಕನ್ನು ಕಟ್ಟಿಕೊಂಡಿರುವಂತಹ ದಲಿತರ ಬದುಕಿನಲ್ಲಿ; ಏಕಮುಖವಾಗಿ ಅಪಮಾನಗಳನ್ನು ಮಾತ್ರ ಗುರುತಿಸದೆ ಅಥವಾ ಚೈತನ್ಯಾತ್ಮಕತೆಯನ್ನು ಮಾತ್ರ ಗುರುತಿಸಿದರೆ ದಲಿತರಿಗೆ ಸಮಸ್ಯೆಗಳೇ ಇಲ್ಲವೆಂದಾಗುತ್ತದೆ. ಹಾಗಾಗಿ ದಲಿತ ಬದುಕಿನ ದಾರುಣತೆ ಮತ್ತು ಸಂಭ್ರಮ ಎರಡನ್ನು ವಾಸ್ತವಿಕ ನೋವಿಗೆ ಪರದೆ ಎಳೆಯದಂತೆ ವಿಶ್ಲೇಷಿಸುವುದು ಹೆಚ್ಚು ಸೂಕ್ತವಾಗುತ್ತದೆ.

**೨.೩.೨. ಹಸಿವು, ಅಕ್ಷರ, ಅಭಿವ್ಯಕ್ತಿ – ವಿಠಲರಾವ್ ಗಾಯಕ್ವಾಡ್**

೧೯೯೯ರಲ್ಲಿ ಸಂಕ್ರಮಣ ಪತ್ರಿಕೆಯಲ್ಲಿ ಪ್ರಕಟವಾದ ಪ್ರಸ್ತುತ ಲೇಖನವನ್ನು ವಿಠಲರಾವ್ ಗಾಯಕ್ವಾಡ್‌ರು ಬರೆದಿದ್ದಾರೆ. ಪ್ರಸ್ತುತ ಲೇಖನವು ಹಸಿವು, ಅಕ್ಷರ ಮತ್ತು ಅಭಿವ್ಯಕ್ತಿಗೆ ಮಾತ್ರ

ಸೀಮಿತವಾಗದೆ ಭಾರತೀಯ ಸಾಮಾಜಿಕ ಸಂರಚನೆ, ಶಿಕ್ಷಣ ಮುಂತಾದ ಅನೇಕ ಸಂಗತಿಗಳನ್ನು ಚರ್ಚಿಸುವುದರ ಮೂಲಕ ೫ ಆತ್ಮಕಥೆಗಳನ್ನು ('ಗೌರ್ಮೆಂಟ್ ಬ್ರಾಹ್ಮಣ', 'ಗಬಾಳ,' 'ಅಕ್ರಮ ಸಂತಾನ,' 'ಉಚಲ್ಯಾ' 'ಊರುಕೇರಿ') ಭಾರತೀಯ ಸಮಾಜದ ಮಟ್ಟ ಕನ್ನಡಿಯಂತೆ ನೋಡಲಾಗಿದೆ.

ತಮ್ಮ ಲೇಖನದಲ್ಲಿ ಗಾಯಕವಾಡರು ಸಾಂಪ್ರದಾಯಿಕ ಅಕ್ಷರ ಮತ್ತು ವೈಚಾರಿಕ ಅಕ್ಷರ ಭಾರತೀಯ ಸಮಾಜವನ್ನು ಪ್ರಭಾವಿಸಿವೆ. ಅಕ್ಷರದೊಳಗಿನ ಈ ಸಾಂಸ್ಕೃತಿಕ ಭಿನ್ನತೆ ಮಾನವನ ಆಲೋಚನೆಗಳ ಶಿಶುಗಳಾಗಿವೆ. ಅಂದರೆ ಸಾಂಪ್ರದಾಯಿಕ ಮನಸ್ಸು ಅಕ್ಷರವನ್ನು ಬಳಸಿಕೊಂಡು ಬರೆದಿದ್ದನ್ನೆಲ್ಲ ದೈವ ನಿರ್ಮಿತ ಎಂದು ಅಕ್ಷರ ವಂಚಿತ ಸಮುದಾಯಗಳಿಗೆ ನಂಬಿಸುತ್ತಾ ಬಂದಿದ್ದರೆ, ವೈಚಾರಿಕ ಅಕ್ಷರದ ಜ್ಞಾನದ ಮೂಲಕ ಅಕ್ಷರ ವಂಚಿತ ಸಮುದಾಯಗಳ ಪರವಾಗಿ ಹೋರಾಟ ಮಾಡುವುದು ಮತ್ತೊಂದು ಬಗೆಯಾಗಿದೆ ಎಂದು ಪ್ರತಿಪಾದಿಸುತ್ತಾರೆ. ಸಾಮಾಜಿಕ, ಆರ್ಥಿಕ ವೈರುಧ್ಯಗಳು ದಲಿತರನ್ನು ಅವಮಾನಿತರಂತೆ ಬದುಕುವ ಹಾಗೆ ಮಾಡಿವೆ. ಸಾಮಾಜಿಕ, ಆರ್ಥಿಕ ವೈರುಧ್ಯಗಳೆಂದರೆ ದಲಿತರು ತಾವೇ ಬೆವರು ಸುರಿಸಿ ಕಟ್ಟಿದಂತಹ ಗುಡಿ ಗುಂಡಾರಗಳಿಗೆ ಪ್ರವೇಶವಿಲ್ಲದೆ ಅವಮಾನಕ್ಕೆ ಒಳಗಾಗುವುದಾಗಿದೆ. ಇಲ್ಲಿ ಗುಡಿ ಕಟ್ಟುವಾಗ, ಮನೆ ಕಟ್ಟುವಾಗ ಇಲ್ಲದಿರುವ ಅಸ್ಪೃಶ್ಯತೆಯು, ಪೂಜಿಸಲ್ಪಟ್ಟ ತಕ್ಷಣದಿಂದ ಮಡಿವಂತಿಕೆ ಕಾಯ್ದುಕೊಳ್ಳಲಾಗುತ್ತದೆ. ಪ್ರಭುತ್ವವು ದಲಿತರ ಶ್ರಮದ ಬಂಡವಾಳವನ್ನು ಬಳಸಿಕೊಂಡು, ಆ ನಂತರ ಅವರನ್ನು ದೂರ ಇಡುವ ಶೋಷಿಸುವ ಮನಸ್ಥಿತಿ ಇಲ್ಲಿ ಕಾಣುತ್ತದೆ. ಸರ್ದೇಸಾಯಿಯವರ ಅಭಿಪ್ರಾಯದಂತೆ "ಸಮಾಜವು ಸಾವಿರಾರು ಹೋಳುಗಳಾಗಿ ಛಿದ್ರಗೊಂಡು ಜಾತಿ ಜಾತಿಗಳ ನಡುವೆ ಪರಸ್ಪರ ಹೊಕ್ಕು ಬಳಕೆಯ ಬಾಗಿಲು ಭದ್ರವಾಗಿ ಮುಚ್ಚಲ್ಪಟ್ಟಾಗ, ಆ ಸಮಾಜವು ತಾನಾಗಿ ಅವನತಿಯನ್ನು ಆಹ್ವಾನಿಸಿದಂತೆ."[೧೯] ಈ ಹೇಳಿಕೆಯು ವರ್ತಮಾನ ಸಮಾಜವನ್ನು ಹಿಡಿದಿಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ಇತ್ತೀಚಿಗೆ ಸಮಾಜವು ಹಲವು ಹೋಳುಗಳಾಗಿದೆ. ಪ್ರಭುತ್ವವು ಅಧಿಕಾರಕೇಂದ್ರಿತ ರಾಜಕಾರಣದ ಫಲವಾಗಿ ಜಾತಿ, ಜಾತಿಗಳ ಒಳಗೆ ಅನಾರೋಗ್ಯಕರ ಸ್ಪರ್ಧೆ ನಿರ್ಮಿಸಿ, ಸಮುದಾಯಗಳೊಳಗೆ ಹಲವು ಬಿಕ್ಕಟ್ಟುಗಳನ್ನುಂಟು ಮಾಡಿವೆ. ಇವುಗಳಿಂದ ಮುಕ್ತವಾಗಬೇಕಾಗಿರುವುದು ಸದ್ಯದ ತುರ್ತಾಗಿದೆ. ಜೊತೆಗೆ ದಲಿತ ಆತ್ಮಕಥೆಗಳು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಮತಾಂತರ, ಹಿಂಸೆ ದ್ವೇಷಾದಿ ಮಾರ್ಗಗಳನ್ನು ಪರಿಹಾರವಾಗಿ ಹೇಳುವುದಿಲ್ಲ. ತಾಳ್ಮೆ, ಸಹಿಷ್ಣುತೆ, ವೈಯಕ್ತಿಕ, ಸಾಮಾಜಿಕ ಹೊಣೆಗಾರಿಕೆಯನ್ನು ಧ್ವನಿಸುತ್ತವೆ. ಜೊತೆಗೆ ಹೋರಾಟಗಳು ಕೂಡ ಅನಿವಾರ್ಯ ಎಂದು ಹೇಳುತ್ತವೆ.

ಲೇಖನದ ಮಿತಿಗೆ ಸಂಬಂಧಿಸಿದಂತೆ ಗುರುತಿಸುವುದಾದರೆ ದಲಿತ ಆತ್ಮಕಥೆಗಳನ್ನು ಕುರಿತಂತೆ ಲೇಖಕರು "ಈ ಆತ್ಮಕಥೆಗಳು ಕೆಳಸ್ತರದ ಅನುಭವಗಳನ್ನೇಳುವುದರ ಜೊತೆಗೆ ಮೀಸಲಾತಿಯನ್ನು ರಾಜಕೀಯ ಬಂಡವಾಳ ಮಾಡಿಕೊಂಡು ಸಮಗ್ರ ಜನತೆಯ ಅಭಿವೃದ್ಧಿಯನ್ನು ಸಾಧಿಸಲಾಗದೆ

ಹೋಗಿರುವ ಕಾರಣ ನಮ್ಮ ಸಂವಿಧಾನದ ಸ್ವರೂಪವನ್ನು ಇಲ್ಲಿ ಪ್ರಶ್ನೆ ಮಾಡುತ್ತದೆ”[೨೦] ಎಂದು ಬರೆಯುತ್ತಾರೆ. ಸಮಸ್ಯೆ ಇರುವುದು ಸಂವಿಧಾನದ ಸ್ವರೂಪದಲ್ಲಿ ಎಂದು ಆತ್ಮಕಥೆಗಳು ಹೇಳುತ್ತವೆ ಎಂಬುದಕ್ಕಿಂತ ಅದನ್ನು ಸರಿಯಾದ ರೀತಿ ಜಾರಿಗೆ ತರಲಾಗುವುದರಲ್ಲಿದೆ ಎಂದು ಹೇಳಬಹುದಾಗಿತ್ತು. ಮೀಸಲಾತಿಯು ಇಂದು ರಾಜಕಾರಣಕ್ಕೆ ಬಳಕೆಯಾಗುತ್ತಿದೆ. ಒಂದು ಕಾಲದಲ್ಲಿ ಮೀಸಲಾತಿ ಬೇಡ ಎಂದವರೇ ಇಂದು ಬೇಕು ಎಂದು ಹಪಹಪಿಸುತ್ತಿದ್ದಾರೆ. ಮೀಸಲಾತಿ ಹಾಗೂ ಇತರೆ ಸೌಲಭ್ಯಗಳು ಸಮಾಜದ ಕೊನೆಯ ವ್ಯಕ್ತಿಗೆ ತಲುಪುವುದು ಸುಲಭವಾಗದೆ, ಎಲ್ಲಾ ಸಮುದಾಯದ ಪ್ರಬಲರ ಕೈವಶವಾಗುವುದೇ ಹೆಚ್ಚಾಗಿದೆ. ಈ ಕಾರಣಗಳಿಂದ ಸುಧಾರಣೆಯು ಅವ್ಯವಸ್ಥೆಯಿಂದ ಕೂಡಿದೆ, ಹೀಗಾಗಿ ಲೇಖನಕಾರರು ಹೇಳಿದಂತೆ ಆತ್ಮಕಥನಕಾರರು ಸಂವಿಧಾನದ ಸ್ವರೂಪವನ್ನು ಪ್ರಶ್ನೆ ಮಾಡುತ್ತಾರೆ ಎಂಬುದಕ್ಕಿಂತ, ಅದನ್ನು ಸರಿಯಾದ ರೀತಿಯಲ್ಲಿ ಜಾರಿಗೆ ತರುವಲ್ಲಿ ವಿಫಲವಾಗಿರುವುದನ್ನು ಪ್ರಶ್ನಿಸುತ್ತಾರೆ ಎಂದು ಹೇಳಬಹುದಾಗಿದೆ.

ಪ್ರಸ್ತುತ ಲೇಖನದಲ್ಲಿ ಲೇಖಕರು ಐದು ಆತ್ಮಕಥೆಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದ್ದಾರೇ ಆದರೆ ಇದರ ಬದಲಿಗೆ ಐದೂ ಆತ್ಮಕಥೆಗಳನ್ನು ತೌಲನಿಕವಾಗಿ ಚರ್ಚಿಸುವ ಸಾಧ್ಯತೆಗಳಿತ್ತು. ಯಾಕೆಂದರೆ ಎಲ್ಲಾ ದಲಿತ ಆತ್ಮಕಥೆಗಳ ಸ್ವರೂಪ ಒಂದೇ ರೀತಿ ಇರುವುದಿಲ್ಲ. ಅವು ವ್ಯಕ್ತಿಯ ಪ್ರಾದೇಶಿಕತೆಯನ್ನು, ಆರ್ಥಿಕತೆಯನ್ನು, ಜಾತಿಯನ್ನು ಅವಲಂಬಿಸಿರುತ್ತವೆ. ಉದಾಹರಣೆಗೆ ಪ್ರಾದೇಶಿಕವಾಗಿ ನಗರ ಕೇಂದ್ರಿತವಾದ, ಸಿದ್ಧಲಿಂಗಯ್ಯ ಅವರ ‘ಊರುಕೇರಿ’ಗೂ ಹಳ್ಳಿಯ ಜಮೀನ್ದಾರಿಕೆಯ ದಬ್ಬಾಳಿಕೆಯುಳ್ಳ ಮತ್ತು ದಲಿತರಲ್ಲೇ ಪಂಚಮರಾದ ಅರವಿಂದ ಮಾಲಗತ್ತಿಯವರ ‘ಗೌರ್ಮೆಂಟ್ ಬ್ರಾಹ್ಮಣ’ಕ್ಕೂ ಬಹಳ ವ್ಯತಾಸಗಳಿವೆ. ಹೀಗಾಗಿ ಬೇರೆ ಬೇರೆ ಆಯಾಮಗಳುಳ್ಳ ಆತ್ಮಕಥೆಗಳನ್ನು ಏಕಮುಖವಾಗಿ ಗ್ರಹಿಸದೆ ಅವುಗಳೊಳಗಿನ ಸಾಂಸ್ಕೃತಿಕ ಚಹರೆಗಳನ್ನು ತೌಲನಿಕವಾಗಿ ಗುರುತಿಸಬೇಕಾಗಿದೆ.

**೨.೩.೩. ದಲಿತ ಆತ್ಮಕಥೆಗಳು** – ನೀಲಗಿರಿ ತಳವಾರ

‘ದಲಿತ ಆತ್ಮಕಥೆಗಳು’ ಲೇಖನವು ‘ಕನ್ನಡ ದಲಿತ ಸಾಹಿತ್ಯ ಸಮಾಲೋಕನ’ ಕೃತಿಯಲ್ಲಿ ಪ್ರಕಟವಾಗಿದೆ. ನೀಲಗಿರಿ ತಳವಾರರು ಬರೆದ ಪ್ರಸ್ತುತ ಲೇಖನವು ಕನ್ನಡ ಸಾಹಿತ್ಯದಲ್ಲಿ ದಲಿತ ಆತ್ಮಕಥೆಗಳ ಒಟ್ಟು ಸ್ವರೂಪವನ್ನು ಕುರಿತು ಚರ್ಚಿಸುತ್ತದೆ. ದಲಿತ ಆತ್ಮಕಥೆಗಳಿಗೆ ಸಾಹಿತ್ಯವಲಯ, ಓದುಗ ವಲಯ ಪ್ರತಿಕ್ರಿಯಿಸಿದ ಬಗೆಯನ್ನು ಚರ್ಚಿಸುತ್ತಾ ದಲಿತ ಆತ್ಮಕಥೆಗಳು ಅಭಿವ್ಯಕ್ತಿಗೊಂಡ ಹಲವು ಸಂಗತಿಗಳ ಬಗ್ಗೆ ಚರ್ಚಿಸಲಾಗಿದೆ. ಭಾರತೀಯ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಸುದೀರ್ಘ ಇತಿಹಾಸವಿದೆಯಾದರೂ ಅದು ಸಮಗ್ರ ಭಾರತೀಯರನ್ನು ಒಳಗೊಂಡ ಸಾಹಿತ್ಯವಾಗಲಿಲ್ಲ. ತಳವಾರರ ಈ ಪ್ರತಿಪಾದನೆ ಒಪ್ಪುವಂತಹದ್ದು. ಭಾರತೀಯ ಸಾಹಿತ್ಯ ಮೀಮಾಂಸೆ ಎಂಬುದು ಶಿಷ್ಟವಾಗಿದ್ದು, ಪ್ರಭುತ್ವ ಮತ್ತು ಭಕ್ತಿ ಕೇಂದ್ರಿತವಾಗಿಯೇ ಬಹುತೇಕ ಅಭಿವ್ಯಕ್ತಿಗೊಂಡಿತ್ತು. ಹೀಗಾಗಿ

ದಮನಿತರ ಮೇಲಾಗುತ್ತಿದ್ದ ತಾರತಮ್ಯಗಳನ್ನು ಪ್ರತಿರೋಧಿಸುವ ಅಂಶಗಳು ಕಡಿಮೆ ಪ್ರಮಾಣದಲ್ಲಿದ್ದವು. ಈ ಅಭಿಪ್ರಾಯಕ್ಕೆ ಕೆಲವು ಅಪವಾದಗಳಿದ್ದರೂ (ವಚನ ಸಾಹಿತ್ಯ, ಇತ್ಯಾದಿ) ಸಾಹಿತ್ಯವು ಸಂಪೂರ್ಣ ಪ್ರಮಾಣದಲ್ಲಿ ದಲಿತರನ್ನು ಹಿಡಿದಿಡುವಂತಹ ಸಾಹಿತ್ಯವಾಗಿರಲಿಲ್ಲ. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಅಕ್ಷರ ವಂಚಿತ ಸಮುದಾಯಗಳು ತಮ್ಮ ಬದುಕನ್ನು ಅಕ್ಷರಗಳ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಿದರೂ ಸಹ ದಲಿತರನ್ನು ಗುಮಾನಿಯಿಂದ ನೋಡುವಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ಹೀಗೆ ಭಾರತೀಯ ಸಾಹಿತ್ಯವು ಹಲವು ರೂಪಾಂತರಗಳನ್ನು ಹೊಂದುತ್ತಾ ಸಾಗಿರುವುದನ್ನು ಕಾಣಬಹುದು. ದಲಿತ ಆತ್ಮಕಥೆಗಳ ರಚನೆಗೆ ಇರುವ ಕಾರಣಗಳಲ್ಲಿ ಮರಾಠಿ ಆತ್ಮಕಥೆಗಳ ಪ್ರಭಾವವು ಕೂಡ ಒಂದು ಕಾರಣವಾಗಿದೆ. ಮಹಾರಾಷ್ಟ್ರವು ಅಂಬೇಡ್ಕರ್, ಸಾವಿತ್ರಿಬಾಯಿ ಫುಲೆಯವರ ಪ್ರಭಾವಕ್ಕೆ ನೇರವಾಗಿ ಒಳಗಾದಂತಹ ಸ್ಥಳವಾಗಿದ್ದು, ದಲಿತ ಆತ್ಮಕಥೆಗಳು ಹುಟ್ಟುವುದು ಸಹಜವಾಗಿತ್ತು ಮತ್ತು ಇತರೆ ಭಾಷಿಕ ಸಾಹಿತ್ಯದ ಮೇಲೂ ಅವು ಪ್ರಭಾವ ಬೀರಿದವು. ಈ ಪ್ರೇರಣೆಯ ಫಲವಾಗಿ ಕನ್ನಡದಲ್ಲೂ ದಲಿತ ಆತ್ಮಕಥೆಗಳು ರಚನೆಯಾದವು.

ದಲಿತ ಆತ್ಮಕಥೆಗಳಲ್ಲಿ ದಮನದ ಕಾರಣಕ್ಕಾಗಿ ಆಕ್ರೋಶ ಭಾವನೆಗಳಿರುವುದು ಸಹಜವಾಗಿದ್ದರೂ, ಜಾತಿಗಳನ್ನು ಮೀರಿ ಸ್ಪಂದಿಸುವವರ ಮೇಲೆ ಅಭಿಮಾನವನ್ನು ತೋರುವ ಸಂಗತಿಗಳೂ ಇವೆ. ಉದಾಹರಣೆಗೆ ಸಿದ್ಧಲಿಂಗಯ್ಯರವರ 'ಊರುಕೇರಿ' ಆತ್ಮಕಥೆಯಲ್ಲಿ ಮೇಲ್ಜಾತಿಯವರಾದರೂ ಒಬ್ಬ ದಲಿತನಿಗೆ ಶಿಕ್ಷಣ ನೀಡಿದಂತಹ ಮೇಷ್ಟ್ರನ್ನು ಲೇಖಕರು ಸ್ಮರಿಸಿಕೊಳ್ಳುತ್ತಾರೆ. ತುಂಬಾಡಿ ರಾಮಯ್ಯರ 'ಮಣೆಗಾರ' ಆತ್ಮಕಥೆಯಲ್ಲಿ ಬದುಕು ಕಟ್ಟಿಕೊಳ್ಳಲು ಸಹಕರಿಸಿದ 'ಮೇಲ್ಜಾತಿ' ಎಂದು ಕರೆಯಲಾಗುವ ಹಲವು ವ್ಯಕ್ತಿಗಳ ಬಗ್ಗೆ ಹೇಳುತ್ತಾರೆ. ಹೀಗೆ ದಲಿತ ಆತ್ಮಕಥೆಗಳು ಆಕ್ರೋಶ ಮತ್ತು ಮಾನವೀಯತೆಯ ಸಂಗ್ರಹಗಳಾಗಿವೆ. ನೀಲಗಿರಿ ತಳವಾರರು 'ಗೌರ್ಮೆಂಟ್ ಬ್ರಾಹ್ಮಣ'ದ ಅಭಿವ್ಯಕ್ತಿ ಶೈಲಿಯ ಕುರಿತು "ಮಾಲಗತ್ತಿಯವರು ಆತ್ಮಕಥೆಗಳಲ್ಲಿ ಪೀಠಿಕೆ ಮೂಲಕ ಆರಂಭಿಸುತ್ತಾರೆ. ನಂತರ ಪ್ರಸಂಗದ ನಿರೂಪಣೆ, ಕೊನೆಯಲ್ಲಿ ಅದು ಪ್ರಶ್ನೆ ಅಥವಾ ಗಂಭೀರ ಸ್ವರೂಪದಲ್ಲಿ ಮುಕ್ತಾಯವಾಗುತ್ತದೆ"[೨೧] ಎಂದು ಹೇಳುತ್ತಾರೆ. ಆತ್ಮಕಥೆಗಳ ನಿರೂಪಣ ಶೈಲಿಗೂ ವಸ್ತು ವಿಷಯಕ್ಕೂ ಒಂದಕ್ಕೊಂದು ಸಂಬಂಧವಿರುತ್ತದೆ. ಅದನ್ನು ಕಥನಕ್ರಮ ಎಂದು ಕರೆಯುತ್ತೇವೆ. 'ಗೌರ್ಮೆಂಟ್ ಬ್ರಾಹ್ಮಣ' ಹಾಡ್ಗತೆಯಂತೆ ಓದಿಸಿಕೊಳ್ಳುತ್ತಾ, ಆಪ್ತವಾಗುತ್ತದೆ. ಆತ್ಮಕಥೆಯು ಸೃಜನಶೀಲವಾಗುವುದು ಇಲ್ಲಿಯೇ. ವ್ಯಕ್ತಿಯ ಖಾಸಗಿ ಬದುಕು ಕಲಾತ್ಮಕವಾಗಿ ನಿರೂಪಣೆಗೊಂಡರೆ ಮಾತ್ರ ಅದು ಓದುಗರನ್ನು ಸೆಳೆಯುತ್ತದೆ ಮತ್ತು ಓದಿಸಿಕೊಳ್ಳುತ್ತದೆ.

ದಲಿತ ಆತ್ಮಕಥೆಗಳನ್ನು ಕೇವಲ ಅವಮಾನ, ನೋವು, ಸಂಕಟಗಳ ದಾಖಲೆಗಳಂತೆ ವಿಶ್ಲೇಷಿಸಿರುವುದು. ಆತ್ಮಕಥೆಗಳು ಕೇವಲ ಅವಮಾನದ ಸರಕುಗಳಲ್ಲದೆ ಅಲ್ಲಿ ದಲಿತರು ತಮ್ಮ ಅಸಹಾಯಕ ಪರಿಸ್ಥಿತಿಯಲ್ಲಿಯೂ ಶೋಷಕ ವ್ಯವಸ್ಥೆಯನ್ನು ಪ್ರತಿರೋಧಿಸುವ ಹಲವು ಅಂಶಗಳಿವೆ.

ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಲ್ಲಿ ಪಂಚಮರು ಊಟ ಮಾಡಲಿಕ್ಕೆ ಇರುವಂತಹ ನಿರ್ಬಂಧಗಳನ್ನು ಮೀರಿ, ಬುದ್ಧಿವಂತಿಕೆಯ ಮೂಲಕ ಊಟ ಮಾಡುವುದು ದಲಿತರು ತಮ್ಮ ಅಸಹಾಯಕ ಪರಿಸ್ಥಿತಿಯಲ್ಲಿಯೂ ಶೋಷಕ ವ್ಯವಸ್ಥೆಗೆ ತೋರುವ ಪ್ರತಿರೋಧವೇ ಆಗಿದೆ. ಇಂತಹ ಸಂಗತಿಗಳು ಕೂಡ ಚರಿತ್ರೆ ನಿರ್ಮಾಣದಲ್ಲಿ ಬಹು ಮುಖ್ಯವಾದ ಸಂಗತಿಗಳಾಗಿರುವುದರಿಂದ ಇಂತಹ ಸಂಗತಿಗಳ ಬಗ್ಗೆ ಚರ್ಚಿಸುವುದು ಮುಖ್ಯವಾದ ಸಂಗತಿಯಾಗಿದೆ.

**೨.೩.೪. ಆತ್ಮಕಥೆ: ಕನ್ನಡ ಗದ್ಯದ ಅಧೋಲೋಕ** – ರಹಮತ್ ತರೀಕೆರೆ

ಯು.ಆರ್.ಅನಂತಮೂರ್ತಿಯವರಿಗೆ ೭೫ ವರ್ಷ ತುಂಬಿದ ನೆನಪಿಗಾಗಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮಾಡಿದ ಭಾಷಣವನ್ನು ವಿಸ್ತರಿಸುವ ಭಾಗವಾಗಿ ಪ್ರಸ್ತುತ ಲೇಖನವನ್ನು ರಹಮತ್ ತರೀಕೆರೆಯವರು ಬರೆದಿದ್ದಾರೆ. ಇಲ್ಲಿ ಸಾಹಿತ್ಯವನ್ನು ಪ್ರಕಾರ ಭೇದದಿಂದ ಮುಕ್ತವಾಗಿ ಪ್ರಜಾಪ್ರಭುತ್ವೀಯಾಗಿ ನೋಡಬೇಕು ಎಂಬ ಹಿನ್ನೆಲೆಯ ಜೊತೆಗೆ ಓದುಗರಿಗೆ ಆತ್ಮಕಥೆಗಳ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸುವ ಮತ್ತು ಓದುವ ಆಸಕ್ತಿ ಮೂಡಿಸುವ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನವಿದೆ.

ಈ ಲೇಖನದ ಮುಖ್ಯ ಪ್ರತಿಪಾದನೆಯೆಂದರೆ ಆತ್ಮಕಥೆಗಳನ್ನು ಚಾರಿತ್ರಿಕ ಕಾರಣಗಳೊಂದಿಗೆ ನೋಡುವುದು, ಯುರೋಪಿಯನ್ನರ ಸಂಪರ್ಕವು ಕೂಡ ಆತ್ಮಕಥೆಗಳ ರಚನೆಗೆ ಕಾರಣವಾಗಿವೆ. ಉದಾಹರಣೆಗೆ ಟಿಪ್ಪು ಯುರೋಪಿಯನ್ನರ ಸಂಪರ್ಕದಲ್ಲಿ ಇದ್ದ ಕಾರಣವೇ ಆತ್ಮಕಥನಾತ್ಮಕ ಕನಸುಗಳನ್ನು ಬರೆದಿಟ್ಟಿದ್ದಾನೆ. ಹೀಗೆ ಚಾರಿತ್ರಿಕವಾಗಿ ಬ್ರಿಟಿಷರ ಸಂಪರ್ಕವು ಭಾರತೀಯರಿಗೆ ಆತ್ಮಕಥೆಗಳ ಬಗ್ಗೆ ಪರಿಚಯವಾಗಲು ಕಾರಣವಾಯಿತು. ಇದು ಆತ್ಮಕಥೆಯ ರಚನೆಗೆ ಸಂಬಂಧಿಸಿದ ಚಾರಿತ್ರಿಕ ಕಾರಣವಾದರೆ ಮತ್ತೊಂದು ಕಾರಣ ಆತ್ಮಕಥೆಗಳ ಮೂಲಕ ಪ್ರಮುಖ ಚಾರಿತ್ರಿಕ ಘಟನೆಗಳನ್ನು ಅರಿಯುವುದು. ಏಣಗಿ ಬಾಳಪ್ಪನವರ 'ಬಣ್ಣದ ಬದುಕಿನ ಚಿನ್ನದ ದಿನಗಳು' ಆತ್ಮಕಥೆಯಲ್ಲಿ ಕರ್ನಾಟಕ ಏಕೀಕರಣ ಹಾಗೂ ಗೋಕಾಕ್ ಚಳವಳಿ ಕುರಿತ ವಿವರಗಳಿರುವುದು ಚಾರಿತ್ರಿಕ ಅಧ್ಯಯನಕ್ಕೆ ಉತ್ತಮ ಆಕರ ಆಗುತ್ತದೆ. ಹೀಗೆ ಆತ್ಮಕಥೆಗಳ ಅಧ್ಯಯನವು ಚಾರಿತ್ರಿಕ ಅಧ್ಯಯನಕ್ಕೆ ಉತ್ತಮ ಆಕರವಾಗುತ್ತವೆ.

ಸಾಹಿತ್ಯವನ್ನು ಪ್ರಕಾರ ಭೇದದಿಂದ ನೋಡಬೇಕು ಎಂಬುದು ಇಲ್ಲಿನ ಪ್ರಮುಖ ಪ್ರತಿಪಾದನೆಯಾಗಿದೆ. ನಾವು 'ಚೋಮನ ದುಡಿಗೆ' ಕೊಟ್ಟ ಮಹತ್ವ 'ಸ್ಮೃತಿಪಟಲದಿಂದ' ಸಂಪುಟಗಳಿಗೆ ನೀಡಿಲ್ಲ. ಗೋಕಾಕರ 'ಭಾರತ ಸಿಂಧು ರಶ್ಮಿ' ಚರ್ಚಿಸಬಲ್ಲೆವು. ಆದರೆ ಆತ್ಮಕಥನಗಳನ್ನು ಕುರಿತು ಚರ್ಚಿಸಲು ತಯಾರಿಲ್ಲ. ಎಷ್ಟೋ ಕಾದಂಬರಿಗಳು ನೀಡದ ಹಲವು ಹೊಳವುಗಳನ್ನು ಆತ್ಮಕಥೆಗಳು ನೀಡುತ್ತವೆ. ಕಡಿದಾಳ್ ಮಂಜಪ್ಪನವರ ಆತ್ಮಕಥೆಯು ಅವರ ಕಾದಂಬರಿಗಳಿಗಿಂತ ಮುಖ್ಯವಾಗಿದೆ. ಸಾರಾ ಅಬೂಬಕ್ಕರ್ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಚಿಕ್ಕ ಆತ್ಮಕಥನವಾದರೂ

ಅದೊಂದು ಸಾಂಸ್ಕೃತಿಕ ಸಂಕಥನವಾಗಿದೆ. ಆದರೆ ಎಷ್ಟೋ ಕಾದಂಬರಿ, ಕಥೆಗಳಿಗೆ ಇಂತಹ ಗುಣವಿರುವುದಿಲ್ಲ. ಹೀಗಾಗಿ ನಾವು ಕಾದಂಬರಿ, ಕಾವ್ಯಗಳು ಎಂಬ ಪ್ರಕಾರ ಭೇದದಿಂದ ಮುಕ್ತವಾಗಿ ಅವುಗಳ ಜೊತೆಗೆ ಆತ್ಮಕಥೆಗಳನ್ನು ಗಮನಿಸಬೇಕು ಎನ್ನಬಹುದಾಗಿದೆ.

ಅತಿಯಾದ ಪ್ರಾಮಾಣಿಕತೆಯನ್ನು ವ್ಯಕ್ತಪಡಿಸುವಂತೆ ನಿರೂಪಣೆಗೊಳ್ಳುವ ಕೆಲವು ಆತ್ಮಕಥೆಗಳು, ಹಲವು ಸಂಗತಿಗಳನ್ನು ಮುಕ್ತವಾಗಿ ಅಭಿವ್ಯಕ್ತಿಸುವುದಿಲ್ಲ. ಕೆಲವು ವ್ಯಕ್ತಿಗಳು ನಿಜ ಜೀವನದಲ್ಲಿ ತಾವು ಬಹಳ ಸಭ್ಯವಂತರು ಎಂದು ತೋರಿಸಿಕೊಳ್ಳಲು ಬಹುತೇಕ ತಮ್ಮ ಮೂಲ ಸ್ವರೂಪವನ್ನೆ ಮರೆಮಾಚಿ, ಸ್ವ ವೈಭವೀಕರಣ ಮಾಡುವ ಮೂಲಕ ಆತ್ಮಕಥೆಗಳನ್ನು ನಿರೂಪಣೆ ಮಾಡುವಂತಹ ಹಲವು ಸಂಗತಿಗಳಿವೆ. ಕನ್ನಡ ಸಾಹಿತ್ಯದಲ್ಲಿ ಇನ್ನೂ ಬರೆಯದ ಎಷ್ಟೋ ಆತ್ಮಕಥೆಗಳಿವೆ ಎಂಬುದು ಅಧ್ಯಯನಕಾರರ ಪ್ರತಿಪಾದನೆಯಾಗಿದೆ. ಅವರೇ ಹೇಳುವಂತೆ ಯುದ್ಧವನ್ನು ಮಾಡುವ ಸಂದರ್ಭದಲ್ಲಿನ ಅನುಭವಗಳು, ಹಿಮಾಲಯದ ಎತ್ತರವಾದ ಸ್ಥಳಗಳಲ್ಲಿ ಮಗು ಎತ್ತಿಕೊಂಡು ದುಡಿಯುವ ಮಹಿಳೆಯ ಅನುಭವ ಮತ್ತು ಕಕ್ಕಸ್ಸು ಗುಂಡಿಯಲ್ಲಿ ಇಳಿದು ಕೆಲಸ ಮಾಡುವ ಅನುಭವ ಹೀಗೆ ಇನ್ನು ಬಹುತೇಕ ಅನುಭವಗಳು ಆತ್ಮಕಥೆಗಳಾಗದೆ ಉಳಿದಿವೆ. ಇವು ಕೂಡ ಓದುಗವಲಯಕ್ಕೆ ವಿಶಿಷ್ಟ ಅನುಭವವನ್ನು ನೀಡಬಲ್ಲವಂತವುಗಳಾಗಿವೆ.

ದಲಿತರ, ಮಹಿಳೆಯರ ಆತ್ಮಕಥೆಗಳು ಗತವನ್ನು ನೆನೆಯುವುದರ ಮೂಲಕ ವರ್ತಮಾನದಲ್ಲಿ ಆತ್ಮವಿಶ್ವಾಸವನ್ನು ಪಡೆದುಕೊಂಡು ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಿವೆ. ದಲಿತರು ಮತ್ತು ಮಹಿಳೆಯರು ತಮ್ಮ ಬದುಕಿನಲ್ಲಿನ ನೋವು, ಅಪಮಾನಗಳನ್ನು ಉಂಡು ಅವುಗಳಿಂದ ಹೊರಬರುವುದಕ್ಕೆ ಮಾಡಿದ ಪ್ರಯತ್ನಗಳು ಏಕಕಾಲಕ್ಕೆ ಹಲವು ಪರಿಣಾಮಗಳನ್ನು ಉಂಟು ಮಾಡಿದವು. ಅವುಗಳೆಂದರೆ ಅಪಮಾನಗಳನ್ನು ಮೀರಿ ಬದುಕನ್ನು ಕಟ್ಟಿಕೊಳ್ಳುವುದು. ಉದಾಹರಣೆಗೆ ಶಿಕ್ಷಣ ಪಡೆಯುವಲ್ಲಿ ಆಗುವ ಅವಮಾನಗಳಿಂದ ಶಾಲೆ ಬಿಡುವ ಬದಲು ಓದಿ ಉತ್ತಮ ಕೆಲಸ ಪಡೆಯುವಂತಹ ಅರವಿಂದ ಮಾಲಗತ್ತಿಯವರ ಬದುಕು ಎಷ್ಟೋ ದಲಿತ ವಿದ್ಯಾರ್ಥಿಗಳಿಗೆ ಶಿಕ್ಷಣದ ಮಹತ್ವವನ್ನು ತಿಳಿಸಿದಂತಾಗುತ್ತದೆ. ಮತ್ತೊಂದು ಸಂಗತಿಯೆಂದರೆ ದಲಿತರೊಳಗೆ ಸ್ವಾಭಿಮಾನ ಮೂಡಿಸುವಂತಹದ್ದು. ದಲಿತ ಬದುಕನ್ನು ಎಂದೂ ಒಪ್ಪದ, ದಲಿತರೆಂದರೆ ಹೌಹಾರುವಂತಹವರಿಗೆ ನಮ್ಮದೂ ಒಂದು ಬದುಕು ಇದೆ ಎಂದು ಹೇಳುವುದು ಅಂದಿನ ಕಾಲದ ಮುಖ್ಯ ಸಂಗತಿಯೇ ಆಗಿದ್ದು, ಇದು ಒಂದು ಬಗೆಯ ಪ್ರತಿರೋಧವೇ ಆಗಿದೆ. ದಲಿತೇತರಲ್ಲಿ ಆತ್ಮವಿಮರ್ಶೆ ಮೂಡಿಸುವಂತಹ ಬಹುತೇಕ ಪ್ರಸಂಗಗಳು ಆತ್ಮಕಥೆಗಳಲ್ಲಿ ಪ್ರಕಟವಾದವು. ದಲಿತ ಆತ್ಮಕಥೆಗಳಲ್ಲಿರುವ ಅವಮಾನಿತ ಪ್ರಸಂಗಗಳು ಆತ್ಮಕಥೆಗಳನ್ನು ಓದುವವರಿಗೆ ಅಲ್ಪಕಾಲದವರೆಗಾದರೂ ತಮ್ಮ ಶೋಷಣೆಯ ವ್ಯವಸ್ಥೆ ಬಗ್ಗೆ ತಾವೇ ಆತ್ಮವಿಮರ್ಶೆ ಮಾಡಿಕೊಳ್ಳುವಂತಹ ಸಂಗತಿಗಳು ಆತ್ಮಕಥೆಗಳಲ್ಲಿವೆ. ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿನ ಬಟ್ಟೆ ತೊಳೆಯುವ ಪ್ರಸಂಗ,

'ಉಚಲ್ಯಾ'ದ ಸಗಣಿಯಲ್ಲಿ ಕಾಳು ಆರಿಸಿ ತಿನ್ನುವ ಪ್ರಸಂಗ ಇನ್ನೂ ಮುಂತಾದ ಪ್ರಸಂಗಗಳು ದಲಿತೇತರ ಓದುಗರಲ್ಲಿ ಅಲ್ಪಕಾಲದ ಮಟ್ಟಿಗಾದರೂ ಆತ್ಮವಿಮರ್ಶೆ ಮಾಡಿಕೊಳ್ಳುವಂತಹ ಪರಿಣಾಮವನ್ನು ಬೀರಿವೆ ಎನ್ನಬಹುದು.

ಆತ್ಮಕಥೆಗಳನ್ನು ಬಹುಶಿಸ್ತೀಯ ಆಕರಗಳನ್ನಾಗಿ ಬಳಸಬಹುದು ಎಂಬುದು ಬಹುಮುಖ್ಯವಾದಂತಹ ಅಂಶವಾಗಿದೆ. ದಲಿತರ, ಮಹಿಳೆಯರ ಆತ್ಮಕಥೆಗಳನ್ನಿಟ್ಟುಕೊಂಡು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಅವಕಾಶಗಳಿವೆ. ರಾಮರಾಯರ 'ಕೆಲವು ನೆನಪುಗಳು' ಆತ್ಮಕಥೆಯ ಮೂಲಕ ೨೦ನೇ ಶತಮಾನದ ಆರಂಭದ ಮೈಸೂರು ರಾಜಕಾರಣದ ಹಲವು ಸಂಗತಿಗಳನ್ನು ಚಾರಿತ್ರಿಕ ಅಧ್ಯಯನಕ್ಕೆ ಒಳಪಡಿಸಬಹುದು. ಸ.ಜ.ನಾಗಲೋಟಿಮಠ ಅವರ 'ಬಿಚ್ಚಿದ ಜೋಳಿಗೆ' ಆತ್ಮಕಥೆಯ 'ಕೊಕ್ಕೆಹುಳದ ಪ್ರಸಂಗವು' ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಸಮಾಜಶಾಸ್ತ್ರೀಯವಾಗಿ ಅಧ್ಯಯನ ಮಾಡಲು ಉತ್ತಮ ಆಕರವಾಗುತ್ತದೆ. ಹೀಗೆ ಆತ್ಮಕಥೆಗಳು ಅನ್ಯಜ್ಞಾನ ಶಿಸ್ತಿನಲ್ಲಿ ಬಳಸಬಹುದಾದ ಆಕರಗಳಾಗಿವೆ.

ಈ ಅಧ್ಯಯನದ ಕೊರತೆಯೆಂದರೆ "ಲಂಕೇಶ್, ಕಾರಂತ, ಭೈರಪ್ಪ ತಮ್ಮ ಆತ್ಮಕಥೆಗಳಲ್ಲಿ ತಮ್ಮ ಮಡದಿಯರ ಬಗ್ಗೆ ಹೆಚ್ಚು ಬರೆದಿರುವುದಿಲ್ಲ"[೨೨] ಎಂಬುದನ್ನು ಗುರುತಿಸಿರುವ ಲೇಖನಕಾರರು, ಕೆಲವು ಆತ್ಮಕಥೆಗಳಲ್ಲಿ ತಮ್ಮ ಮಡದಿಯರನ್ನು ಶೋಷಿಸುವುದರ ಕುರಿತು ಆತ್ಮಕಥನಕಾರರು ಮಾಡಿಕೊಂಡಿರುವ ಆತ್ಮವಿಮರ್ಶಾತ್ಮಕ ಸಂಗತಿಗಳನ್ನು ಗುರುತಿಸಿಲ್ಲ. ಕನ್ನಡದ ಬಹುತೇಕ ಪುರುಷ ಆತ್ಮಕಥೆಗಳು ತಮ್ಮ ಮಡದಿಯರ ಬಗ್ಗೆ ಹೆಚ್ಚು ಚರ್ಚೆ ಮಾಡದಿರುವುದು ಮುಖ್ಯವಾಗಿ ಕಾಣುವ ಸಂಗತಿಯಾದರೂ, ಕೆಲವು ಆತ್ಮಕಥೆಗಳು ತಮ್ಮ ಮಡದಿಯರ ಬಗ್ಗೆ ಸಹಜವಾಗಿ ಹೇಳಿಕೊಳ್ಳುವ ಮತ್ತು ತಮ್ಮೊಳಗಿದ್ದ ಶೋಷಕ ಗುಣಗಳನ್ನು ಅಷ್ಟೇ ಪ್ರಾಮಾಣಿಕವಾಗಿ ಹೇಳಿಕೊಳ್ಳುತ್ತಾರೆ. ಉದಾಹರಣೆಗೆ 'ಗೊಂದಲಿಗ್ಯಾ' ಆತ್ಮಕಥೆಯಲ್ಲಿ "ಹೆಂಡಂದಿರೆಂದರೆ ದುಡಿಯಲು ತಂದ 'ದನಗಳೆಂದು ನಮ್ಮ ಜಾತಿಯ ಗಂಡಸರು ಎಲ್ಲರ ಮುಂದೆ ಹೇಳುತ್ತಿದ್ದರು. ಹೆಣ್ಣು ಹೆರಿಗೆಯಾದ ಆರೇಳು ದಿನಕ್ಕೆ ದುಡಿಯಲು ಕಳುಹಿಸುತ್ತಾರೆ"[೨೩] ಎನ್ನುವ ಸನ್ನಿವೇಶವಿದೆ. ಸನ್ನಿವೇಶದೊಳಗಿನ ಈ ವಿವರಗಳು ಆತ್ಮಕಥೆಯ ಪ್ರಧಾನ ಆಶಯ ಆದಂತಹ ಪ್ರಾಮಾಣಿಕತೆಗೆ ಸೂಕ್ತವಾದದ್ದಾಗಿದೆ. ಇಲ್ಲಿ ಆತ್ಮಕಥನಕಾರರು ತಾವು ಶೋಷಣೆಗೊಳಗಾಗಿದ್ದನ್ನು ಮಾತ್ರ ವಿವರಿಸದೆ, ತಾವು ಕೂಡ ಶೋಷಕರಾಗಿದ್ದನ್ನು ಪ್ರಾಮಾಣಿಕವಾಗಿ ಅಭಿವ್ಯಕ್ತಿ ಪಡಿಸಿದ್ದಾರೆ.

**೨.೩.೫. ಆತ್ಮಕಥನ: ವಾಗ್ವಾದ ಮತ್ತು ಸಂವಾದ ಮತ್ತು..... – ಬಸವರಾಜ ಕಲ್ಗುಡಿ**

೧೯೯೯ರಲ್ಲಿ 'ನಕ್ಷೆ ನಕ್ಷತ್ರ' ಎಂಬ ವಿಮರ್ಶಾ ಸಂಕಲನದಲ್ಲಿ 'ಆತ್ಮಕಥೆ : ವಾಗ್ವಾದ ಮತ್ತು ಸಂವಾದ ಮತ್ತು...' ಲೇಖನವು ೧೯೯೯ರಲ್ಲಿ 'ನಕ್ಷೆ ನಕ್ಷತ್ರ' ವಿಮರ್ಶಾ ಸಂಕಲನದಲ್ಲಿ ಪ್ರಕಟವಾದ ಲೇಖನವಾಗಿದೆ. ಈ ಲೇಖನದಲ್ಲಿ ಬಸವರಾಜ ಕಲ್ಗುಡಿಯವರು ಆತ್ಮಕಥೆಗಳ ಕುರಿತು ಚರ್ಚೆ

ಮಾಡಿದ್ದಾರೆ. ಲೇಖನದ ಶೀರ್ಷಿಕೆಯೇ ಹೇಳುವಂತೆ ಇಲ್ಲಿ ಲೇಖಕರು ಒಂದು ಜಾಗತಿಕ ಚೌಕಟ್ಟಿನೊಳಗೆ ಆತ್ಮಕಥೆಗಳನ್ನಿಟ್ಟುಕೊಂಡು ವಿಶ್ಲೇಷಣೆ ಮಾಡುವಂತಹ ಕೆಲಸ ಮಾಡಿದ್ದಾರೆ. ಜಾಗತಿಕ ವಿದ್ಯಮಾನಗಳು ಸಹ ಜನರ ಬದುಕಿನ ಮೇಲೆ ಹೇಗೆ ಪ್ರಭಾವ ಬೀರುತ್ತಿವೆ ಎನ್ನುವುದರ ಜೊತೆಗೆ ದಲಿತ ಆತ್ಮಕಥೆಗಳ ಸ್ವರೂಪ ಮುಂತಾದ ಸಂಗತಿಗಳನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಲೇಖನದ ಶೀರ್ಷಿಕೆಯಲ್ಲಿ ಆತ್ಮಕಥನವು ವಾಗ್ವಾದ, ಸಂವಾದ ಎಂಬುದಕ್ಕೆ ಮಾತ್ರ ಸೀಮಿತವಾಗದೆ ಮತ್ತು ಹಲವಾರು ಚುಕ್ಕಿಗಳನ್ನಿಡಲಾಗಿದೆ. ಇದು ಆತ್ಮಕಥೆಗಳಿಗಿರುವ ಹಲವು ಸ್ವರೂಪಗಳನ್ನು ಕುರಿತು ಹೇಳುವಂತಿದೆ.

ಪ್ರಸ್ತುತ ಲೇಖನದ ಮುಖ್ಯ ಪ್ರತಿಪಾದನೆಗಳು ಈ ಮುಂದಿನಂತಿವೆ. ಎಲ್ಲಾ ಶ್ರೇಷ್ಠ ಆತ್ಮಕಥನಗಳು ಸಾಂಸ್ಕೃತಿಕ ಸಂಕಥನಗಳು ಮತ್ತು ಸೃಜನಶೀಲವಾದವು. ಇದು ಕಲ್ಗುಡಿಯವರು ತಮ್ಮ ಲೇಖನದ ಆರಂಭದಲ್ಲಿಯೇ ಮಾಡುವ ಪ್ರತಿಪಾದನೆಯಾಗಿದೆ. ಇಲ್ಲಿ ಆತ್ಮಕಥೆಗಳು ಕೇವಲ ಘಟನೆಗಳ ದಾಖಲೆಗಳಲ್ಲ ಅವುಗಳೊಳಗೆ ಹಲವಾರು ಚಾರಿತ್ರಿಕ ಸಂಗತಿಗಳು ಹೆಣೆದು ಕೊಂಡಿರುತ್ತವೆ. ಗಾಂಧೀಜಿಯವರ ಆತ್ಮಕಥೆಯು ಏಕಕಾಲಕ್ಕೆ ಗಾಂಧೀಜಿಯವರ ವೈಯಕ್ತಿಕ ಮತ್ತು ಸಾರ್ವಜನಿಕ ಬದುಕನ್ನು ಒಟ್ಟೊಟ್ಟಿಗೆ ಹೇಳುವಂತಹ ಕೃತಿಯಾಗಿದೆ. ಸಿ.ಜಿ.ಕೆಯವರ 'ಕತ್ತಾಲೆ ಬೆಳದಿಂಗಳೊಳಗೆ'ಯು ರಂಗಭೂಮಿಯ ಚರಿತ್ರೆಯಾಗಿದೆ. ಹೀಗೆ ಆತ್ಮಕಥೆಗಳು ಕೇವಲ ವ್ಯಕ್ತಿಗತ ದಾಖಲೆಗಳಾಗದೆ ಸಾಂಸ್ಕೃತಿಕ ಚರಿತ್ರೆಗಳಂತೆ ಕಾಣುತ್ತವೆ. ಇಂತಹ ಆತ್ಮಕಥೆಗಳನ್ನು ಸೆಳೆತದೆ ಭಾಷೆಯಲ್ಲಿ ಕಟ್ಟುವ ಕೆಲಸವು ಸೃಜನಶೀಲವಾಗುತ್ತದೆ.

ಪಾಶ್ಚಾತ್ಯ ಆತ್ಮಕಥೆಗಳು ವಾಗ್ವಾದ ಸ್ವರೂಪಿ ಮತ್ತು ಪೌರ್ವಾತ್ಯ ಆತ್ಮಕಥೆಗಳು ಸಂವಾದ ಸ್ವರೂಪಿಯಾದವು. ಪ್ರಸ್ತುತ ಲೇಖನದ ಪ್ರಮುಖ ಪ್ರತಿಪಾದನೆಯೆಂದರೆ ಅದು ಪಾಶ್ಚಾತ್ಯ ಆತ್ಮಕಥೆಗಳು ವಾಗ್ವಾದ ಸ್ವರೂಪದವು ಎಂಬುದು. ಪಾಶ್ಚಾತ್ಯರಲ್ಲಿ ಸಮಾಜಕ್ಕಿಂತ ವ್ಯಕ್ತಿ ಮುಖ್ಯ ಎನ್ನುವ ಪ್ರತಿಪಾದನೆಯೇ ಬಹುಪಾಲಿದೆ. ಇಲ್ಲಿ ವ್ಯಕ್ತಿ ಸಮಾಜಕ್ಕೆ ಮುಖಾಮುಖಿಯಾಗಿ ಹೊಸ ಹೊಳವುಗಳನ್ನು ನೀಡುವುದರ ಮೂಲಕ ತಾನು ಹಾಗೂ ತನ್ನ ಆಲೋಚನೆ ಎರಡೂ ಭಿನ್ನ ಎನ್ನುವ ಮಾದರಿಯು ಹೊಸ ಬಗೆಯ ವಾಗ್ವಾದವನ್ನು ಸೃಷ್ಟಿ ಮಾಡುತ್ತದೆ. ನೀಶೆ ರೂಸೊ, ಸಾರ್ತ್ರೆ ಇವರ ಆತ್ಮಕಥನಗಳು ಇವರು ಪ್ರತಿಪಾದಿಸಿದ ಸಿದ್ಧಾಂತಗಳ ದ್ಯೋತಕವಾಗಿವೆ. "ನೀಶೆ ಅವನತಿ ಹೊಂದಿದ ಕ್ರಿಶ್ಚಿಯನ್ ನೈತಿಕತೆಯನ್ನು ಸಂಘರ್ಷದ ಮುಖಾಮುಖಿ ಮಾಡಿಕೊಂಡು, ದೇವರಿಲ್ಲದ ಜಗತ್ತಿನ ಪ್ರವಾದಿಯಾಗುವ ಧೈರ್ಯ ತೋರಿದ ತನ್ನ ಶುದ್ಧಾತ್ಮವನ್ನು ಜಗತ್ತು ಪರಿಗಣಿಸಬೇಕೆಂದು ಕಥನಕ್ಕಿಳಿದ ರೂಸೋ, ಅಸ್ತಿತ್ವವಾದದ ಪರಕೀಯತೆಯ ನೆಲೆಗಳನ್ನು ಸಮಾಜದ ಸಂಬಂಧಗಳೊಡನೆ ಓರೆಗೆ ಹಚ್ಚಿದ ಸಾರ್ತ್ರೆ ಇವರೆಲ್ಲರೂ ಸಾಂಸ್ಕೃತಿಕ ಸಂಘರ್ಷಕ್ಕೆ ತಾತ್ವಿಕ ಭೂಮಿಕೆಯನ್ನು ಆತ್ಮಕಥನಗಳ ಮೂಲಕ ನಿರ್ಮಾಣ ಮಾಡಿದರು"[೨೪] ಎಂದು ಕಲ್ಗುಡಿ ಹೇಳುತ್ತಾರೆ· ಇಲ್ಲಿ ಪೌರ್ವಾತ್ಯ ಆತ್ಮಕಥೆಗಳಲ್ಲಿ ತನ್ನೊಳಗೆ

ಮತ್ತು ತನ್ನ ಸುತ್ತಲಿನ ಸಮಾಜದೊಂದಿಗೆ ಸಂವಾದಿಸುವ ಹಲವು ಸಂದರ್ಭಗಳಿವೆ. ಸಂವಾದವು ದಲಿತ ಆತ್ಮಕಥೆಗಳ ಪ್ರಮುಖ ಗುಣವಾಗಿದೆ. ದಲಿತರನ್ನು ಹೀನಾಯವಾಗಿ ನಡೆಸಿಕೊಂಡ ಈ ಸಮಾಜವನ್ನು ಸಂವಾದದ ಮೂಲಕ ಆತ್ಮವಿಮರ್ಶೆ ಮಾಡಿಕೊಳ್ಳುವಂತೆ ಮಾಡುವ ಪ್ರಮುಖ ಗುಣ ದಲಿತ ಆತ್ಮಕಥೆಗಳಲ್ಲಿದೆ.

ಸಮಾಜದಲ್ಲಿ ಬುದ್ಧಿ ಪ್ರಧಾನ ಮತ್ತು ಭಾವ ಪ್ರಧಾನ ಎಂಬ ಎರಡು ಅಂಶಗಳಿವೆ. ಅದರಲ್ಲಿ ಪಾಶ್ಚಾತ್ಯರದ್ದು ಬುದ್ಧಿ ಪ್ರಧಾನವಾದರೆ, ಭಾವ ಪ್ರಧಾನವಾಗಿ ಹೃದಯದ ಭಾಷೆಯು ಮುಖ್ಯವಾಗುವ ಪರಿ ಇಲ್ಲಿನ ಪೌರ್ವಾತ್ಯರದ್ದಾಗಿದೆ. "ಪೂರ್ವದ ಆತ್ಮಕಥನಗಳಿಗೆ ಈ ಬುದ್ಧಿಜನ್ಯ ವಾಗ್ವಾದದಲ್ಲಿ ಅಷ್ಟು ಆಸಕ್ತಿಯಿಲ್ಲ. ವಾಗ್ವಾದಕ್ಕಿಂತ ಸಂವಾದಕ್ಕಾಗಿ ಇಲ್ಲಿ ಹಾತೊರೆಯುವಿಕೆ ಇದೆ.ಇದಕ್ಕೆ ಕಾರಣವೂ ಇಲ್ಲದಿಲ್ಲ. ಪಶ್ಚಿಮದ ಆತ್ಮಕಥನದ ನಾಯಕ, ಚರಿತ್ರೆಯನ್ನು ಕಟ್ಟಲೆಂದೇ ಸಮೂಹದಿಂದ ಪ್ರತ್ಯೇಕಗೊಂಡರೆ, ಒಡೆದುಹೋದ ಸಮುದಾಯದ ದಾರುಣ ಚರಿತ್ರೆ, ಇಲ್ಲಿ ವ್ಯಕ್ತಿಯನ್ನು ಸಂವಾದಕ್ಕೆ ಎಳೆಸುವಂತೆ ಮಾಡುತ್ತಿದೆ."[೨೫] ಪಾಶ್ಚಾತ್ಯರ ಬಹು ಮುಖ್ಯವಾದ ಗುಣವೆಂದರೆ ಅದು ಅನ್ವೇಷಿಸುವುದು. ಹಾಗಾಗಿ ಅವರಿಗೆ ಸಮುದಾಯಕ್ಕಿಂತ ಏಕತಾನತೆ ಹೆಚ್ಚು ಪ್ರಿಯವಾದ ಸಂಗತಿಯಾಗಿದೆ. ವಿದೇಶಿಯರಲ್ಲಿ ಭಾರತೀಯರಲ್ಲಿರುವಂತೆ 'ಹಟ್ಟಿ' ಪರಿಕಲ್ಪನೆ ಇರುವುದಿಲ್ಲ. ಇವು ಅಲ್ಲಿ ಬಹುತೇಕ ಬುದ್ಧಿ ಪ್ರಧಾನ ಬದುಕಿಗೆ ಕಾರಣವಾಗಿವೆ. ಭಾರತೀಯರಲ್ಲಿ 'ಹಟ್ಟಿ' ಪರಿಕಲ್ಪನೆ ಇದೆ. ಇಲ್ಲಿನ ಸಾಂಸ್ಕೃತಿಕ ವ್ಯವಸ್ಥೆ ವಿದೇಶಗಳಿಗಿಂತ ಭಿನ್ನವಾಗಿದೆ. ಈ ಕಾರಣಗಳಿಂದ ಭಾರತೀಯರಲ್ಲಿ ಭಾವ ಪ್ರಧಾನತೆ ಹೆಚ್ಚಿದೆ.

ಇಲ್ಲಿಯ ಮುಖ್ಯ ಸಂಗತಿಯೆಂದರೆ ಚಳವಳಿಯ ಪ್ರಭಾವದಿಂದ ದಲಿತರಲ್ಲಿ ಒಂದು ಬಗೆಯ ಸ್ವಾಭಿಮಾನ, ಆತ್ಮವಿಶ್ವಾಸ ಬಂದಿರುವುದು ಆತ್ಮಕಥೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. 'ದಲಿತ ಚಳವಳಿ ಈ ಶತಮಾನದ ಉತ್ತರಾರ್ಧದಲ್ಲಿ ಒಂದು ಸಾಮಾಜಿಕ, ರಾಜಕೀಯ ಶಕ್ತಿಯಾಗಿ ರೂಪುಗೊಂಡಿದ್ದರ ಪರಿಣಾಮವಾಗಿ ಒಂದು ಬಗೆಯ ಸ್ವಾಭಿಮಾನವು ದಲಿತರಲ್ಲಿ ಹುಟ್ಟಿದೆ. ಸಿದ್ಧಲಿಂಗಯ್ಯರವರ ಹಾಗೂ ಅರವಿಂದ ಮಾಲಗತ್ತಿಯವರ ಆತ್ಮಕಥೆಗಳಲ್ಲಿ ಈ ಬಗೆಯ ಸ್ವಾಭಿಮಾನ ಮತ್ತು ಆತ್ಮವಿಶ್ವಾಸವು ಪ್ರಮುಖ ಸಂಗತಿಗಳಾಗಿವೆ. ಮೇಲಿನ ಎಲ್ಲಾ ಚರ್ಚೆಗಳ ಜೊತೆಗೆ ಲೇಖಕರು ದಲಿತ ಕಾವ್ಯ ಆತ್ಮಕಥನಗಳಿಗಿಂತ ದಲಿತ ಬದುಕನ್ನು ಪರಿಮಿತ ವ್ಯಾಪ್ತಿಯಲ್ಲಿ ಹಿಡಿದಿಟ್ಟಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇದು ಗಮನಿಸಬೇಕಾದ ಸಂಗತಿಯಾಗಿದೆ. ಅಕ್ಷರದಿಂದ ವಂಚಿತರಾದವರು ಸ್ವಾತಂತ್ರ್ಯ ದೊರೆತ ನಂತರ ಅಕ್ಷರಭ್ಯಾಸ ಮಾಡುವುದಕ್ಕೆ ಆರಂಭಿಸಿದರು. ಈ ಮೂಲಕ ಅವಮಾನದ ಪ್ರಜ್ಞೆ ದಲಿತರೊಳಗೆ ಬಂದು ತಮ್ಮ ಹಕ್ಕನ್ನು ಪಡೆಯುವ ಸಲುವಾಗಿ ಹೋರಾಟ ಮಾಡಬೇಕಾದಂತಹ ಸಂದರ್ಭದಲ್ಲಿ ಹಲವಾರು ಜನರ ಧ್ವನಿಯಾಗಿ, ಸ್ಫೂರ್ತಿಯಾಗಿ ಪ್ರಭಾವ ಬೀರಿದ್ದು ಈ ಕಾವ್ಯ ಸಾಹಿತ್ಯ. 'ಬರುತಿಹೆವು ನಾವು ಬರುತಿಹೆವು', 'ಬೆಲ್ಚಿಯ ಹಾಡು' ಇನ್ನೂ ಮುಂತಾದ ಕವನಗಳು ೭೦-೮೦ರ ದಶಕದಲ್ಲಿ ಏಕಕಾಲಕ್ಕೆ ಸಾಹಿತ್ಯಕವಾಗಿಯೂ, ಹೋರಾಟದ ಹಾಡುಗಳಾಗಿಯೂ

ದಲಿತ ಬದುಕನ್ನು ಬಹುತೇಕ ತೆರೆದಿಟ್ಟಿವೆ. ಹೀಗಾಗಿ ಇವುಗಳನ್ನು ಒಂದು ಬಗೆಯಲ್ಲಿ ದಲಿತರ 'ಸಮಷ್ಟಿ ಆತ್ಮಕಥೆಗಳು' ಎಂದು ಕರೆಯಬಹುದಾಗಿದೆ. ದಲಿತ, ಬಂಡಾಯ ಚಳವಳಿಯ ಸಂದರ್ಭದಲ್ಲಿ ಇವು ಮಾಡಿದ ಭಾಷಿಕ, ಮಾನಸಿಕ, ಸಾಮಾಜಿಕ ಪರಿಣಾಮವನ್ನು ಅಲ್ಲಗಳೆಯುವಂತಿಲ್ಲ. ಇಂತಹ ಪ್ರೇರಣೆಗಳಿಗೆ ಕಾರಣವಾದ ದಲಿತ ಕಾವ್ಯದ ಭಾಷೆಯನ್ನು ಪರಿಮಿತವಾದದ್ದು ಎಂದು ಹೇಳುವುದರ ಬದಲು ಅವುಗಳ ಮಹತ್ವದ ಜೊತೆಗೆ ಆತ್ಮಕಥೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಹೊಸ ಬಗೆಯ ಒಳನೋಟಗಳನ್ನು ಅನ್ವೇಷಿಸಬಹುದು.

**೨.೩.೬. ಕನ್ನಡದಲ್ಲಿ ಮಹಿಳಾ ಆತ್ಮಕಥೆ ಒಂದು ಅವಲೋಕನ** – ಡಾ.ಚಂದ್ರಮತಿ ಸೋಂದಾ

೨೦೦೭ರಲ್ಲಿ ನಡೆದ 'ಮಹಿಳಾ ಆತ್ಮಕಥೆಗಳು:ಅನುಸಂಧಾನ' ಎರಡು ದಿನದ ವಿಚಾರ ಸಂಕಿರಣದಲ್ಲಿ ಡಾ. ಚಂದ್ರಮತಿ ಸೋಂದಾ ಅವರು ಮಂಡಿಸಿದ 'ಕನ್ನಡದಲ್ಲಿ ಮಹಿಳಾ ಆತ್ಮಕಥೆ ಒಂದು ಅವಲೋಕನ' ಎಂಬ ಪ್ರಬಂಧವು ಮಹಿಳಾ ಆತ್ಮಕಥೆಗಳನ್ನು ಕುರಿತಂತೆ ಗಮನಿಸಬೇಕಾದ ಮುಖ್ಯ ಪ್ರಬಂಧವಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಮಹಿಳಾ ಆತ್ಮಕಥೆಗಳನ್ನು ಸಾಹಿತ್ಯಕ, ಸಾಮಾಜಿಕ, ಆರ್ಥಿಕ ವಲಯದೊಳಗಿಟ್ಟು ನೋಡುವ ಪ್ರಯತ್ನ ಮಾಡಲಾಗಿದೆ. ಪುರುಷ ಕೇಂದ್ರಿತ ಮಾದರಿ ಹೇಗೆ ಮಹಿಳಾ ಸಾಹಿತ್ಯವನ್ನು ಕಡೆಗಣಿಸಿದೆ, ಅಂತಹ ಸಂದರ್ಭದೊಳಗೂ ೭೦ರ ದಶಕದ ಸಾಮಾಜಿಕ, ರಾಜಕೀಯ ಚಳವಳಿಗೂ ಹೇಗೆ ಲೇಖಕಿಯರ ಸಾಹಿತ್ಯ ಸೃಷ್ಟಿಯಲ್ಲಿ ಪ್ರಧಾನ ಪಾತ್ರವಹಿಸಿದೆ ಎಂಬ ಸಂಗತಿಗಳ ಬಗ್ಗೆ ಚರ್ಚಿಸಿದ್ದಾರೆ.

ಈ ಪ್ರಬಂಧದ ಮುಖ್ಯ ಪ್ರತಿಪಾದನೆಯೆಂದರೆ ಮಹಿಳಾ ಆತ್ಮಕಥೆಗಳ ಸಂಖ್ಯೆ ವಿರಳವಾಗಿದೆ. ಇದು ಮಹಿಳಾ ಆತ್ಮಕಥೆಗಳ ಸಂದರ್ಭದಲ್ಲಿ ಕೇಳಿಕೊಳ್ಳಲೇಬೇಕಾದ ಪ್ರಶ್ನೆಯಾಗಿದೆ. ಮರಾಠಿ ಮಹಿಳಾ ಆತ್ಮಕಥೆಗಳಿಗೆ ಹೋಲಿಸಿದರೆ ಕನ್ನಡದ ಮಹಿಳಾ ಆತ್ಮಕಥೆಗಳ ಸಂಖ್ಯೆ ಕಡಿಮೆ ಇದೆ. ಮಹಿಳೆ ತಮಗಿರುವ ಅಲ್ಪ ಅವಕಾಶದಲ್ಲಿ ಸಾಧನೆ ಮಾಡಿದರೂ ಸಂಪೂರ್ಣ ಅಭಿವ್ಯಕ್ತಿಗೆ ಅವಕಾಶವಿಲ್ಲದಿರುವುದು ಹಾಗೂ ಆತ್ಮಕಥೆಗಳನ್ನು ಸಾಧನೆ ಎಂಬ ಚೌಕಟ್ಟಿನಲ್ಲಿ ಬಂಧಿಸಿರುವುದು. ಕೆಲವು 'ಸಂಪ್ರದಾಯಗಳು ಮತ್ತು ನಂಬಿಕೆಗಳು' ಕೂಡ ಮಹಿಳಾ ಆತ್ಮಕಥೆಗಳ ರಚನೆಗೆ ಮಾರಕವಾಗಿವೆ. ಪತಿ ಎಷ್ಟೇ ಹಿಂಸಿಸಿದರೂ ಪತಿಯೇ ಪ್ರತ್ಯಕ್ಷ ದೈವ. ಸಂಸಾರದ ಗುಟ್ಟನ್ನು ರಟ್ಟು ಮಾಡಬಾರದು, ಈ ರೀತಿಯ ಕೆಲವು ನಿರ್ಬಂಧಗಳು ಮಹಿಳಾ ಆತ್ಮಕಥೆಗಳು ರಚನೆಯಾಗುವಲ್ಲಿ ತೊಡಕಾಗಿವೆ.

ಮಹಿಳಾ ಸಾಹಿತ್ಯವನ್ನು ಅಲ್ಲಗೆಳೆಯುವ ಪುರುಷರಿರುವಂತೆ, ಮಹಿಳಾ ಸಾಹಿತ್ಯವನ್ನು ಪ್ರೋತ್ಸಾಹಿಸುವ ಪುರುಷರು ಇದ್ದಾರೆ. ಮಹಿಳೆಯರು ರಚಿಸಿದ ಸಾಹಿತ್ಯ 'ಅಡುಗೆ ಮನೆ ಸಾಹಿತ್ಯ' ಎಂದು ಕರೆದ ಆಲನಹಳ್ಳಿ ಕೃಷ್ಣ ಅವರು ಒಂದು ಕಡೆಯಾದರೆ, ಅದೇ ಮಹಿಳಾ ಆತ್ಮಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ ಪುರುಷರೂ ಇದ್ದಾರೆ. ಹೀಗೆ ಮಹಿಳಾ ಸಾಹಿತ್ಯವನ್ನು ಮಿಶ್ರ ನೆಲೆಯಲ್ಲಿ ಕಾಣಲಾಗಿದೆ. ಆತ್ಮಕಥೆಗಳನ್ನು ಬರೆಯುವುದರ ಹಿಂದೆ ವೈಯಕ್ತಿಕ ಅಭಿಲಾಷೆ ಇರುವುದರ

ಜೊತೆಗೆ ಸಂಘಟನೆಗಳ ಪಾತ್ರವು ಸಹಿತ ಇದೆ. ಅಖಿಲ ಕರ್ನಾಟಕ ಲೇಖಕಿಯರ ಸಂಘವು 'ಲೇಖಲೋಕ' ಎಂಬ ನಾಲ್ಕು ಸಂಪುಟಗಳಲ್ಲಿ ಲೇಖಕಿಯರ ಬದುಕನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸೋಂದಾ ಅವರ ಲೇಖನದ ಮುಖ್ಯ ಸಂಗತಿಯೆಂದರೆ ಸಾಹಿತ್ಯ ವಲಯದೊಳಗಿನ ಸಾಂಸ್ಕೃತಿಕ ರಾಜಕಾರಣ ಮತ್ತು ಅವಮಾನವನ್ನು ಗುರುತಿಸುವುದು. ಸಾಹಿತ್ಯವಲಯವು ಕೂಡ ಆರಂಭದಲ್ಲಿ ಮಹಿಳಾ ಸಾಹಿತ್ಯವನ್ನು ಸುಲಭವಾಗಿ ಸ್ವೀಕರಿಸಿಲ್ಲ ಎಂಬುದಕ್ಕೆ ಈ ಕೆಳಗಿನ ಉದಾಹರಣೆಗಳನ್ನು ವಿವರಿಸಬಹುದು. ಗಿರಡ್ಡಿ ಗೋವಿಂದರಾಜರವರು ಅನುಪಮಾ ನಿರಂಜನ ಅವರ ಸಾಹಿತ್ಯವನ್ನು ಕಟು ಟೀಕೆ ಮಾಡಿದ ಸಂಗತಿಯ ಜೊತೆಗೆ ಆಲನಹಳ್ಳಿ ಕೃಷ್ಣರು ಮಹಿಳಾ ಸಾಹಿತ್ಯವನ್ನು 'ಅಡುಗೆ ಮನೆ ಸಾಹಿತ್ಯ' ಎಂದಿದ್ದು, ಗೋಪಾಲಕೃಷ್ಣ ಅಡಿಗರು ೨೨/೩/೧೯೮೫ ರ ವಿಚಾರ ಸಂಕಿರಣದಲ್ಲಿ "ನೀವು ಮನುಷ್ಯರನ್ನು ಸೃಷ್ಟಿ ಮಾಡಿ, ಅದಕ್ಕಿಂತ ದೊಡ್ಡ ಕಾರ್ಯ ಬೇರೊಂದಿಲ್ಲ. ನಾವು ಕಾವ್ಯ ಸೃಷ್ಟಿ ಮಾಡ್ತೀವಿ"[೨೬] ಎಂದು ಹೇಳಿದ್ದು, ಹಾ.ಮಾ.ನಾ ಅವರು ೧೫/೩/೮೫ ರಂದು "ಪುರುಷರೊಂದಿಗೆ ಸ್ಪರ್ಧಾ ಮನೋಭಾವ ಬೇಡ"[೨೭] ಎಂದು ಮಹಿಳೆಯರಿಗೆ ಉಪದೇಶ ನೀಡಿದ ಸಂಗತಿಗಳು ಮಹಿಳಾ ಸಾಹಿತ್ಯಕ್ಕೆ ಮಾಡಿದ ಅವಮಾನಗಳಂತೆ ಕಾಣುತ್ತಿವೆ. ಇಂತಹ ಪ್ರಮುಖ ಸಂಗತಿಗಳನ್ನು ಅಧ್ಯಯನಕಾರರು ಆತ್ಮಕಥೆಗಳೊಳಗಿಂದ ಗುರುತಿಸಿರುವುದು ಸಮಂಜಸವಾಗಿದೆ. ನೀವು ಮನುಷ್ಯರನ್ನು ಸೃಷ್ಟಿ ಮಾಡಿ ಎಂದು ಅಡಿಗರು ಹೇಳಿದಕ್ಕೆ ಅದೇ ವಿಚಾರ ಸಂಕಿರಣದಲ್ಲಿ ವಿಜಯಾ ದಬ್ಬೆಯವರು "ನಾವು ಮಕ್ಕಳನ್ನು ಸೃಷ್ಟಿಸುತ್ತಿವಿ, ಕಾವ್ಯವನ್ನೂ ಸೃಷ್ಟಿಸುತ್ತಿವಿ"[೨೮] ಎಂದು ಪ್ರತ್ಯುತ್ತರ ನೀಡಿರುವುದು ಅವಮಾನಿಸುವ ವ್ಯವಸ್ಥೆಗೆ ಮಹಿಳೆ ತೋರಿರುವ ದಿಟ್ಟ ಪ್ರತಿರೋಧವಾಗಿದ್ದೂ, ಇದನ್ನು ಸೋಂದಾ ಅವರು ದಾಖಲಿಸುತ್ತಾರೆ.

ಮಹಿಳಾ ಆತ್ಮಕಥೆಗಳಿಗೆ ಸಂಬಂಧಿಸಿದ ಚರ್ಚೆಯಲ್ಲಿ ಮುಸ್ಲಿಂ ಮಹಿಳಾ ಆತ್ಮಕಥೆಯನ್ನು ಉಲ್ಲೇಖಿಸುವ ಅಧ್ಯಯನಕಾರರು, ಅವುಗಳ ಒಳಗಿರುವ ಸಾಂಸ್ಕೃತಿಕ ಸಂಘರ್ಷಗಳನ್ನು ಕುರಿತು ಚರ್ಚಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಇತರೆ ಧರ್ಮಗಳಲ್ಲಿ ಮಹಿಳೆಯರು ಅನುಭವಿಸುತ್ತಿರುವ ಅವಮಾನಗಳಿಗಿಂತ ಮುಸ್ಲಿಂ ಮಹಿಳೆಯರು ಅನುಭವಿಸುತ್ತಿರುವ ಅವಮಾನಗಳು ಭಿನ್ನವಾದವು. ತಲಾಖ್, ಬುರ್ಕಾ ಪದ್ಧತಿಗಳು ಮುಸ್ಲಿಂ ಮಹಿಳೆಯರನ್ನು ಇಂದಿಗೂ ಶೋಷಣೆ ಮಾಡುತ್ತಿವೆ. ಸಾರಾ ಅಬೂಬಕ್ಕರ್ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರೆಹದಲ್ಲಿ ಇಂತಹ ಹಲವು ಸಂಗತಿಗಳನ್ನು ಗುರುತಿಸಬಹುದಾಗಿದೆ. ಇಂತಹ ಸೂಕ್ಷ್ಮತೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

**ಕೊನೆ ಟಿಪ್ಪಣಿ**

೧. ಪುಟ್ಟಯ್ಯ ಬಿ.ಎಂ. ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ, ಪು. ೪.

೨. ಅದೇ, ಪು. ೧೦

೩. ರಹಮತ್ ತರೀಕೆರೆ, ಮುಟ್ಟಿದರೆ ಮಿಡಿವ – ಗೌರ್ಮೆಂಟ್ ಬ್ರಾಹ್ಮಣ, ಅರ್ಜುನ ಗೊಳಸಂಗಿ (ಸಂ), ದಲಿತಜ್ಞ, ಪು. ೮೪

೪. ಪುಟ್ಟಯ್ಯ ಬಿ.ಎಂ, ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ, ಪು. ೩೮

೫. ತುಂಬಾಡಿ ರಾಮಯ್ಯ, ಮಣೆಗಾರ, ಪು. ೧೫

೬ ಪುಟ್ಟಯ್ಯ ಬಿ.ಎಂ, ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ, ಪು ೩೩

೭ ಸಿದ್ಧಲಿಂಗಯ್ಯ, ಊರುಕೇರಿ, ಭಾಗ–೧, ಪು. ೧

೮. ತುಂಬಾಡಿ ರಾಮಯ್ಯ, ಮಣೆಗಾರ, ಪು. ೧೧೭

೯. ಹೇಮಾವತಿ ಸಿ. ಹೆಚ್, ಲಿಂಗ – ಜಾತಿ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಆತ್ಮಕಥೆಗಳ ಸಾಮಾಜಿಕ ವಿಶ್ಲೇಷಣೆ, ಪು. ೧೨೩

೧೦. ಅದೇ, ಪು. ೧೧೫

೧೧. ಅದೇ, ಪು . ೧೧೬

೧೨. ಅದೇ, ಪು. ೧೨೬

೧೩. ಅದೇ, ಪು. ೧೨೧

೧೪. ಅದೇ, ಪು. ೧೧೭

೧೫. ತ.ಸು ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪು. ೧೦

೧೬. ಸಿದ್ಧಲಿಂಗಯ್ಯ, ಊರುಕೇರಿ, ಭಾಗ–೧, ಪು. ೧೮೧

೧೭. ಅದೇ, ಪು. ೧೮೪

೧೮. ಪುಟ್ಟಯ್ಯ ಬಿ.ಎಂ,ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ, ಪು. ೩೩

೧೯. ವಿಠಲರಾವ್ ಗಾಯಕ್ವಾಡ್, ಹಸಿವು, ಅಕ್ಷರ, ಅಭಿವ್ಯಕ್ತಿ ಮತ್ತು ಇತ್ಯಾದಿ, ಚಂದ್ರಶೇಖರ್ ಪಾಟೀಲ(ಸಂ), ಪು. ೩೫

೨೦. ಅದೇ, ಪು. ೩೭

೨೧. ನೀಲಗಿರಿ ತಳವಾರ, ದಲಿತ ಆತ್ಮಕಥೆಗಳು, ಚಂದ್ರಶೇಖರ ಪಾಟೀಲ(ಸಂ), ಪು. ೧೫

೨೨. ರಹಮತ್ ತರೀಕೆರೆ, ಆತ್ಮಕಥೆ : ಕನ್ನಡ ಗದ್ಯದ ಅಧೋಲೋಕ, ದೇಶಕಾಲ, ಸಂಚಿಕೆ, ೧೪, ಜುಲೈ, ಸೆಪ್ಟೆಂಬರ್, ಪು. ೩೮

೨೩. ಮದರಿ ಎಂ.ಎಂ, ಗೊಂದಲಿಗ್ಯಾ, ಪು.೨೩೧

೨೪. ಬಸವರಾಜ ಕಲ್ಗುಡಿ, ಆತ್ಮಕಥನ: ವಾಗ್ವಾದ ಮತ್ತು ಸಂವಾದ ಮತ್ತು..., ನ.ರವಿಕುಮಾರ, (ಸಂ), ಆಯ್ದ ವಿಮರ್ಶೆ, .ಪು. ೯೭

೨೫. ಅದೇ, ಪು. ೯೭

೨೬. ಡಾ. ಚಂದ್ರಮತಿ ಸೋಂದಾ, ಕನ್ನಡ ಮಹಿಳಾ ಆತ್ಮಕಥೆಗಳು ಅನುಸಂಧಾನ, ಡಾ.ಸಬಿಹಾಭೂಮಿಗೌಡ, (ಸಂ) ಮಹಿಳಾ ಆತ್ಮಕಥೆಗಳು, ಪು. ೯೩

೨೭. ಅದೇ, ಪು. ೯೩

೨೮. ಅದೇ, ಪು. ೯೪

ಅಧ್ಯಾಯ : ಮೂರು

# ಅವಮಾನ ಮತ್ತು ಪ್ರತಿರೋಧ: ಪರಿಕಲ್ಪನಾತ್ಮಕ ಚರ್ಚೆ

೩.೧. ಅವಮಾನದ ಪರಿಕಲ್ಪನೆ

೩.೨. ಪ್ರತಿರೋಧದ ಪರಿಕಲ್ಪನೆ:

೩.೩. ಅವಮಾನ ಮತ್ತು ಪ್ರತಿರೋಧಗಳ ಸಂಬಂಧ

ಅಧ್ಯಾಯ : ಮೂರು

# ಅವಮಾನ ಮತ್ತು ಪ್ರತಿರೋಧ: ಪರಿಕಲ್ಪನಾತ್ಮಕ ಚರ್ಚೆ

## ೩.೧. ಅವಮಾನ ಪರಿಕಲ್ಪನೆ

ಶ್ರೇಣೀಕರಣ ಸಂಸ್ಕೃತಿ ಎಂಬುದು ಭಾರತದಂತಹ ದೇಶದಲ್ಲಿ ಬಹುಮುಖ್ಯವಾಗಿ ಕಾಡುವಂತಹ ಸಮಸ್ಯೆಯಾಗಿದೆ. ಈ ಶ್ರೇಣೀಕರಣವೇ ಸಮಾಜದಲ್ಲಿ ಹಲವು ಬಗೆಯ ಅಸಮಾನತೆಗಳನ್ನು ಸೃಷ್ಟಿ ಮಾಡಿದೆ. 'ಮೇಲ್ಜಾತಿ'-'ಕೆಳಜಾತಿ', ಬಡವ-ಶ್ರೀಮಂತ, ಗಂಡು-ಹೆಣ್ಣು, ಮಾಂಸಾಹಾರ-ಸಸ್ಯಾಹಾರ, ಬಿಳಿ-ಕಪ್ಪು, ಅಕ್ಷರಸ್ಥ-ಅನಕ್ಷರಸ್ಥ, ಹಳ್ಳಿ-ನಗರ ಹೀಗೆ ಹಲವು ತಾರತಮ್ಯಗಳು ನಮ್ಮ ಸಮಾಜದಲ್ಲಿವೆ. ಇಂತಹ ತಾರತಮ್ಯ ಆಧಾರಿತ ಶ್ರೇಣೀಕರಣಗಳು ಅವಮಾನ ಮತ್ತು ಪ್ರತಿರೋಧಗಳಿಗೆ ಮೂಲ ಕಾರಣಗಳೆನ್ನಬಹುದು. ಈ ಅವಮಾನಗಳಿಗೂ ಆತ್ಮಕಥೆಗಳಿಗೂ ಒಂದಕ್ಕೊಂದು ಅಂತರ್ ಸಂಬಂಧಗಳಿವೆ. ಆತ್ಮಕಥೆಗಳು ಈ ಸಮಾಜದಲ್ಲಿ ಬದುಕಿದ ವ್ಯಕ್ತಿಗತ ಅನುಭವಗಳ ಉತ್ಪನ್ನಗಳಾಗಿದ್ದು, ತನ್ನ ಸಾಧನೆ ಮತ್ತು ಅಪಮಾನಗಳನ್ನು ಹೇಳಿಕೊಳ್ಳುವ ಎರಡೂ ಗುಣಗಳನ್ನೊಂದಿವೆ. ಕನ್ನಡ ಆತ್ಮಕಥೆಗಳ ಬಹುತೇಕ ಶೀರ್ಷಿಕೆಗಳಲ್ಲಿ ಇಂತಹ ಲಕ್ಷಣಗಳಿವೆ. ಹೀಗೆ ಆತ್ಮಕಥೆಗಳು ವ್ಯಕ್ತಿವಾಗಿದ್ದೂ ಸಾಮುದಾಯಿಕ ಸಂಬಂಧಗಳನ್ನು ಹೊಂದಿವೆ. ಸಾಮುದಾಯಿಕ ವಿದ್ಯಮಾನಗಳು ಯಾವಾಗಲೂ ಏಕರೂಪಿಯಾಗಿರುವುದಿಲ್ಲ. ಬದಲಿಗೆ ಹಲವು ಸ್ವರೂಪಗಳಲ್ಲಿ ಹಲವು ಸ್ತರಗಳಲ್ಲಿರುತ್ತವೆ. ಅವಮಾನಿಸುವ ಸಂಗತಿಗಳಾಗಿ ಮುಖ್ಯವಾಗಿ ಜಾತಿ, ವರ್ಗ, ಲಿಂಗ, ಧರ್ಮಧಾರಿತ ತರತಮಗಳಿದ್ದರೆ, ಕಾಲ, ಭಾಷೆ, ಪ್ರಾದೇಶಿಕತೆಗಳು ಅವಮಾನ ಮತ್ತು ಪ್ರತಿರೋಧಗಳು ಭಿನ್ನ ಭಿನ್ನವಾಗಿ ಅನುಭವಕ್ಕೆ ಬರಲು ಕಾರಣಗಳಾಗಿವೆ.

ಜಾತಿಯು ಸಾಮಾಜಿಕ ಸಂರಚನೆಯ ಅತ್ಯಂತ ಗಂಭೀರ ಸಮಸ್ಯೆಯಾಗಿದೆ. ಇದರಿಂದ ಆಗಿರುವ ಅವಮಾನಗಳು ಆತ್ಮಕಥೆಗಳಲ್ಲಿ ಹೆಚ್ಚೆಚ್ಚು ಕಾಣಬರುತ್ತವೆ. ಜಾತಿ ವ್ಯವಸ್ಥೆಯು ಮಾಡುವ ಅವಮಾನಗಳಲ್ಲಿ ಎರಡು ಭಾಗಗಳಿವೆ. ಸ್ವಜಾತಿ ಅಭಿಮಾನ(ಶ್ರೇಷ್ಠತೆ) ಒಂದನೆಯದಾದರೆ, ಅಸ್ಪೃಶ್ಯತೆಗಾಗಿ ಅವಮಾನ ಅನುಭವಿಸುವುದು ಎರಡನೆಯದಾಗಿದೆ. ಎರಡೂ ಸನ್ನಿವೇಶಗಳಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಅವಮಾನಗಳು ವಿಭಿನ್ನ ಸನ್ನಿವೇಶದಲ್ಲಾದರು ಆಗುವ ವಿಧಾನಗಳು ಕೂಡ ಬೇರೆ ಬೇರೆಯಾಗಿರುತ್ತವೆ. ಸ್ವಜಾತಿ ಅಭಿಮಾನಕ್ಕಿಂತ ಅಸ್ಪೃಶ್ಯತೆಯಲ್ಲಿ ಆಗುವ ಅವಮಾನಗಳು ಮಾನಸಿಕವಾಗಿ

ಮತ್ತು ದೈಹಿಕವಾಗಿ ಘಾಸಿಗೊಳಿಸುವಂತೆ ಇರುತ್ತವೆ. ಅಸ್ಪೃಶ್ಯರು ತಲೆತಲಾಂತರದಿಂದ ಶಾಲೆ, ಗುಡಿ, 'ಮೇಲ್ಜಾತಿ'ಯವರ ಮನೆಗಳಿಂದ ದೂರ ನಿಲ್ಲುವ, ಹೀನಾಯ ಕೆಲಸವನ್ನು ಮಾಡುವ, ಕೆಲವೊಮ್ಮೆ ಹಲ್ಲೆಗೆ ಒಳಗಾಗುವುದನ್ನು ಇಂದಿಗೂ ಕಾಣಬಹುದಾಗಿದೆ. ಕೆಲವು ಸಂಪ್ರದಾಯಗಳ ಹೆಸರಲ್ಲಿಯೂ ಅವಮಾನಗಳಾಗುವುದನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ ಬಿದುರುಕುಂದಿಯ ಪ್ರಸಂಗವನ್ನು ಕಾಣಬಹುದಾಗಿದೆ. ಇಲ್ಲೆಲ್ಲ ಅಸ್ಪೃಶ್ಯತೆಯು ಸಂಪ್ರದಾಯದ ಹೆಸರಲ್ಲಿ ನಡೆದಿದೆ.

ಇನ್ನು ವರ್ಗದ ಕಾರಣಕ್ಕಾಗಿ ಆಗುವಂತಹ ಅವಮಾನಗಳನ್ನು ಗಮನಿಸಿದಾಗ. ವರ್ಗ ಮತ್ತು ಜಾತಿ ಒಂದಕ್ಕೊಂದು ಆಂತರಿಕ ಸಂಬಂಧ ಹೊಂದಿವೆ. ಎಲ್ಲಾ ಜಾತಿಗಳಲ್ಲಿನ ಬಡವರು ಆಯಾ ಜಾತಿಗಳಲ್ಲಿ ದಮನಿತರಾಗಿರುತ್ತಾರೆ. ಬಡತನ ಎನ್ನುವುದು ಅವಮಾನಕ್ಕೆ ಒಳಗಾಗುವ ಸಂಗತಿಯಾಗಿದೆ. ಇದು ದಲಿತರಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದರೂ, 'ಮೇಲ್ಜಾತಿ'ಗಳಲ್ಲೂ ಕಂಡುಬರುತ್ತದೆ. ಸವರ್ಣೀಯರಾದ ಎಸ್.ಎಲ್.ಭೈರಪ್ಪ ಮತ್ತು ಸ.ಜ ನಾಗಲೋಟಿಮಠ ಅವರ ಆತ್ಮಕಥೆಗಳು ಇಂತಹ ಅನುಭವಗಳನ್ನು ವ್ಯಕ್ತಪಡಿಸುತ್ತವೆ. ಕನ್ನಡ ಆತ್ಮಕಥೆಗಳಲ್ಲಿ ಅವಮಾನಿಸುವ ಪ್ರಬಲ ಆರ್ಥಿಕ ಶಕ್ತಿಯಾಗಿ ಲಿಂಗಾಯತ, ಒಕ್ಕಲಿಗ ಸಮುದಾಯಗಳೇ ಹೆಚ್ಚು ಪ್ರಮಾಣದಲ್ಲಿವೆ. ಈ ಸಮುದಾಯಗಳಲ್ಲೂ ಬಡತನವನ್ನು ಅನುಭವಿಸುವ ಕೆಲವು ಕುಟುಂಬಗಳಿದ್ದರೂ ಬಹುತೇಕ ಕುಟುಂಬಗಳು ಭೂಮಾಲೀಕರಾಗಿಯೇ ಇದ್ದಾರೆ. ಈ ಭೂಮಾಲೀಕತ್ವದ ದಬ್ಬಾಳಿಕೆ ಮತ್ತು ಬಡವರ ಆರ್ಥಿಕ ಹಿಂದುಳಿದಿರುವಿಕೆಯು ಅವಮಾನಗಳಾಗುವುದಕ್ಕೆ ಕಾರಣಗಳಾಗಿವೆ. ಇಂತಹ ಭೂ ಮಾಲೀಕ ವರ್ಗದಿಂದ ಹೆಚ್ಚು ಅವಮಾನಗಳಿಗೆ ಒಳಗಾಗಿರುವುದು ಅಸ್ಪೃಶ್ಯರು. ಬಡತನ ಮತ್ತು ಭೂಮಿಯ ಒಡೆತನ ಬಹುತೇಕ ಇಲ್ಲದಿರುವುದು, ಪ್ರತಿಯೊಂದಕ್ಕೂ 'ಮೇಲ್ಜಾತಿ'ಯವರನ್ನೇ ಅವಲಂಬಿಸಿರುವುದು, ಅತಿಯಾದ ಸಾಲ ಮತ್ತು 'ಕೆಳಜಾತಿ' ಸ್ಥಿತಿಗತಿ ಸವರ್ಣೀಯರಲ್ಲಿರುವ ಬ್ರಾಹ್ಮಣ್ಯ ಮನಸ್ಥಿತಿಯ ಕಾರಣಗಳಿಂದ ಹೆಚ್ಚು ಅವಮಾನಗಳಾಗುತ್ತವೆ. ಸಾಮಾನ್ಯವಾಗಿ ಬಡತನ ಮತ್ತು ಹಸಿವು ಒಂದಕ್ಕೊಂದು ಆಂತರಿಕ ಸಂಬಂಧ ಹೊಂದಿವೆ. ಹಸಿವು ಜೈವಿಕ ಸಂಗತಿಯಾದರೂ ಅದರ ಮೇಲೆ ಬಡತನದ ಪ್ರಭಾವವಿರುತ್ತದೆ. ಹಸಿವು ನೀಗಿಸಿಕೊಳ್ಳಲು ವಾರಾನ್ನ, ಭಿಕ್ಷೆ, ಕೆಲವೊಮ್ಮೆ ಅನ್ಯದಾರಿ ಹಿಡಿಯುವುದೂ ಅನಿವಾರ್ಯವಾಗಿರುತ್ತದೆ. ಇಂತಹ ಸಂದರ್ಭಗಳೆಲ್ಲಾ ದಮನಿತರಿಗೆ ಅವಮಾನಗಳನ್ನುಂಟು ಮಾಡಿದೆ.

ಲಿಂಗ ಶ್ರೇಣೀಕರಣಗಳಿಗೆ ಸಂಬಂಧಿಸಿದಂತೆ ಗಮನಿಸುವುದಾದರೆ ಪುರುಷ ಪ್ರಧಾನ ಸಮಾಜವು ಮಹಿಳೆಯರನ್ನು ದ್ವಿತೀಯ ಲಿಂಗಿಯಾಗಿ ಗುರುತಿಸಿಕೊಂಡು ಬಂದಿದೆ. ಎಲ್ಲಾ ಜಾತಿಯ ಮಹಿಳೆಯರು ಬಹುತೇಕ ಲಿಂಗದ ಕಾರಣಕ್ಕಾಗಿ ಅವಮಾನ ಅನುಭವಿಸುವವರೇ ಆಗಿರುತ್ತಾರೆ. ಬ್ರಾಹ್ಮಣರಾದ ಪ್ರತಿಭಾ ನಂದಕುಮಾರ್ ಲಿಂಗದ ಕಾರಣಕ್ಕಾಗಿ ಅವಮಾನ ಅನುಭವಿಸಿರುವುದನ್ನು ಗುರುತಿಸಬಹುದು.

ಸಾಮಾನ್ಯವಾಗಿ ಮಹಿಳೆಯರು ಕೌಟುಂಬಿಕವಾಗಿ ಮತ್ತು ಸಾಮಾಜಿಕವಾಗಿ ಅವಮಾನಗಳನ್ನು ಅನುಭವಿಸುತ್ತಾರೆ. ಆರ್ಥಿಕವಾಗಿ ಸಬಲವಾದ ಮಹಿಳೆ ಅಲ್ಪಮಟ್ಟಿಗೆ ತನ್ನ ಮೇಲಿನ ದಬ್ಬಾಳಿಕೆಯನ್ನು ಕೆಲಮಟ್ಟಿಗೂ ಪ್ರತಿರೋಧಿಸಿದರೂ ಕೆಲವು ವಿಶಿಷ್ಟ 'ನಂಬಿಕೆಗಳು' ಅವಮಾನಗಳನ್ನು ಸಹಿಸಲು ಕಾರಣಗಳಾಗಿವೆ. 'ಪತಿಯೇ ಪರದೈವ', 'ಪತಿವ್ರತೆ' ಎಂಬ ಪುರುಷಪ್ರಧಾನ ಸಮಾಜವು ಹೇರಲ್ಪಟ್ಟ ನಂಬಿಕೆಗಳೇ ಲಿಂಗ ತಾರತಮ್ಯಗಳಿಗೆ ಕಾರಣಗಳಾಗಿವೆ. ಜಾತಿ ವ್ಯವಸ್ಥೆಯಲ್ಲಿ ಕಾಣುವ ಕೆಲವು 'ಸಂಪ್ರದಾಯಗಳು' ಅಸ್ಪೃಶ್ಯ ಮಹಿಳೆಯರನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವಲ್ಲಿ ಪೂರಕವಾಗಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ತಳ ಸಮುದಾಯಗಳ ಮಹಿಳೆಯರು ಮಾತ್ರ ದೇವದಾಸಿ ಪದ್ಧತಿಗೆ ಒಳಗಾಗುವುದನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದಾಗಿದೆ. ಜೊತೆಗೆ ದಲಿತ ಮಹಿಳೆ ಲಿಂಗತ್ವಕ್ಕಾಗಿ, ಅನಕ್ಷರತೆಗಾಗಿ, ಕಪ್ಪುವರ್ಣೀಯಳಾಗಿದ್ದಕ್ಕಾಗಿ, ಮಾಂಸಹಾರಿಯಾಗಿದ್ದಕ್ಕಾಗಿ ಅವಮಾನ ಅನುಭವಿಸುವುದು ಅವಮಾನಗಳು ಕೆಲವೊಮ್ಮೆ ಒಟ್ಟೊಟ್ಟಿಗೆ ಇರುವುದನ್ನು ಸಾಕ್ಷೀಕರಿಸುತ್ತವೆ.

ಲಿಂಗದ ಕಾರಣಕ್ಕಾಗಿ ಆಗುವಂತಹ ಅವಮಾನಗಳು ಕೇವಲ ಮಹಿಳೆಯರಿಗೆ ಸೀಮಿತವಾಗದೆ ತೃತೀಯ ಲಿಂಗಿಗಳಲ್ಲೂ ಕಾಣುತ್ತದೆ. ಲಿಂಗ ಬದಲಾವಣೆಯಾಗಿ ಗಂಡಾಗಿಯೂ ಬದುಕಲಾಗದೆ, ಹೆಣ್ಣೆಂದು ಸಮಾಜವೂ ಒಪ್ಪದೆ ಹಲವಾರು ಅವಮಾನಗಳನ್ನು ಅನುಭವಿಸುವುದು ಕಂಡುಬರುತ್ತದೆ. ಇಲ್ಲಿ ನ್ಯಾಯವಾಗಿ ಬದುಕುವ ಅವಕಾಶಗಳೆಲ್ಲ ದೊರೆಯದೆ ಇಡೀ ಬದುಕೇ ಅವಮಾನಗಳ ಸರಮಾಲೆಯಂತೆ ಜೋಡಿಸಲ್ಪಟ್ಟಿರುವುದು ಗೋಚರಿಸುತ್ತದೆ. ಎಷ್ಟೋ ಬಾರಿ ರಕ್ಷಕರೇ ಅಪಮಾನಿಸುವವರೂ ಆಗಿರುತ್ತಾರೆ. ಜಾತಿ, ಲಿಂಗ, ವರ್ಗದ ಕಾರಣಗಳ ಜೊತೆಗೆ ಧರ್ಮದ ಕಾರಣಕ್ಕೂ ಅವಮಾನ ಅನುಭವಿಸುವುದನ್ನು ಕಾಣಬಹುದು. ಕೋಮುವಾದವು ಜನಸಾಮಾನ್ಯರ ನಡುವಿನಿಂದ ಸೃಷ್ಟಿಯಾದಂತಹದ್ದಲ್ಲ; ಅದು ಆರ್ಥಿಕ, ರಾಜಕೀಯ ಲಾಭಕ್ಕಾಗಿ ಕೆಲವೇ ಮೂಲಭೂತವಾದಿಗಳಿಂದ ಹುಟ್ಟಿಕೊಂಡಿರುವುದು. ಗತಕಾಲದಲ್ಲಿ ನಡೆದುಹೋಗಿರುವ ಮುಸ್ಲಿಂ ಆಳುವ ವರ್ಗಗಳು ಮಾಡಿರುವ ಒಪ್ಪುತಪ್ಪುಗಳನ್ನು ಇಂದಿನ ಮುಸ್ಲಿಂ ಸಮುದಾಯದ ಮೇಲೆ ಆರೋಪಿಸುವ ಎಷ್ಟೋ ಸಂಗತಿಗಳು ಆತ್ಮಕಥೆಗಳಲ್ಲಿ ಕಾಣಸಿಗುತ್ತವೆ. ರಾಷ್ಟ್ರೀಯತೆಯ ನೆಪದಿಂದ ಮುಸ್ಲಿಮರ ದೇಶಾಭಿಮಾನವನ್ನು ಶಂಕಿಸುವುದು ಹಾಗೂ ಎಲ್ಲಾ ಮುಸ್ಲಿಮರನ್ನು ಭಯೋತ್ಪಾದಕರಂತೆ ನೋಡುವುದು ಸಹ ಧರ್ಮದ ಕಾರಣಕ್ಕಾಗಿ ಆಗುವಂತಹ ಅವಮಾನವಾಗಿದೆ. ಇಲ್ಲಿ ಕಾಣುವ ಧಾರ್ಮಿಕ ಮೂಲಭೂತವಾದಿತನ ಇತರೆ ಧರ್ಮದವರನ್ನು ಪರಕೀಯವಾಗಿ ನೋಡುವುದಷ್ಟೇ ಅಲ್ಲದೆ ಸ್ವಧರ್ಮದೊಳಗಿನವರನ್ನು ಅವಮಾನಿಸುವುದನ್ನು ಕಾಣಬಹುದು. ಮುಸ್ಲಿಮರು ಹೆಚ್ಚಿರುವ ಹಾಗೂ ಅವರ ಅಧೀನದಲ್ಲಿರುವ ಸಂಸ್ಥೆಗಳಲ್ಲು ಹಿಂದೂಗಳನ್ನು ಪರಕೀಯವಾಗಿ ನೋಡುವ ಸನ್ನಿವೇಶವನ್ನು 'ನನ್ನೊಳಗಿನ ನಾನು' ಆತ್ಮಕಥೆಯಲ್ಲಿ ಕಾಣಬಹುದು. ಇಸ್ಲಾಂ ಧರ್ಮದೊಳಗೆ, ಪಿಂಜಾರರು, ನದಾಫ್ ಸಮುದಾಯಗಳು ಪರಕೀಯತೆ ಅನುಭವಿಸುವ ವಸ್ತು ಸನ್ನಿವೇಶಗಳಿವೆ. ಈ

ಧಾರ್ಮಿಕ ಮೂಲಭೂತವಾದವು ತಲಾಖ್, ಬುರ್ಕಾ ಪದ್ಧತಿಗಳ ಮೂಲಕ ಮಹಿಳೆಯರನ್ನು ಶೋಷಿಸುತ್ತಲೇ ಬಂದಿದೆ. ತಲಾಖ್ ಪದ್ಧತಿಯು ಪುರುಷ ಪ್ರಧಾನ ಸಮಾಜದ ಫಲವಾಗಿದ್ದು, ಇದರಲ್ಲಿ ಕಾಣುವ ಕಟ್ಟುಪಾಡುಗಳು ಮಹಿಳೆಯರನ್ನು ಅತಿ ಹೆಚ್ಚು ಘಾಸಿಗೊಳಿಸಿವೆ. ಈ ಬಗೆಯ ಅವಮಾನಗಳು ಧಾರ್ಮಿಕ ಮೂಲಭೂತವಾದಿತನದ ಉತ್ಪನ್ನಗಳಾಗಿವೆ.

ಕಾಲ, ವೈಚಾರಿಕ ಪ್ರಜ್ಞೆ, ಪ್ರಾದೇಶಿಕತೆ ಮತ್ತು ಸಾಮಾಜಿಕ ಹಿನ್ನೆಲೆಗಳು ವ್ಯಕ್ತಿಗೆ ಆಗುವ ಅವಮಾನಗಳನ್ನು ಭಿನ್ನ ಭಿನ್ನವಾಗಿಸುತ್ತವೆ. ಆತ್ಮಕಥನಕಾರರ ಬಾಲ್ಯದ ಅಸಹಾಯಕತೆಯು ಅವಮಾನಗಳನ್ನು ಸಹಿಸುವಂತಿದ್ದರೆ, ಬಾಲ್ಯದ ನಂತರದ ದಿನಗಳು ಅವಮಾನಗಳನ್ನು ಪ್ರತಿರೋಧಿಸುವಂತಿವೆ. ಒಂದು ಕಾಲದಲ್ಲಿ ಜಾತಿ ನಿಂದನೆಗೆ ಒಳಗಾಗುತ್ತಿದ್ದ ವ್ಯಕ್ತಿ ಅಥವಾ ಸಮುದಾಯವು ಮತ್ತೊಂದು ಸಮಯದಲ್ಲಿ ಗೌರವಕ್ಕೆ ಪಾತ್ರವಾಗುವುದು ವೈರುಧ್ಯವಾಗಿದೆ. ಭೂ ಮಾಲೀಕರ ಹೊಲದಲ್ಲಿ ಕೂಲಿ ಆಳುಗಳಾಗಿ ಅವಮಾನಕ್ಕೆ ಒಳಗಾಗುವ ಮಾದಿಗರು ದಾರ್ಮಿಕ ಆಚರಣೆಗಳಲ್ಲಿ ಆಸಾದಿಗಳಾಗಿ ಗೌರವಕ್ಕೆ ಒಳಗಾಗುವುದನ್ನು ಗುರುತಿಸಬಹುದಾಗಿದೆ. ಹೀಗಾಗಿ ಕಾಲ ಮತ್ತು ಸನ್ನಿವೇಶಗಳು ಒಬ್ಬನೇ ವ್ಯಕ್ತಿಗೆ ಆಗುವ ಅವಮಾನಗಳನ್ನು ಬೇರೆ ಬೇರೆಯಾಗಿಸುತ್ತವೆ. ಪ್ರಾದೇಶಿಕತೆಯು ಸಹ ಅವಮಾನಗಳನ್ನು ಭಿನ್ನ ಭಿನ್ನವಾಗಿಸುತ್ತವೆ. ಉತ್ತರ ಕರ್ನಾಟಕದ ಜಮೀನ್ದಾರಿ ವ್ಯವಸ್ಥೆಯ ಗ್ರಾಮೀಣ ಬದುಕಿನಲ್ಲಿ ಸಂಪ್ರದಾಯದ ಹೆಸರಲ್ಲಿ ಅಸ್ಪೃಶ್ಯರನ್ನು ಅವಮಾನಿಸುವುದು ಹೆಚ್ಚಿನ ಪ್ರಮಾಣದಲ್ಲಿದ್ದರೆ, ನಗರ ವ್ಯವಸ್ಥೆಯ ಜನಜೀವನದಲ್ಲಿ ಅಪರಿಚಯದ ಕಾರಣ, ಶಿಕ್ಷಣ ಪಡೆದಿರುವವರ ಪ್ರಮಾಣ ಹೆಚ್ಚಿರುವುದು ಅಸ್ಪೃಶ್ಯತೆ ಅಲ್ಪಮಟ್ಟಿಗೆ ಇರುವುದಕ್ಕೆ ಕಾರಣಗಳಾಗಿವೆ. ಹೀಗೆ ಹಲವು ಕಾರಣಗಳು ಪ್ರಾದೇಶಿಕವಾಗಿ ಅವಮಾನಗಳು ಭಿನ್ನ ಭಿನ್ನವಾಗಿ ಅನುಭವಕ್ಕೆ ಬರಲು ಕಾರಣವಾಗುತ್ತವೆ. ವರ್ಣ ವ್ಯವಸ್ಥೆಯ ದುಷ್ಪರಿಣಾಮದಿಂದಾಗಿ ಜಾತಿಗೊಂದು ವೃತ್ತಿಯು ಸೀಮಿತವಾಯಿತು. ಮೇಲ್ವರ್ಗದವರು ತಳಸಮುದಾಯಗಳಿಗೆ, ಮಹಿಳೆಯರಿಗೆ ಶಿಕ್ಷಣ ನೀಡದೆ ಉನ್ನತ ವೃತ್ತಿಗಳಿಗೆ ಬರದಂತೆ ತಂತ್ರ ರೂಪಿಸಿದರು. ಇದರ ಪರಿಣಾಮ ತಳಸಮುದಾಯಗಳು ಮೇಲ್ವರ್ಗದವರ ಸೇವೆ ಮಾಡುವ ಹೀನಾಯವಾದ ವೃತ್ತಿಗಳನ್ನು ಮಾಡುವಂತಾಯಿತು. ಈ ಹೀನಾಯವಾದ ವೃತ್ತಿಗಳನ್ನು ಮಾಡುವ ಕಾರಣಕ್ಕೆ ಅವಮಾನಕ್ಕೆ ಒಳಗಾಗುವಂತಹ ಸ್ಥಿತಿಯೂ ಬಂದಿತು. ಈ ತರದ ವೃತ್ತಿ ಕೇಂದ್ರಿತ ಅವಮಾನಗಳು ಲಕ್ಷ್ಮಣ್ ಅವರ 'ಸಂಬೋಳಿ' ಆತ್ಮಕಥೆಯಲ್ಲಿವೆ. ಕೆಲವೊಂದು ಬಾರಿ ಅವಮಾನಿಸುವ ಸ್ಥಿತಿ ಹಾಗೂ ಅವಮಾನಕ್ಕೆ ಒಳಗಾಗುವ ಪರಿಸ್ಥಿತಿಗಳು ಚಾರಿತ್ರಿಕವಾಗಿ ಪಲ್ಲಟಗೊಳ್ಳುತ್ತಿರುತ್ತದೆ. ಉದಾಹರಣೆಗೆ ನಿಜಾಮರ ಕಾಲದಲ್ಲಿ ಮುಸ್ಲಿಮರು ಮತ್ತು ಉರ್ದು ಭಾಷೆ ಮೇಲ್ಮಟ್ಟದಲ್ಲಿದ್ದರೆ, ನಿಜಾಮರ ಆಳ್ವಿಕೆ ಪತನದ ನಂತರ ಅವರು ಮತ್ತು ಅವರ ಭಾಷೆಯ ಸ್ಥಾನಮಾನದಲ್ಲಿ ಬದಲಾವಣೆಯಾಯಿತು. ಹೀಗೆ ಅಧಿಕಾರಸ್ಥ ನೆಲೆ ಪಲ್ಲಟಗೊಳ್ಳುತ್ತ ಚಲನಶೀಲವಾಗಿರುತ್ತದೆ. ಅವಮಾನಿಸುವ ಸ್ಥಿತಿಯು ಕೇವಲ ವ್ಯಕ್ತಿ ನೆಲೆಯಲ್ಲಿ ಮಾತ್ರ ನಡೆಯುವುದಿಲ್ಲ. ಅವಮಾನಿಸುವ ಸ್ಥಿತಿಯ ಹಿಂದೆ ಇಡೀ ವ್ಯವಸ್ಥೆಯ ಬಲ ಇರುತ್ತದೆ; ಹಿಂದಿನಿಂದ ಬಂದ

ಸಂಪ್ರದಾಯವಿರುತ್ತದೆ. 'ಊರುಕೇರಿ' ಆತ್ಮಕಥೆಯಲ್ಲಿ ದಲಿತರನ್ನು ಎತ್ತುಗಳಂತೆ ಹೊಲ ಉಳುವುದಕ್ಕೆ ಬಳಸಿಕೊಳ್ಳುವ ಹಾಗೂ ಪಶುಗಳಂತೆ ಹೊಲದಲ್ಲಿ ದುಡಿಯುವ ಅನಿವಾರ್ಯತೆಗೆ ಒಳಗಾಗುವ ಸನ್ನಿವೇಶಗಳಿವೆ. ಇವು ಅಸ್ಪೃಶ್ಯರ ಸಾಮಾಜಿಕ, ಆರ್ಥಿಕ ಕನಿಷ್ಠತೆಗಳನ್ನು ಮತ್ತು ಆ ಕಾರಣಕ್ಕಾಗಿ ಅನುಭವಿಸುವ ಅವಮಾನಗಳನ್ನು ಹೇಳುತ್ತವೆ.

ಅವಮಾನಗಳಿಗೆ ಸಂಬಂಧಿಸಿದಂತೆ ಗಮನಿಸಬೇಕಾದ ಕೆಲವು ಸಂಗತಿಗಳಿವೆ. ಶೋಷಿತರಲ್ಲಿ ಅವಮಾನ ಪ್ರಜ್ಞೆ ಇಲ್ಲದಿದ್ದರೆ ಅವಮಾನಗಳು ಸಹಜವಾಗಿ ಬಿಡುತ್ತವೆ. ಭಾರತದಲ್ಲಿ ಇಷ್ಟೆಲ್ಲ ಶೋಷಣೆಗಳು ದಬ್ಬಾಳಿಕೆಗಳು ನಡೆಯುತ್ತಿದ್ದರೂ ಹೆಚ್ಚಿನ ಜನರೂ ಮೌನವಾಗಿರಲು ಕಾರಣ 'ನಮ್ಮ ಹಣೆಬರಹ,' 'ಇದೇ ನಮ್ಮ ಬದುಕು' ಎಂದು ಶೋಷಿತರು ಅವಮಾನಗಳನ್ನು ಸಹಜ ಎಂದು ಭಾವಿಸಿರುವಂತೆ ಮಾಡಿರುವುದಾಗಿದೆ. ಈ ರೀತಿ ದಮನದ ಪ್ರಜ್ಞೆ ಇಲ್ಲದಿದ್ದರೆ ಅವಮಾನಗಳು ಸಾಮಾನ್ಯವಾಗಿ ಬಿಡುತ್ತವೆ. ಗಂಡು-ಹೆಣ್ಣು ನಡುವೆ ಇರುವ ತಾರತಮ್ಯಗಳನ್ನು ದಮನದ ಪ್ರಜ್ಞೆ ಇಲ್ಲದ ಮಹಿಳೆಯರು ಸಾಮಾನ್ಯ ಸ್ವಾಭಾವಿಕ ಎಂದು ಪರಿಗಣಿಸಿರುತ್ತಾರೆ. ಅಷ್ಟೇ ಅಲ್ಲದೆ ನೀನು ಎರಡನೇ ದರ್ಜೆಯವಳು, ಇದು ಪ್ರಕೃತಿಯ ನಿಯಮ ಎಂದು ಒಪ್ಪಿಸಲಾಗಿರುತ್ತದೆ. ದಲಿತರು ಅಸ್ಪೃಶ್ಯತೆಯನ್ನು ಸ್ವಾಭಾವಿಕವೆಂದು ಪ್ರಭುತ್ವ ರೂಪಿಸಿದ ಮೌಢ್ಯಗಳನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಹೋಗುವುದು ಅಥವಾ ಹೋಗುವಂತೆ ಮಾಡಲಾಗಿರುವುದು ಅವಮಾನ ಅರಿವಿಗೆ ಬಾರದ ಸ್ಥಿತಿಯಾಗಿದೆ. ಇನ್ನೂ ಕೆಲವೊಮ್ಮೆ ಅವಮಾನದ ಪ್ರಜ್ಞೆ ಇದ್ದರೂ ಅದನ್ನು ಸಹಿಸಿಕೊಂಡು ಹೋಗುವ ಅನಿವಾರ್ಯತೆ ಇರುತ್ತದೆ. ಆದರೆ ಇತ್ತೀಚೆಗೆ ಶಿಕ್ಷಣ ಹಾಗೂ ವೈಚಾರಿಕತೆಯ ಪರಿಣಾಮವಾಗಿ ಅವಮಾನದ ಸಂಗತಿಗಳನ್ನು ಪ್ರತಿರೋಧಿಸುವ ಪ್ರತಿಭಟಿಸುವ ಕೆಲಸಗಳು ಅಲ್ಲಲ್ಲಿ ನಡೆಯುತ್ತಿವೆ. ವರ್ಗ ಸಂಘರ್ಷ, ದಲಿತ ಸಂಘರ್ಷ ಸಮಿತಿಯ ಜಾತಿ ವಿನಾಶದ ಹೋರಾಟಗಳಲ್ಲಿ, ಸ್ತ್ರೀವಾದಿ ಚಳವಳಿಗಳಲ್ಲಿ ಪ್ರತಿರೋಧದ ಅಂಶಗಳನ್ನು ನಾವು ಹೆಚ್ಚಾಗಿ ಕಾಣಬಹುದು. ಈ ಹೋರಾಟಗಳ ಚಳವಳಿಗಳ ಭಾಗವಾಗಿ ಕೂಡ ಆತ್ಮಕಥೆಗಳು ಹುಟ್ಟಿರುತ್ತವೆ. ಹಾಗಾಗಿ ಆತ್ಮಕಥೆಗಳಲ್ಲಿ ಅವಮಾನಗಳನ್ನು ಪ್ರತಿರೋಧಿಸುವ ಸಂಗತಿಗಳು ಸಹಜವಾಗಿ ವ್ಯಕ್ತವಾಗಿವೆ. ಹೀಗೆ ಅವಮಾನ ಮತ್ತು ಪ್ರತಿರೋಧಗಳು ಸಮಾಜದಲ್ಲಿಯೂ ಮತ್ತು ಅವುಗಳ ಉತ್ಪನ್ನಗಳಾಗಿರುವ ಆತ್ಮಕಥೆಗಳಲ್ಲೂ ಹಲವು ಸ್ವರೂಪಗಳಲ್ಲಿರುತ್ತವೆ.

### ೩.೨. ಪ್ರತಿರೋಧದ ಪರಿಕಲ್ಪನೆ:

ಪ್ರತಿರೋಧವು ವಿರೋಧ, ಆಕ್ರಮಣ, ಮುತ್ತಿಗೆ ಮುಂತಾದ ಹಲವು ಅರ್ಥಗಳನ್ನೊಳಗೊಂಡಿದ್ದು, ಶೋಷಿತರು ಅಸಮಾನತೆಯ, ಶೋಷಣೆ ವಿರುದ್ಧ ಪ್ರತಿಭಟಿಸುತ್ತ ತಮ್ಮ ಹಕ್ಕು ಸ್ಥಾನಮಾನಗಳನ್ನು ಪಡೆಯಲು ಪ್ರತಿಭಟನೆ ಮಾಡುವುದು ಪ್ರತಿರೋಧವಾಗಿದೆ. ಪ್ರತಿರೋಧವು ಏಕಮುಖವಾಗಿರುವುದಿಲ್ಲ, ಬದಲಿಗೆ ಭಿನ್ನ ಭಿನ್ನವಾಗಿರುತ್ತದೆ. ಸ್ವಾಭಿಮಾನಕ್ಕೆ ದಕ್ಕೆ ತರುವ ಸಂಗತಿಗಳ ನಿರಾಕರಣೆಗಳಿಂದ

ಹಿಡಿದು ಅವ್ಯವಸ್ಥೆಯನ್ನು ಬದಲಿಸುವ ಕ್ರಾಂತಿಕಾರಕ ಚಳವಳಿಯವರೆಗೂ ಪ್ರತಿರೋಧದ ವ್ಯಾಪ್ತಿ ವಿಸ್ತರಿಸಿದೆ. ಚಾರ್ವಾಕರು, ಬುದ್ಧ, ಬಸವ, ಸಾವಿತ್ರಿಬಾಯಿ ಫುಲೆ, ಅಂಬೇಡ್ಕರ್, ನಾರಾಯಣ ಗುರು, ವಿವೇಕಾನಂದರು...... ಬಿ.ಕೃಷ್ಣಪ್ಪ ಮುಂತಾದವರು ಪ್ರಭುತ್ವದ ಶೋಷಕ ವ್ಯವಸ್ಥೆಯನ್ನು ಪ್ರತಿರೋಧಿಸುತ್ತಲೇ ಬಂದಿದ್ದಾರೆ. ಈ ಪ್ರತಿರೋಧಗಳು ಏಕರೂಪದಲ್ಲಿರದೆ ಹಲವು ಬಗೆಗಳಲ್ಲಿವೆ. ಆತ್ಮಕಥನಕಾರರು ಸನ್ನಿವೇಶವನ್ನು ಮುಖಾಮುಖಿಯಾಗುವ ಕಾಲ, ಸನ್ನಿವೇಶ, ವೈಚಾರಿಕ ಪ್ರಜ್ಞೆಯ ಸ್ಥಿತಿಗತಿಗಳ ಹಿನ್ನೆಲೆಯನ್ನಾಧರಿಸಿ ಪ್ರತಿರೋಧಗಳು ಭಿನ್ನ ಭಿನ್ನವಾಗಿ ವ್ಯಕ್ತಗೊಳ್ಳುವುದನ್ನು ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

ಮೊದಲನೆಯದಾಗಿ ಅಸಹಾಯಕತೆಯ ಕಾರಣಕ್ಕೆ ಪ್ರತಿರೋಧಗಳು ಪರ್ಯಾಯ ಮಾದರಿಯಲ್ಲಿ ವ್ಯಕ್ತಗೊಳ್ಳುತ್ತವೆ. ಹಳ್ಳಿಗಳಲ್ಲಿ ಅಸ್ಪೃಶ್ಯರು ಜನಸಂಖ್ಯೆಯ ದೃಷ್ಟಿಯಿಂದ ಬಹುಸಂಖ್ಯಾತರಾದರೂ ಆರ್ಥಿಕವಾಗಿ ದುರ್ಬಲರಿರುವ ಕಾರಣ ಜಮೀನ್ದಾರಿ ವ್ಯವಸ್ಥೆಯನ್ನು ನೇರವಾಗಿ ಪ್ರತಿರೋಧಿಸಲು ಅವರಿಗೆ ಆಗುವುದಿಲ್ಲ. ಇಂತಹ ಸಂದರ್ಭದಲ್ಲಿ ದಮನಿತರು ಪರ್ಯಾಯ ಮಾರ್ಗಗಳನ್ನು ಕಂಡುಕೊಂಡಿರುತ್ತಾರೆ. ಇದು ಮೊದಲನೆ ಮಾದರಿಯ ಪ್ರತಿರೋಧವಾಗಿದೆ. ಗೌಡನಿಂದ ಅವಮಾನಕ್ಕೆ ಒಳಗಾದ ದಮನಿತ ಗೌಡನ ಹೊಲದ ಬೆಳೆಯನ್ನು ಹಾಳು ಮಾಡುವುದು ಅಥವಾ ಹೊಲದ ಕೆಲವು ಪದಾರ್ಥಗಳನ್ನು ಕದಿಯುವುದು. ಮಾಟಮಂತ್ರದ ಅಥವಾ 'ದೈವಿಕ ಶಕ್ತಿ'ಯ ಮೊರೆ ಹೋಗುವುದು. ಇಂತಹ ಕೆಲವು ಸಂಗತಿಗಳು ನೇರವಾಗಿ ಶೋಷಕ ವ್ಯವಸ್ಥೆಯನ್ನು ಮುಖಾಮುಖಿಯಾಗದಿದ್ದರೂ, ಪರೋಕ್ಷ ಮಾದರಿಯಲ್ಲಿ ಪ್ರತಿರೋಧಿಸುವ ಪ್ರಜ್ಞೆಯನ್ನು ಜಾಗೃತಗೊಳಿಸುತ್ತವೆ. ಶಿಕ್ಷಣ, ವೈಚಾರಿಕತೆಯ ಕೊರತೆ, ಬಡತನ ಮತ್ತು ತಳಸಮುದಾಯವೆಂದು ತುಳಿತಕ್ಕೆ ಒಳಪಟ್ಟಿರುವುದು ಹೀಗೆ ಹಲವು ಹಿನ್ನೆಲೆಗಳು ಅಸಹಾಯಕತೆಯ ಪ್ರತಿರೋಧಗಳು ಆತ್ಮಕಥೆಗಳಲ್ಲಿ ಅಭಿವ್ಯಕ್ತಿಗೊಂಡಿರುವುದಕ್ಕೆ ಕಾರಣಗಳಾಗುತ್ತವೆ. ಇಲ್ಲಿ ಬಹಳ ಮುಖ್ಯವಾದ ಮಾನಸಿಕ ಕಾರಣವೊಂದಿದೆ. ದಮನಿತರು ಪರ್ಯಾಯ ಮಾದರಿಯಲ್ಲಿ ಪ್ರತಿರೋಧ ತೋರುವುದು ಅವರು ಮಾನಸಿಕ ವೇದನೆಗಳಿಂದ ಹೊರಬರುವುದರ ಭಾಗವಾಗಿದೆ.

ಎರಡನೆಯದಾಗಿ ವ್ಯಕ್ತಿಯು ತನ್ನ ಸ್ವಾಭಿಮಾನಕ್ಕೆ ಧಕ್ಕೆ ಬರುವಂತಹದ್ದನ್ನು ನಿರಾಕರಿಸುವುದು ಕೂಡ ಪ್ರತಿರೋಧವೇ ಆಗಿದೆ. ಕನ್ನಡ ಆತ್ಮಕಥೆಗಳಲ್ಲಿ ಲೇಖಕರು ಜಾತಿ ಕಾರಣಕ್ಕಾಗಿ ಅವಮಾನಿಸುವ ಗೆಳೆಯರ ಮನೆಗೆ ಹೋಗುವುದನ್ನು ನಿರಾಕರಿಸುವುದು ಪ್ರತಿರೋಧವೇ ಆಗಿದೆ. ಮೂರನೆಯದಾಗಿ ಪ್ರತಿರೋಧ ಎಂಬ ಪದದೊಳಗೆ ಪ್ರತಿತಂತ್ರದ ಅರ್ಥ ಅಡಗಿದೆ. ಮೇಲ್ವರ್ಗದವರು ದುರ್ಬಲರನ್ನು ಶೋಷಿಸಲು ಮಾಡಿಕೊಂಡಿರುವ ನಿರ್ಬಂಧಗಳನ್ನು ಮೀರಲು ದಮನಿತರು ತಮ್ಮ ಅಸಹಾಯಕ ಬದುಕಿನಲ್ಲಿಯೇ ಕಂಡುಕೊಂಡಿರುವ ಪ್ರತಿತಂತ್ರಗಳು ಪ್ರತಿರೋಧಗಳೂ ಆಗಿವೆ. ನಾಲ್ಕನೆಯದಾಗಿ ಪ್ರತಿರೋಧಗಳು ಸಂಘಟನಾತ್ಮಕ ಹೋರಾಟಗಳ ಮೂಲಕವೂ ಉಂಟಾಗುತ್ತವೆ. ಶಿಕ್ಷಣ, ಅಂಬೇಡ್ಕರ್

ಅವರ ಪ್ರಭಾವ, ವೈಚಾರಿಕತೆಯ ಪ್ರಜ್ಞೆ ಇರುವ ಸಂಘಟನೆಗಳು ಒಂದುಗೂಡಿದ್ದರ ಫಲವಾಗಿ ಶೋಷಕ ವ್ಯವಸ್ಥೆಯ ವಿರುದ್ಧ ಹೋರಾಟಗಳು ನಡೆದಿರುವುದರ ಚರಿತ್ರೆಯೇ ಇದೆ. ವ್ಯಕ್ತಿ ಅಥವಾ ಸಮುದಾಯಗಳು ತಾವು ಅನುಭವಿಸಿದ ಅವಮಾನಗಳನ್ನು ಪ್ರತಿರೋಧಿಸುವ ಮನಸ್ಸಿದ್ದರೂ ಕೆಲವೊಮ್ಮೆ ಪ್ರತಿರೋಧಿಸಲಾಗದ ಸಾಧ್ಯತೆಗಳಿರುತ್ತವೆ. ಕೆಲವೊಮ್ಮೆ ಪ್ರತಿರೋಧಿಸಿದಂತೆ ಈ ವ್ಯವಸ್ಥೆಯೇ ಹತ್ತಿಕ್ಕುವ ಕೆಲಸ ಮಾಡುತ್ತದೆ. ಎಂಬತ್ತರ ದಶಕದಲ್ಲಿ ಬಸವಲಿಂಗಪ್ಪನವರನ್ನು ಸಚಿವ ಸ್ಥಾನದಿಂದ ಕೆಳಗಿಳಿಸಿದ್ದಕ್ಕಾಗಿ ಪ್ರತಿಭಟನೆ ಮಾಡುವವರನ್ನು ಥಳಿಸಿದ್ದು ಇದಕ್ಕೆ ಉದಾಹರಣೆಯಾಗಿದೆ. ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಜುಂಜಪ್ಪ, ಮಾದೇಶ್ವರ, ಮಂಟೇಸ್ವಾಮಿ ಎಲ್ಲವ್ವ, ಪ್ರತಿರೋಧದ ಮೂಲಕವೇ ತಮ್ಮ ಸಾಂಸ್ಕೃತಿಕ ಅಸ್ತಿತ್ವವನ್ನು ಉಳಿಸಿಕೊಂಡವರು. ಜಾತೀಯತೆ ಲಿಂಗ ತಾರತಮ್ಯ ವರ್ಗ ಅಸಮಾನತೆ ಮುಂತಾದ ಅಸಮಾನತೆಗಳನ್ನು ವಿರೋಧಿಸಿ ಜಾತ್ಯತೀತ, ಲಿಂಗಾತೀತ, ವರ್ಗಾತೀತ, ಧರ್ಮಾತೀತ ಸಮಾಜವನ್ನು ಕಟ್ಟುವ ಸಲುವಾಗಿ ಪ್ರತಿರೋಧಗಳು ಕಂಡುಬರುತ್ತವೆ.

### ೩.೩. ಅವಮಾನ ಮತ್ತು ಪ್ರತಿರೋಧದ ಸಂಬಂಧ

ಅವಮಾನ ಮತ್ತು ಪ್ರತಿರೋಧಗಳು ಆಂತರಿಕವಾಗಿ ಒಂದಕ್ಕೊಂದು ಸಂಬಂಧವನ್ನು ಒಳಗೊಂಡಿವೆ. ವ್ಯಕ್ತಿಗಳಿಗೆ ಆಗುವ ಅವಮಾನ, ಅವರು ತೋರುವ ಪ್ರತಿರೋಧದ ಮೂಲಕ ಸಮೂಹದ ಬದಲಾವಣೆಗೆ ಕಾರಣವಾಗಬಹುದು. ಉದಾಹರಣೆಗೆ ಗಾಂಧೀಜಿಗೆ ದಕ್ಷಿಣ ಆಫ್ರಿಕದಲ್ಲಿ ಆದ ಅವಮಾನ ವರ್ಣ ತಾರತಮ್ಯದ ವಿರುದ್ಧ ಹೋರಾಡಲು ಪ್ರೇರಣೆಯಾಯಿತು. ಇದೇ ವಿನ್ಯಾಸವು ನೆಲ್ಸನ್ ಮಂಡೇಲರವರಿಂದಲೂ ಮುಂದುವರಿಯಿತು. ಕನ್ನಡ ಆತ್ಮಕಥೆಗಳಲ್ಲಿ ಆತ್ಮಕಥನಕಾರರು ಎಷ್ಟೋ ಅಪಮಾನಕ್ಕೆ ಒಳಗಾದ ಘಟನೆಗಳನ್ನು ಇಂದಿನ ವೈಚಾರಿಕ ಪ್ರಜ್ಞೆಯನ್ನು ಇಟ್ಟುಕೊಂಡು ವಿವರಿಸುತ್ತಾರೆ. ಆಗ ಬಾಲ್ಯದಲ್ಲಿ ನಡೆದಿರುವ ಅವಮಾನಗಳು ಒಂದೊಂದಾಗಿ ಅರಿವಿಗೆ ಬರುತ್ತವೆ. ಯಾವುದೇ ಬಗೆಯ ಆತ್ಮಕಥೆಗಳಲ್ಲಿ ದಮನಿತರ ಮೇಲಾದ ಅಪಮಾನಗಳು ಹಾಗೂ ಅವಮಾನಗಳನ್ನು ಮೀರುವ ಪ್ರತಿರೋಧಾತ್ಮಕ ಸಂಗತಿಗಳ ಚರಿತ್ರೆ ಹಲವು ವಿನ್ಯಾಸಗಳಲ್ಲಿವೆ. ಇವು ಹೊಸ ಬಗೆಯ ಚರಿತ್ರೆಯನ್ನು ಕಟ್ಟುವಲ್ಲಿ ಸಹಕಾರಿಯಾಗುತ್ತವೆ, ಅವಮಾನಗಳಿಗೆ ತೋರುವ ಪ್ರತಿರೋಧಗಳು ಕೆಲವೊಮ್ಮೆ ಯಶಸ್ವಿಯಾಗಬಹುದು ಅಥವಾ ಆಗದೆಯೂ ಇರಬಹುದು. ಕೆಲವೊಂದು ತಾತ್ಕಾಲಿಕವಾಗಿ ಹಿನ್ನಡೆಯಾದರೂ ಮುಂದಿನ ದಿನಮಾನಗಳಲ್ಲಿ ದಮನಿತರ ಮೇಲೆ ಜಾಗೃತಿಯನ್ನಾದರೂ ಮೂಡಿಸಬಹುದು. ಇಂತಹ ಅವಮಾನ ಮತ್ತು ಪ್ರತಿರೋಧಗಳ ಹಲವು ವಿನ್ಯಾಸಗಳನ್ನು ಆತ್ಮಕಥೆಗಳ ಮೂಲಕ ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಅಧ್ಯಾಯ : ನಾಲ್ಕು

# ಜಾತಿಯ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

೪.೧. ದಲಿತ ಒಳಪಂಗಡಗಳಲ್ಲಿ ಜಾತಿ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೪.೨. ಸವರ್ಣೀಯರಿಗೆ ಜಾತಿ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೪.೩. ಮಹಿಳೆಯರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೪.೪. ಅಲೆಮಾರಿ ಸಮುದಾಯಗಳಿಗೆ ಜಾತಿ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೪.೫. ದಲಿತರಿಗೆ ಜಾತಿ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೪.೬. ಅಭಿವ್ಯಕ್ತಿ ಸ್ವರೂಪ

ಅಧ್ಯಾಯ : ನಾಲ್ಕು

# ಜಾತಿಯ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

## ಪ್ರಸ್ತಾವನೆ

ಸಂವಿಧಾನದ ಪ್ರಕಾರ ಭಾರತ ದೇಶವು ಜಾತ್ಯತೀತ ರಾಷ್ಟ್ರವಾಗಿದ್ದರೂ ವಾಸ್ತವತೆಯಲ್ಲಿ ಜಾತೀಯತೆ ಅತಿಯಾಗಿರುವ ರಾಷ್ಟ್ರವಾಗಿದೆ. ಈ ಜಾತೀಯತೆಯ ಮೂಲ ಬೇರಿರುವುದು ಹಿಂದೂ ಧರ್ಮದೊಳಗಿನ ವರ್ಣಾಶ್ರಮ ಪದ್ಧತಿಯಲ್ಲಿ. ಜಾತಿ ಎಂಬುದೊಂದು ಸಾಮಾಜಿಕ ವಾಸ್ತವವಾಗಿದ್ದೂ, ಇಲ್ಲಿ ನಡೆಯುವ ಬಹುತೇಕ ಸಂಗತಿಗಳಿಗೆ ಜಾತಿ ಪ್ರತ್ಯಕ್ಷವಾಗಿಯಾದರೂ, ಪರೋಕ್ಷವಾಗಿಯಾದರೂ ಸಂಬಂಧ ಹೊಂದಿರುತ್ತದೆ. ಅಸಮಾನತೆಯು ಇದರ ಮೂಲ ಗುಣವಾಗಿ, ವ್ಯಕ್ತಿಯ ಹುಟ್ಟಿನ ಸ್ಥಿತಿಗತಿಗಳು ಜನರ ಬದುಕನ್ನು ನಿಯಂತ್ರಿಸುತ್ತವೆ. ಇಡೀ ದೇಶಾದ್ಯಂತ ಲಿಂಗ, ವರ್ಣ, ವರ್ಗ, ಧರ್ಮ ಹೀಗೆ ಹಲವಾರು ನೆಲೆಯ ಶ್ರೇಣೀಕರಣಗಳಿವೆ. ಇವುಗಳೆಲ್ಲದರಲ್ಲೂ ಅತಿ ಆಳವಾಗಿ ಮತ್ತು ಪ್ರಖರವಾಗಿ ಬೇರೂರಿರುವುದು ಜಾತಿ ಶ್ರೇಣೀಕರಣವಾಗಿದ್ದು, ಇದು ಇಳಿಕೆ ಕ್ರಮದಲ್ಲಿ ರಚನೆಯಾಗಿದೆ. ಒಂದು ಸಮುದಾಯ ಮತ್ತೊಂದು ಸಮುದಾಯವನ್ನು ಶೋಷಿಸುವ ಹಿನ್ನೆಲೆಯಲ್ಲಿ ಈ ಜಾತಿ ವ್ಯವಸ್ಥೆ ಸಂರಚನೆಗೊಂಡಿದೆ. ನೀರಿಗೆ ಹೇಗೆ ಹರಿಯುವ ಗುಣ ಸಹಜವೊ, ಹಾಗೆಯೇ ಜಾತಿ ವ್ಯವಸ್ಥೆಯೂ ಶ್ರೇಣೀಕರಣ ಸಂಸ್ಕೃತಿಯನ್ನು ತನ್ನ ಒಡಲೊಳಗೆ ಅಂತರ್ಗತವಾಗಿಸಿಕೊಂಡಿದೆ. ಈ ಜಾತಿ ಶ್ರೇಣೀಕರಣವು ಜಾತೀಯತೆಗೆ ಕಾರಣವಾಗಿದೆ. ಭಾರತದಲ್ಲಿ ಜಾತೀಯತೆ ಇದೆ ಎಂದಾದ ಮೇಲೆ ಅದರ ಕಾರಣಕ್ಕಾಗಿ ಆಗುವಂತಹ ಅವಮಾನ ಕೂಡ ಇದೆ ಎಂಬುದೇ ಅರ್ಥ. ಅವಮಾನಗಳಿವೆ ಎಂದ ಮೇಲೆ ಅವಮಾನಗಳಿಂದ ಮುಕ್ತರಾಗಲು ಅವಮಾನಿತ ಜನರು ಪ್ರಯತ್ನಿಸಿದ್ದಾರೆ ಮತ್ತು ಪ್ರಯತ್ನಿಸುತ್ತಿದ್ದಾರೆ ಎಂದೇ ಅರ್ಥ. ಈ ಅವಮಾನ ಮತ್ತು ಪ್ರತಿರೋಧಗಳು ದೇಶದೊಳಗಿನ ಶ್ರೇಣೀಕರಣಗಳನ್ನು ಅವಲಂಬಿಸಿರುತ್ತವೆ.

ಕನ್ನಡ ಆತ್ಮಕಥೆಗಳಲ್ಲಿ ಜಾತಿ ಕಾರಣಕ್ಕೆ ಆಗುವ ಅವಮಾನ ಮತ್ತು ಪ್ರತಿರೋಧಗಳನ್ನು ಈ ಕೆಳಗಿನ ವಿಶ್ಲೇಷಣೆಯನ್ನು ಆಧರಿಸಿ ಉಪ ಅಧ್ಯಾಯಗಳನ್ನಾಗಿ ಮಾಡಿಕೊಂಡು ಅಧ್ಯಯನ ಮಾಡಬಹುದಾಗಿದೆ. ಅವಮಾನ ಮತ್ತು ಪ್ರತಿರೋಧಗಳು ಏಕರೂಪಿಯಾಗಿರುವುದಿಲ್ಲ, ಬದಲಿಗೆ ಬಹುರೂಪಿಯಾಗಿರುತ್ತವೆ. ಈ ಕಾರಣಕ್ಕಾಗಿಯೇ ಅಧ್ಯಾಯಗಳಲ್ಲೂ ಬಹುರೂಪತೆ ಸಹಜವಾಗಿವೆ.

ಸವರ್ಣೀಯರಿಂದ ಜಾತಿ ಕಾರಣಕ್ಕೆ ಸುದೀರ್ಘವಾಗಿ ಅವಮಾನಕ್ಕೆ ಒಳಗಾದ ದಲಿತರು, ಮಹಿಳೆಯರು ಮತ್ತು ಅಲೆಮಾರಿಗಳು ಒಂದು ಬಗೆಯಾದರೆ, ಸವರ್ಣೀಯರೂ ಸಹ ಕೆಲವು ಸಂದರ್ಭಗಳಲ್ಲಿ ಅವಮಾನಕ್ಕೆ ಒಳಗಾಗುವುದು ಮತ್ತೊಂದು ಬಗೆಯಾಗಿದೆ. ದಮನಿತರು ತಮ್ಮನ್ನು ಅವಮಾನಿಸಿದ ಈ ವ್ಯವಸ್ಥೆಯನ್ನು ವಿಮರ್ಶಿಸುವ ಮಾರ್ಗದಲ್ಲಿ ಮೂರು ಧಾರೆಗಳಿವೆ. ತಮ್ಮನ್ನು ಹಿಂದಿನಿಂದಲೂ ಅವಮಾನಿಸಿದ ಸವರ್ಣೀಯರಿಗೆ ನಮ್ಮನ್ನು ಮನುಷ್ಯರಾಗಿ ಕಾಣುವಂತೆ ಮನವಿ ಮಾಡುವುದು ಒಂದು ಮಾದರಿಯಾದರೆ, ತಮ್ಮನ್ನು ಶೋಷಿಸಿದ ಸವರ್ಣೀಯರ ಮನ ಪರಿವರ್ತನೆಗೆ ಹೋರಾಟ ಮಾಡುವುದು ಎರಡನೆಯ ಮಾದರಿಯಾಗಿದೆ. ಮೂರನೆಯದೆಂದರೆ ಎಲ್ಲಾ ಸವರ್ಣೀಯರನ್ನು ನಿಷ್ಕಾರಣವಾಗಿ ಶೋಷಕರಂತೆ ಅವಮಾನಿಸುವುದು. ಹೀಗಾಗಿ ಅವಮಾನಗಳು ಕೇವಲ ತಳಸಮುದಾಯಗಳಿಗೆ ಮಾತ್ರ ಸೀಮಿತವಾಗದೆ 'ಉಚ್ಛ' ಎಂದು ಕರೆಯಲಾಗುವ ಸಮುದಾಯಗಳಿಗೂ ಉಂಟಾಗುವ ಸಾಧ್ಯತೆಗಳಿವೆ. ಆ ಕಾರಣಕ್ಕಾಗಿ ಸವರ್ಣೀಯರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಒಂದು ಅಧ್ಯಾಯವನ್ನು ಮಾಡಿಕೊಳ್ಳಲಾಗಿದೆ.

ಬುದ್ಧ, ಬಸವ, ಫುಲೆ ದಂಪತಿಗಳು ಹೀಗೆ ಎಷ್ಟೋ ಮಹನೀಯರು ಬಂದರೂ ದೇಶದಲ್ಲಿ ಇನ್ನೂ ಸಂಪೂರ್ಣ ಬದಲಾವಣೆಯಾಗದೆ ಅಸ್ಪೃಶ್ಯತೆಯು ಮುಂದುವರೆದುಕೊಂಡು ಬಂದಿದೆ. ಈ ಮುಂದುವರಿಕೆಯ ಭಾಗವಾಗಿ ದಲಿತರು ಇಂದಿಗೂ ಅವಮಾನವನ್ನು ಅನುಭವಿಸುತ್ತಿದ್ದಾರೆ. ಇಂತಹ ಅವಮಾನಗಳಿಗೆ ತಮ್ಮ ಅಸಹಾಯಕ ಬದುಕಿನೊಳಗೂ ಪ್ರತಿತಂತ್ರ ಅಥವಾ ಪರ್ಯಾಯಗಳನ್ನು ಕಟ್ಟಿಕೊಳ್ಳುವ ಮೂಲಕ ಪ್ರತಿರೋಧ ತೋರುವ ಹಲವು ಸಂಗತಿಗಳು ಆತ್ಮಕಥೆಗಳಲ್ಲಿವೆ. ಈ ಕಾರಣಕ್ಕಾಗಿ ದಲಿತರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಅಧ್ಯಾಯ ಮಾಡಿಕೊಳ್ಳಲಾಗಿದೆ. ಈ ಅಸ್ಪೃಶ್ಯತೆಯನ್ನು ಇನ್ನಷ್ಟು ಸೂಕ್ಷ್ಮವಾಗಿ ಅವಲೋಕಿಸಿದಾಗ ನಾವಿಂದು ದಲಿತರು ಎಂದು ಕರೆಯುತ್ತಿರುವ ಸಮುದಾಯಗಳ ಒಳಗಡೆಯೇ ಸ್ಪೃಶ್ಯ, ಅಸ್ಪೃಶ್ಯ, ಎಡಗೈ, ಬಲಗೈ ಎಂಬ ಶ್ರೇಣೀಕರಣಗಳಿರುವುದು ಗೋಚರಿಸುತ್ತದೆ. ಇಂದು ಮೀಸಲಾತಿ ರಾಜಕಾರಣಕ್ಕೆ ಬಂದು ಸೇರಿರುವ ಕೆಲವು ಸಮುದಾಯಗಳು ದಲಿತರೊಳಗಡೆಯೇ ಹಲವು ತಾರತಮ್ಯಗಳುಂಟಾಗಲು ಕಾರಣವಾಗಿವೆ. ಈ ಬೆಳವಣಿಗೆಗೆ ಕನ್ನಡದ ಅನೇಕ ಆತ್ಮಕಥೆಗಳು ಸಾಕ್ಷಿಯಾಗಿವೆ. ಇವು ದಲಿತ ಒಳ ಜಾತಿಗಳಲ್ಲೇ ಕಾಣುವ ತರತಮಗಳಾಗಿವೆ. ಈ ಜಾತಿ ವ್ಯವಸ್ಥೆಯಲ್ಲಿ ಒಂದು ಸಮುದಾಯ ಮತ್ತೊಂದು ಸಮುದಾಯದಿಂದ ಶೋಷಣೆಗೆ ಒಳಗಾಗುತ್ತಿದ್ದರೂ, ತಾವು ಕೂಡ ಮತ್ತೊಂದು ಸಮುದಾಯವನ್ನು ಶೋಷಣೆ ಮಾಡುತ್ತಿದ್ದೇವಲ್ಲ ಎಂಬ ಸಮಾಧಾನದಿಂದ ಜಾತೀಯತೆಯನ್ನು ಮುಂದುವರಿಸಿಕೊಂಡು ಬರುವಂತಾಗಿದೆ. ಈ ಜಾತಿ ವ್ಯವಸ್ಥೆಯನ್ನು ಸಾಕ್ಷಾತ್ ದೇವರೆ ನಿರ್ಮಿಸಿದ್ದಾನೆ ಎಂದು ನಂಬಿಸಿ ಮತ್ತು ಜನರೇ ಅದನ್ನು ಒಪ್ಪಿ ನಡೆಯುವಂತಾಗಿದೆ. ಹೀಗೆ ದಲಿತ ಒಳ

ಪಂಗಡಗಳಲ್ಲಿಯೂ ತಾರತಮ್ಯವನ್ನುಂಟು ಮಾಡುವ ಗುಣ ಅಂತಸ್ತವಾಗಿರುವ ಕಾರಣ ದಲಿತ ಒಳ ಪಂಗಡಗಳಲ್ಲಿ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಉಪ ಅಧ್ಯಾಯ ಮಾಡಿಕೊಳ್ಳಲಾಗಿದೆ. ಮಹಿಳೆಯರು ಮತ್ತು ದಲಿತರಿಗೆ ಅವಮಾನ ಏಕಮುಖವಾಗಿರದೆ ಬಹುತ್ವದಿಂದ ಕೂಡಿರುತ್ತದೆ. ಮಹಿಳೆಯರು ಜಾತಿ ಮತ್ತು ಲಿಂಗದ ಕಾರಣಗಳಿಗಾಗಿ ಅವಮಾನ ಅನುಭವಿಸುತ್ತಾರೆ. ಈ ಕಾರಣಕ್ಕಾಗಿ ಮಹಿಳೆಯರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಉಪ ಅಧ್ಯಾಯ ಮಾಡಿಕೊಳ್ಳಲಾಗಿದೆ. ಅಲೆಮಾರಿ ಸಮುದಾಯದ ಹಿನ್ನೆಲೆ ಇರುವ ಕನ್ನಡದ ಮೊದಲ ಆತ್ಮಕಥೆ 'ಗೊಂದಲಿಗ್ಯಾ' ತನ್ನೊಡಲೊಳಗೆ ಹಲವು ಸ್ತರದ ಅವಮಾನ ಮತ್ತು ಪ್ರತಿರೋಧದ ಸಂಗತಿಗಳನ್ನು ಹಿಡಿದಿಟ್ಟುಕೊಂಡಿದೆ. ಒಂದೆಡೆ ನೆಲೆ ನಿಲ್ಲದೆ ಸದಾ ಶೋಷಣೆಗೊಳಗಾಗುತ್ತಿರುವ ಕಾರಣ ಅಲೆಮಾರಿ ಸಮುದಾಯಗಳಲ್ಲಿ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಅಧ್ಯಾಯ ಮಾಡಿಕೊಳ್ಳಲಾಗಿದೆ. ಈ ಬಗೆಯ ಅವಮಾನ ಮತ್ತು ಪ್ರತಿರೋಧಗಳು ಆತ್ಮಕಥೆಗಳಲ್ಲಿವೆ.

ಅಧ್ಯಾಯಗಳಿಗೆ ಸಂಬಂಧಿಸಿದಂತೆ ಆತ್ಮಕಥನಕಾರರು ವೈಯಕ್ತಿಕ ಜಾತಿಗಳನ್ನು ಇಟ್ಟುಕೊಂಡು ಚರ್ಚೆ ಮಾಡುವುದು ಅಧ್ಯಯನದ ಚೌಕಟ್ಟಿಗಾಗಲಿ ಅಥವಾ ವಿಷಯ ವಿಶ್ಲೇಷಣೆಗಾಗಲಿ ಸೂಕ್ತವಾಗುವುದಿಲ್ಲ ಅದು ಕೇವಲ ಆತ್ಮಕಥನಕಾರ ಜಾತಿಗೆ ಸೀಮಿತವಾಗುವ ಕಾರಣ ಮೇಲ್ಕಂಡ ವಿಭಾಗೀಕರಣವು ಸೂಕ್ತವಾಗಿದೆ. ಇದರ ಜೊತೆಗೆ ಜಾತಿಯು ಒಂದು ವ್ಯವಸ್ಥೆಯಾದ ಕಾರಣ ಅದು ಉಳಿದೆಲ್ಲ ಜಾತಿಗಳೊಂದಿಗೆ ಸಂಬಂಧ ಹೊಂದಿದ್ದು, ಅದನ್ನು ಏಕಮುಖವಾಗಿ ಗ್ರಹಿಸುವುದಕ್ಕಿಂತ ಅದರ ಬಹುಮುಖತೆಗಳನ್ನು ಗುರುತಿಸುವುದಕ್ಕೆ ಮೇಲಿನ ವಿಭಾಗ ಕ್ರಮದಿಂದ ಸಾಧ್ಯವಾಗುತ್ತದೆ. ಜಾತಿ ಶ್ರೇಣೀಕರಣದ ಆಧಾರದ ಮೇಲೆ ವಿಭಾಗ ಕ್ರಮ ಮಾಡಿಕೊಳ್ಳುವುದರಿಂದ ಅವಮಾನ ಮತ್ತು ಪ್ರತಿರೋಧಗಳ ಭಿನ್ನ ಭಿನ್ನ ನೆಲೆಗಳನ್ನು ಗುರುತಿಸಬಹುದಾಗಿದೆ. ಆತ್ಮಕಥೆಗಳ ನಿರೂಪಣೆ ಕೂಡ ಏಕರೂಪಿಯಾಗಿರುವುದಿಲ್ಲ. ಪ್ರಸ್ತುತ ಅಧ್ಯಯನ ಕ್ರಮದಲ್ಲಿ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ನಿರೂಪಣೆಗೊಂಡಿರುವ ವಿವಿಧ ಮಾದರಿಗಳನ್ನು ಚರ್ಚಿಸಲಾಗುತ್ತದೆ. ಜಾತಿ ವ್ಯವಸ್ಥೆಯು ದೇಶದ ಅಭಿವೃದ್ಧಿಗೆ ಮಾರಕವಾಗಿದ್ದು, ಜಾತೀಯತೆಯು ಹೇಗೆ ಅವಮಾನ ಮತ್ತು ಪ್ರತಿರೋಧಗಳಿಗೆ ಕಾರಣವಾಗುತ್ತದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

### ೪.೧. ದಲಿತ ಒಳ ಪಂಗಡಗಳಲ್ಲಿ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

ಬಹು ಸಂಸ್ಕೃತಿ ಮತ್ತು ಬಹು ತರತಮಗಳು ವಾಸ್ತವ ಸಮಾಜದ ಲಕ್ಷಣಗಳಾಗಿವೆ. ಇವು ಸವರ್ಣೀಯರೆಂದು ಕರೆಯಲಾಗುವ ಸಮುದಾಯಗಳಿಂದ ಹಿಡಿದು ತಳಸಮುದಾಯಗಳೆಂದು ನಂಬಿಸಿರುವ ಸಮುದಾಯಗಳವರೆಗೂ ಮುಂದುವರೆದುಕೊಂಡು ಬಂದಿದೆ. ಈ ಕಾರಣಕ್ಕಾಗಿ

ದಲಿತ ಒಳ ಪಂಗಡಗಳಲ್ಲೂ ಜಾತಿ ಶ್ರೇಣೀಕರಣವಿದ್ದು, ಇಂದು ಮೀಸಲಾತಿಯ ರಾಜಕಾರಣಕ್ಕೆ ದಲಿತ ಪಟ್ಟಿಗೆ ಸೇರಿರುವಂತಹ ಸ್ಪೃಶ್ಯ ಸಮುದಾಯಗಳು ಅಸ್ಪೃಶ್ಯ ಸಮುದಾಯಗಳನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಹುತೇಕ ಶೋಷಿಸುತ್ತಿದ್ದೂ, ಇದು ಸಾಮಾಜಿಕ ನ್ಯಾಯಕ್ಕೆ ಒಂದು ಯಕ್ಷ ಪ್ರಶ್ನೆಯಾಗಿದೆ. ಹೀಗೆ ಶೋಷಣೆಯನ್ನು ಅನುಭವಿಸುವಂತಹ ಅಂಚಿನ ಸಮುದಾಯಗಳು ಇದೇ ಜಾತಿ ಕಾರಣಕ್ಕೆ ಅವಮಾನ ಅನುಭವಿಸುವಂತಹ ಪರಿಸ್ಥಿತಿಗಳು ಕನ್ನಡ ಆತ್ಮಕಥೆಗಳಲ್ಲಿವೆ. ಇಂತಹ ಅನೇಕ ಉದಾಹರಣೆಗೆ ಆತ್ಮಕಥೆಗಳು ಸಾಕ್ಷಿಯಾಗಿದ್ದು, ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

೪.೧.೧. ಎಡಗೈ-ಬಲಗೈ ತಾರತಮ್ಯ: ದೇಹದಲ್ಲಿ ಎಡಗೈ ಮತ್ತು ಬಲಗೈಗಳ ನಡುವೆ ಅವುಗಳು ಮಾಡುವ ಕೆಲಸಗಳ ಆಧಾರದ ಮೇಲೆ ಶ್ರೇಣೀಕರಣಗಳಿವೆ. ಅದರಂತೆ ಎಡಗೈ ಎಂದು ಕರೆಯಲಾಗುವ ಮಾದಿಗ ಸಮುದಾಯ ಮತ್ತು ಬಲಗೈ ಎಂದು ಕರೆಯಲಾಗುವ ಹೊಲೆಯ ಸಮುದಾಯಗಳ ನಡುವೆ ತರತಮಗಳಿರುವುದನ್ನು ಕಾಣಬಹುದಾಗಿದೆ. ತುಂಬಾಡಿ ರಾಮಯ್ಯನವರ 'ಮಣೆಗಾರ'ದಲ್ಲಿನ ಈ ಕೆಳಗಿನ ವಿವರಗಳು ದಲಿತರಲ್ಲಿರುವ ಒಳಜಾತಿ ಶ್ರೇಣೀಕರಣಗಳನ್ನು ಹೇಳುತ್ತವೆ. "ನಮ್ಮೊಂದಿಗಿನ ಹೊಲೆಯರ ನಡವಳಿಕೆ ಇನ್ನೂ ವಿಚಿತ್ರವಾಗಿತ್ತು. ನಮ್ಮ ಹಳ್ಳಿಯಲ್ಲಿ ಮಣೆಗಾರರಿಗೆ ಒಂದು ಬಾವಿ, ಹೊಲೆಯರಿಗೇ ಒಂದು ಬಾವಿ ಇತ್ತು. ಅವರ ಬಾವಿಯಲ್ಲಿ ನಾವಾಗಲಿ ಅಥವಾ ನಮ್ಮ ಬಾವಿಯಲ್ಲಿ ಹೊಲೆಯರಾಗಲಿ ಎಂದೂ ನೀರು ಸೇದುವಂತಿರಲಿಲ್ಲ. ಹೊಲೆಯರ ಹೆಂಗಸರು ನಮ್ಮ ಹಟ್ಟಿಗೆ ಕೂಲಿಯಾಳುಗಳನ್ನು ಕರೆಯಲು ಬಂದಾಗ ಕೆಂಡದ ಮೇಲೆ ನಡೆದು ಬರುವಂತೆ ಬಂದು ಹೋಗುತ್ತಿದ್ದರು. ತಮ್ಮ ಹಟ್ಟಿಗೆ ಹೋದ ಕೂಡಲೆ ಸಗಣಿ-ಗಂಜಲ ತುಳಿದು ತಮ್ಮ ಕಾಲನ್ನು ಪಾವನವಾಗಿಸಿಕೊಳ್ಳುತ್ತಿದ್ದರು"[೧] ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಈ ಸಾಲುಗಳು ದಲಿತರೊಳಗಡೆಯೇ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನಗಳಿಗೆ ಉದಾಹರಣೆಯಾಗಿವೆ. ತಳಸಮುದಾಯವೊಂದು 'ಮೇಲ್ಜಾತಿ'ಗಳಿಂದ ಶೋಷಣೆಗೆ ಒಳಪಡುತ್ತಿದ್ದರೂ, ತಾವು ಕೂಡ ಮತ್ತೊಂದು ತಳಸಮುದಾಯವನ್ನು ಶೋಷಿಸುವುದು ಲೇಖಕರಿಗೆ ವಿಚಿತ್ರವಾಗಿ ಕಂಡಿದೆ. ಪ್ರತ್ಯೇಕ ಬಾವಿ, ನಡವಳಿಕೆ, ಕೆಂಡ, ಸಗಣಿ, ಗಂಜಲದಿಂದ ಪಾವನಗೊಳಿಸಿಕೊಳ್ಳುವ ವಿವರಗಳು ತಳಸಮುದಾಯಗಳಲ್ಲಿರುವ ಸಾಮಾಜಿಕ ತರಮವನ್ನು ಸೂಚಿಸಿದರೆ, ಹೊಲೆಯರು ಮಾದಿಗರಟ್ಟಿಗೆ ಕೂಲಿಯಾಳುಗಳನ್ನು ಹುಡುಕಿಕೊಂಡು ಬರುವುದು ಇವೆರಡೂ ಸಮುದಾಯಗಳೊಳಗಿನ ಆರ್ಥಿಕ ತರತಮವನ್ನು ಸೂಚಿಸುತ್ತದೆ. ಹೀಗೆ ಅಸ್ಪೃಶ್ಯರೊಳಗೆ ಕಾಣುವ ಸಾಮಾಜಿಕ ಮತ್ತು ಆರ್ಥಿಕ ಅಪಮಾನಗಳನ್ನು ಆತ್ಮಕಥೆಯೂ ಕಾಣಿಸುತ್ತದೆ.

೪.೧.೨. ಗೆಳೆತನ ಮತ್ತು ಅವಮಾನ: ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಎರಡು ವಿಚಿತ್ರ ಗುಣಗಳಿವೆ. ಹಣ ಮಡಿವಂತಿಕೆಯ ವ್ಯಾಪ್ತಿಗೆ ಬರದಿರುವುದು ಮೊದಲನೆಯ ಗುಣ. ಅದೇ

ಹಣವನ್ನು ಬಳಸುವ ಮನುಷ್ಯನಿಂದ ಮಾತ್ರ ಮೈಲಿಗೆ ಹೆಸರಲ್ಲಿ ಅಂತರ ಕಾಯ್ದುಕೊಳ್ಳುವುದು ಎರಡನೆಯ ಗುಣವಾಗಿದೆ. 'ಸಂಬೋಳಿ'ಯಲ್ಲಿ ಆತ್ಮಕಥನಕಾರರಾದ ಲಕ್ಷ್ಮಣ್‌ರವರು ಜಾತಿ ಕಾರಣಕ್ಕಾಗಿ ತನ್ನ ಗೆಳೆಯನಿಂದಲೇ ಅವಮಾನಕ್ಕೆ ಒಳಗಾಗುವಂತಹ ಸನ್ನಿವೇಶವನ್ನು ಇಲ್ಲಿ ಗುರುತಿಸಬಹುದು. ಲಕ್ಷ್ಮಣ್ ಅವರಿಂದ ಆರ್ಥಿಕ ಸಹಾಯ ಪಡೆದಂತಹ ಕೊರಮ ಸಮುದಾಯದ ಆಂಜಿನಪ್ಪ ಲೇಖಕರನ್ನು ತನ್ನ ಮನೆಗೆ ಕರೆದುಕೊಂಡು ಹೋದ ಸಂದರ್ಭದಲ್ಲಿ ಹೆಂಡತಿಗೆ ಊಟವನ್ನು ಆ ನಂತರ ಬಂದು ಮಾಡುವುದಾಗಿ ಹೇಳುತ್ತಾನೆ. ಅದಕ್ಕೆ ಕಾರಣ ಕೇಳಿದಾಗ "ಅಯ್ಯೋ ಹೊರಗೆ ಕೂತಿರುವವನು ಮಾದಿಗ್ರವನೋ! ಅವ ಹೋದ ಮೇಲೆ ಬಂದ ಊಟ ಮಾಡ್ತೀನಿ"[೨] ಎಂದು ಅವಮಾನಿಸುತ್ತಾನೆ. ಇಲ್ಲಿ ಕಷ್ಟಕ್ಕೆ ಹಣದ ಸಹಾಯ ಕೇಳುವ ಹಾಗೂ ತಾನು ತಳಸಮುದಾಯದವನಾಗಿದ್ದರೂ ಲೇಖಕರನ್ನು ಜಾತಿಸೂಚಕವಾಗಿ ನಿಂದಿಸುವ ಆಂಜಿನಪ್ಪನ ಇಬ್ಬಗೆ ಧೋರಣೆಯನ್ನು ಲೇಖಕರು ವಿಷಾದದ ಧ್ವನಿಯಲ್ಲಿ ಅಭಿವ್ಯಕ್ತಿಸುತ್ತಾರೆ. ಹೀಗೆ ದಲಿತ ಒಳಪಂಗಡಗಳಲ್ಲಿಯೇ ಜಾತಿ ಸೂಚಕವಾಗಿ ಅಪಮಾನಿಸುವ ಗುಣಗಳಿರುವುದನ್ನು ಆತ್ಮಕಥೆಯೂ ಧ್ವನಿಸುತ್ತದೆ.

೪.೧.೩. ಬಿ.ಟಿ ಲಲಿತಾ ನಾಯಕ್ ಅವರು 'ಲೇಖಲೋಕ'ದಲ್ಲಿ ಹೀಗೆ ಬರೆದುಕೊಳ್ಳುತ್ತಾರೆ: "ನಮ್ಮ ತಾಂಡಾಕ್ಕೆ ಸಮೀಪದಲ್ಲಿ ಕುಕ್ಕೆಕೊರಮರ ಹಟ್ಟಿ ಹಾಗೂ ಮಾದಿಗರ ಹಟ್ಟಿಗಳಿದ್ದವು. ಈ ಹಟ್ಟಿ ಹಾಗೂ ತಾಂಡಾ ನಿವಾಸಿಗಳು ತಮ್ಮ ತಮ್ಮಲ್ಲಿಯ ಜಾತಿ ಪ್ರಭೇದವನ್ನು ತಾವೇ ಗುರುತಿಸಿಕೊಂಡು ಅದಕ್ಕೆ ಸಂಪೂರ್ಣವಾಗಿ ಬದ್ಧರಾಗಿರುತ್ತಿದ್ದರು. ತಮಗಿಂತ ಮೇಲಿನವರು ಎಂದು ಕೆಲವರನ್ನು ಗೌರವಿಸುವುದು ಕೆಳಗಿನವರು ಎಂದು ಹೀನಾಯಿಸುವುದು ಅವರುಗಳ ಮೂಲಭೂತ ನೀತಿಯಾಗಿತ್ತು"[೩] ಎಂದು ಬರೆದುಕೊಳ್ಳುವ ವಿವರಗಳಿವೆ. ಈ ವಿವರಗಳಲ್ಲಿ ಲಂಬಾಣಿ, ಕೊರಮ, ಮಾದಿಗ ಮೂರು ಜಾತಿಗಳಿದ್ದರೂ, ಕ್ರಮವಾಗಿ ಅವುಗಳೊಳಗೆ ಶ್ರೇಣೀಕರಣಗಳಿರುವುದನ್ನು ಲೇಖಕರು ಮಂಡಿಸಿದ್ದಾರೆ. ಆದರೆ ಲೇಖಕರೇ ಹೇಳುವಂತೆ ಮೇಲಿನವರು ಯಾರಾಗಿದ್ದರು ಮತ್ತು ಕೆಳಗಿನವರು ಯಾರಾಗಿದ್ದರೂ, ಯಾವ ಸಮುದಾಯ ಯಾರನ್ನು ಶೋಷಿಸುತ್ತಿತ್ತು ಎನ್ನುವುದನ್ನು ಅಸ್ಪಷ್ಟಗೊಳಿಸಿರುವುದು ಕಾಣುತ್ತದೆ. ಮೇಲೆ ಉಲ್ಲೇಖಗೊಂಡ ಲಂಬಾಣಿ, ಕೊರಮ, ಮಾದಿಗ ಸಮುದಾಯಗಳು ಸರ್ಕಾರಿ ದಾಖಲೆಗಳ ಪ್ರಕಾರ ದಲಿತ ಪಟ್ಟಿಯಲ್ಲಿದ್ದರು ಅವುಗಳೊಳಗೆ ಸ್ಪೃಶ್ಯ, ಅಸ್ಪೃಶ್ಯತೆ ಇರುವುದನ್ನು ನೇರವಾಗಿ ಅಲ್ಲದಿದ್ದರೂ, ಪರೋಕ್ಷವಾಗಿಯಾದರು ಆತ್ಮಕಥನಾತ್ಮಕ ಬರೆಹ ಕಾಣಿಸುತ್ತಿದೆ.

೪.೧.೪. ಒಳಪಂಗಡಗಳ ಅಸಹಿಷ್ಣುತೆಗಳು: ದಲಿತರೊಳಗಿನ ಕೆಲವು ಅಸಹಿಷ್ಣುತೆಗಳು ದಲಿತರೊಳಗೆ ಹಲವು ಶೋಷಣೆಗಳಿಗೆ ಕಾರಣಗಳಾಗುತ್ತವೆ. 'ಮಾತಂಗಿ ದೀವಟಿಗೆ'ಯ ಈ ಸನ್ನಿವೇಶವನ್ನು ಗಮನಿಸಬಹುದು. ಸಮತಾ ದೇಶಮಾನೆಯವರು ಹಾಸ್ಟೆಲ್‌ನ ಸಮಾರಂಭಕ್ಕೆ ಜಗಜೀವನ್ ರಾಮ್ ಮತ್ತು ಅಂಬೇಡ್ಕರ್ ಅವರ ಭಾವಚಿತ್ರವನ್ನು ಕೊಡುತ್ತಾರೆ. ಜಗಜೀವನ್ ರಾಮ್ ಅವರ ಫೋಟೊ

ಹಾಕಿದ ತಕ್ಷಣ ಅಲ್ಲಿಯವರೆಗೂ ತಮ್ಮವಳೆಂದು ಭಾವಿಸಿದ್ದ ಹಲವು ದಲಿತ ಸಮುದಾಯಗಳು ಲೇಖಕಿಯು ಮಾತಂಗಿ ಸಮುದಾಯಕ್ಕೆ ಸೇರಿದವಳೆಂದು ಬೆದರಿಕೆ ಹಾಕುವ ಹಾಗೂ ಒಂದು ವರ್ಷದ ಫೆಲೋಶಿಪ್‌ನ್ನು ಕೊಡದೆ, ಮಾನಸಿಕವಾಗಿ ನಿಂದಿಸುವ ಪ್ರಸಂಗ ನಡೆಯುತ್ತದೆ. ಇಲ್ಲಿ ವ್ಯಕ್ತಿಗಿಂತ ಪಂಗಡವೇ ಮುಖ್ಯವಾಗಿದ್ದು, ಅಕ್ಷರಸ್ಥರ ಒಳಗಡೆಯೇ ತರತಮ ನಡೆದಿದೆ. ಸಾಂಸ್ಕೃತಿಕ ನಾಯಕರನ್ನು ಸಮುದಾಯಾಧಾರಿತವಾಗಿ ಸೀಮಿತಗೊಳಿಸುವ, ಆ ಮೂಲಕ ಸಮುದಾಯಗಳ ನಡುವೆ ಪರಕೀಯತೆಯನ್ನುಂಟು ಮಾಡುವ ಅಪಾಯಗಳ ಕುರಿತು ಲೇಖಕರಲ್ಲಿ ಭೀತಿ ಇರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಶೋಷಿತರೇ, ಶೋಷಕರಾಗುವ ವೈರುಧ್ಯವನ್ನಿಲ್ಲಿ ಗಮನಿಸಬಹುದಾಗಿದ್ದು, ಈ ಕಾರಣಕ್ಕಾಗಿಯೇ ಸಮತಾ ಅವರು ಅವಮಾನಗಳಿಗೆ ಒಳಗಾಗಿರುವುದನ್ನು ಅವರ ಬರೆಹ ಪ್ರದರ್ಶಿಸುತ್ತದೆ. 

೪.೧.೫. ದಕ್ಕಲರಿಗೆ ಆಗುವಂತಹ ಅವಮಾನ: ತಳಸಮುದಾಯಗಳು ಹೊಂದಿರಬಹುದಾದ ಶ್ರೇಣೀಕರಣಗಳು ಅತ್ಯಂತ ಸೂಕ್ಷ್ಮವಾದ ನೆಲೆಗಳಲ್ಲಿವೆ. ಇದಕ್ಕೆ ಪೂರಕವಾಗಿ ತುಂಬಾಡಿ ರಾಮಯ್ಯನವರ 'ಮಣೆಗಾರ' ಆತ್ಮಕಥೆಯಲ್ಲಿ ದಲಿತರಲ್ಲೆ ಎಡಗೈ ಎಂದು ಕರೆಯಲಾಗುವ ಸಮುದಾಯವು ತನ್ನದೆ ಉಪ ಜಾತಿಯಾದ ದಕ್ಕಲರನ್ನು ಹಟ್ಟಿಯ ಒಳಗಡೆಯೆ ಬಿಟ್ಟು ಕೊಳ್ಳದೆ, ದಕ್ಕಲರು ಹಟ್ಟಿಯ ಹೊರಗಡೆ ನಿಂತು ಹಿಟ್ರಪ್ಪೋ ಎಂದು ಕೂಗಿದಾಗ ಮಾತ್ರ ಅವರಿಗೆ ಆಹಾರವನ್ನು ನೀಡುವಂತಹ ಪರಿಸ್ಥಿತಿಯ ಉಲ್ಲೇಖವಿದೆ. ಇಲ್ಲಿ ತಮ್ಮದೇ ಉಪ ಪಂಗಡವಾದ ದಕ್ಕಲಿಗರನ್ನು ಮಾದಿಗ ಸಮುದಾಯವು ಶೋಷಿಸುವುದು ಕಂಡುಬರುತ್ತದೆ. ಈ ಸನ್ನಿವೇಶವು ಅಸ್ಪೃಶ್ಯರ ಒಳಗಡೆಯೇ ಇರುವ ಅಂತರಗಳನ್ನು ಸ್ಪಷ್ಟಪಡಿಸುತ್ತದೆ. ಒಟ್ಟಾರೆ ಮೇಲಿನ ಎಲ್ಲಾ ಘಟನೆಗಳಲ್ಲಿರುವ ಜಾತಿ ಶ್ರೇಣೀಕರಣಗಳು, ಅವಮಾನಗಳ ಶ್ರೇಣೀಕರಣಗಳೂ ಆಗಿವೆ. ಹಾಗಾಗಿ ಇಲ್ಲಿ ಉಲ್ಲೇಖಗೊಂಡಿರುವ ಸಮುದಾಯಗಳು ದಲಿತ ಪಟ್ಟಿಯಲ್ಲಿದ್ದರೂ, ಅವು ಒಂದಕ್ಕೊಂದು ಶೋಷಿಸಿಕೊಳ್ಳುತ್ತಿವೆ. ಹೀಗೆ ತಳಸಮುದಾಯಗಳು ಶೋಷಿಸಿಕೊಳ್ಳುತ್ತಿರುವುದು ಬ್ರಾಹ್ಮಣ್ಯ ಮನಸ್ಥಿತಿಯ ಫಲವಾಗಿದ್ದೂ, ಜಾತಿ ಅಸಹಿಷ್ಣುತೆಗೆ ಕಾರಣವಾಗಿರುವುದನ್ನು ಆತ್ಮಕಥೆಗಳು ಚಿತ್ರಿಸುತ್ತವೆ.

೪.೧.೬. ದಿಟ್ಟತನದ ಪ್ರತಿರೋಧ: ತಳಸಮುದಾಯಗಳೊಳಗೆ ಅಪಮಾನಿಸುವ ಗುಣವಿರುವಂತೆ, ತೀವ್ರವಾಗಿ ಪ್ರತಿರೋಧಿಸುವ ಸಂಗತಿಗಳಿರುವುದನ್ನು ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ. 'ಮಾತಂಗಿ ದೀವಟಿಗೆ'ಯಲ್ಲಿ ಸಮತಾ ದೇಶಮಾನೆಯವರು ಹಾಸ್ಟೆಲ್‌ನ ಸಮಾರಂಭಕ್ಕೆ ಅಂಬೇಡ್ಕರ್ ಅವರ ಭಾವಚಿತ್ರದ ಜೊತೆಗೆ ಜಗಜೀವನ್ ರಾಮ್ ಅವರ ಪೋಟೊ ಹಾಕಿದ ತಕ್ಷಣ ಅಲ್ಲಿಯವರೆಗೂ ತಮ್ಮವಳೆಂದು ಭಾವಿಸಿದ್ದ ಬಲಗೈ ಸಮುದಾಯದ ಕೆಲವರು; ಲೇಖಕಿಯು ನಮ್ಮವಳಲ್ಲವೆಂದು ಬೆದರಿಕೆ ಹಾಕಿ ಹಾಗೂ ಒಂದು ವರೆ ವರ್ಷದ ಫೆಲೋಶಿಪ್‌ನ್ನು ಕೊಡದೆ ಮಾನಸಿಕವಾಗಿ ನಿಂದಿಸುತ್ತಾರೆ. ಆಗ ಸಮತಾ ಅವರು ಹೀಗೆ ಪ್ರತಿರೋಧ ತೋರಿಸುತ್ತಾರೆ. "ಮಾರನೇಯ ದಿನವೇ

ಉನ್ನತ ಶಿಕ್ಷಣ ಸಚಿವರೊಂದಿಗೆ ನೇರವಾಗಿ ದೂರವಾಣಿಯಲ್ಲಿ ಮಾತನಾಡಿದೆ ನನಗೆ ತೊಂದರೆ ನೀಡಿದ್ದ, ಎಸ್.ಸಿ/ಎಸ್.ಟಿ ಸೆಲ್‌ನ ಸ್ಪೆಷಲ್ ಆಫೀಸರ್ ಕೂಡ ಅಲ್ಲಿಗೆ ಸರಕಾರದ ಸೂಚನೆಯಂತೆ ಬಂದಿದ್ದ. ಆಗ ಮಂತ್ರಿಯವರು 'ಕೇವಲ ೨೪ ಗಂಟೆಯಲ್ಲಿ ಅವರ ಶಿಷ್ಯವೇತನ ಮಂಜೂರು ಮಾಡಬೇಕು' ಎಂದು ಆದೇಶ ಮಾಡಿದರು. ಆ ವ್ಯಕ್ತಿ ನನಗೆ ಕ್ಷಮೆ ಕೇಳಿದನು. ಆಗ ನಾನು ನಾನು ನೋ ಲೆಫ್ಟ್, ನೋ ರೈಟ್ ಯಾವಾಗಲು ಫ್ರೆಂಟ್ ಅಂದೇ"[೪] ಎಂದು ದಾಖಲಿಸುತ್ತಾರೆ. ಅಸ್ಪೃಶ್ಯರ ಸಾಮಾಜಿಕ, ಶೈಕ್ಷಣಿಕ ಸಂಘರ್ಷ ಕೇವಲ ಮೇಲ್ಜಾತಿಗಳ ಜೊತೆಗೆ ಅಷ್ಟೇ ಅಲ್ಲದೆ, ತಮ್ಮಂತೆಯೇ ಇರುವ ತಳಸಮುದಾಯದ ಜೊತೆಗೂ ನಡೆದಿರುವಂತಹದ್ದಾಗಿದೆ. ಉನ್ನತ ಶಿಕ್ಷಣ ಸಚಿವರೊಂದಿಗಿನ ಸಮತಾ ಅವರ ನೇರ ಮಾತು ಲೇಖಕಿಯ ಆತ್ಮವಿಶ್ವಾಸವನ್ನಷ್ಟೇ ಸೂಚಿಸದೇ, ತನ್ನ ಹಕ್ಕನ್ನು ಸಮರ್ಥಿಸುವಂತಿದೆ. ಹೀಗಾಗಿ ಶೋಷಕ ತನ್ನ ತಪ್ಪನ್ನು ಒಪ್ಪುವ ಮತ್ತು ಶಿಷ್ಯವೇತನ ಮಂಜೂರು ಮಾಡುವುದು ಕಂಡುಬರುತ್ತದೆ. ಸಮುದಾಯಗಳ ಒಳಗಿರುವ ಅಸಹಿಷ್ಣುತೆಗಳನ್ನು ಲೇಖಕಿಯು ಆತ್ಮವಿಶ್ವಾಸದ ಮೂಲಕ ಪ್ರತಿರೋಧಿಸುವ ಸಂಗತಿಯು ಪ್ರಸ್ತುತ ಆತ್ಮಕಥೆಯಲ್ಲಿ ವ್ಯಕ್ತವಾಗಿದ್ದು, ಅಪಮಾನಗಳಿಗೆ ತೋರಿದ ಪ್ರತಿರೋಧವಾಗಿದೆ.

**೪.೧.೭.** ನಿರಾಕರಣೆ ಮತ್ತು ಪ್ರತಿರೋಧ: ಶಿಕ್ಷಣ ಮತ್ತು ವೈಚಾರಿಕ ಅರಿವಿನ ಕಾರಣ ಆತ್ಮಕಥನಕಾರರು ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ತರುವ ಸಂಗತಿಗಳನ್ನು ನಿರಾಕರಣೆ ಮಾಡುವುದು ಆತ್ಮಕಥೆಗಳಲ್ಲಿ ವ್ಯಕ್ತಗೊಂಡಿವೆ. ಈ ನಿರಾಕರಣೆಯೂ ಕೂಡ ಪ್ರತಿರೋಧದ ಭಾಗವೇ ಆಗಿದೆ. 'ಸಂಬೋಳಿ' ಆತ್ಮಕಥೆಯಲ್ಲಿ ಲಕ್ಷ್ಮಣ್ ಅವರು ತಮ್ಮ ಗೆಳೆಯನಿಂದಲೇ ಜಾತಿ ಕಾರಣಕ್ಕಾಗಿ ಅವಮಾನಕ್ಕೆ ಒಳಗಾದಾಗ ತನ್ನ ಸ್ವಾಭಿಮಾನಕ್ಕೆ ಧಕ್ಕೆ ತಂದ 'ಸುಳ್ಳು' ಸ್ನೇಹದಿಂದ ಅಂತರ ಕಾಯ್ದುಕೊಳ್ಳುತ್ತಾರೆ. ಈ ಅಂತರವು ಆತ್ಮಕಥನಕಾರ ತನ್ನ ಅಸಹಾಯಕತೆಯ ನಡುವೆಯು ತೋರಿದಂತಹ ಪ್ರತಿರೋಧಕ್ಕೆ ಉದಾಹರಣೆಯಾಗಿದೆ. ಜಾತಿ ಶ್ರೇಣೀಕರಣದ ಈ ಪರಿಣಾಮಗಳಿಂದ ಅಂಚಿನ ಸಮುದಾಯಗಳೊಳಗೂ ಅವಮಾನ ಮತ್ತು ಪ್ರತಿರೋಧಗಳು ಪ್ರಕಟವಾಗುವುದನ್ನು ಆತ್ಮಕಥೆಗಳು ನಿದರ್ಶಿಸುತ್ತವೆ.

**೪.೧.೮.** ಬೈಗುಳ ಮತ್ತು ಪ್ರತಿರೋಧ: 'ಮಣೆಗಾರ' ಆತ್ಮಕಥೆಯಲ್ಲಿ ಮಾದಿಗರ ಹಟ್ಟಿಯ ಒಳಗೆ ಬರದ ದಕ್ಕಲರಿಗೆ ಹಿಟ್ಟನ್ನೋ, ಸಾರನ್ನೋ ತಕ್ಷಣ ಕೊಡದಿದ್ದರೆ, ದಕ್ಕಲಿಗರು ಎಲ್ಲರನ್ನೂ ಜೋರಾಗಿ ಬಯ್ಯಲು ತೊಡುಗುತ್ತಿದ್ದರ ಉಲ್ಲೇಖವಿದೆ. ಇಲ್ಲಿ ಬೈಗುಳ ಕೂಡ ದಕ್ಕಲಿಗರು ತಮ್ಮ ಅಸಹಾಯಕತೆಯಲ್ಲಿ ಸಮುದಾಯದ ಅಗತ್ಯತೆಗಳನ್ನು ಈಡೇರಿಸಿಕೊಳ್ಳಲು ಕಂಡುಕೊಂಡಿರುವ ತಂತ್ರವಾಗಿದೆ. ಈ ತಂತ್ರವು ಪ್ರತಿರೋಧವೂ ಆಗಿದೆ. ತೃತೀಯ ಲಿಂಗಿಗಳು ತಟ್ಟುವ ಚಪ್ಪಾಳೆ, ತೋರುವ ಭಿನ್ನ ವರ್ತನೆಗಳು ಕೂಡ ಇದೇ ಮಾದರಿಯದ್ದು ಎಂದು ಹೇಳಬಹುದಾಗಿದೆ. ಹೀಗೆ ದಮನಿತ ಸಮುದಾಯಗಳು ಅಸಹಾಯಕತೆಯ ಕಾರಣಕ್ಕಾಗಿ ಅನುಸರಿಸುವ ತಂತ್ರಗಳು ಪ್ರತಿರೋಧದ ಸಾಂಕೇತಿಕವಾಗಿರುವುದನ್ನು ಆತ್ಮಕಥೆಯಲ್ಲಿ ಕಾಣಬಹುದಾಗಿದೆ.

**೪.೨. ಸವರ್ಣೀಯರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು**

ಸವರ್ಣೀಯ ಸಮುದಾಯಗಳು ಸಾಮಾಜಿಕವಾಗಿ ಉನ್ನತ ಸ್ಥಾನದಲ್ಲಿದ್ದರೂ ಸಹ ಬೇರೆ ಬೇರೆ ಕಾರಣಕ್ಕಾಗಿ ಅವಮಾನ ಅನುಭವಿಸುವಂತಹ ಸಂಗತಿಗಳಿವೆ. ಸಾಮಾಜಿಕವಾಗಿ 'ಉನ್ನತ' ಎಂದು ಕರೆಸಿಕೊಳ್ಳುವ ಸಲುವಾಗಿಯೇ ಮತ್ತೊಂದು ಸಮುದಾಯಗಳನ್ನು ಶೋಷಿಸುವ ಸವರ್ಣೀಯರ ಮನಸ್ಥಿತಿಯಿಂದ ನೊಂದ ಜಾಗೃತ ಶೋಷಿತರು ತಮ್ಮನ್ನು ಶೋಷಿಸಿದ ಸವರ್ಣೀಯರನ್ನು ಭಿನ್ನ ಮಾದರಿಗಳ ಮೂಲಕ ಅವಮಾನಿಸುವ ಸಾಧ್ಯತೆಗಳಿವೆ. ಇದರ ಜೊತೆಗೆ ಸ್ವಜಾತಿ ಮೋಹ ಕೂಡ ಮತ್ತೊಂದು ಸಮುದಾಯಗಳನ್ನು ಅವಮಾನಿಸಲಿಕ್ಕೆ ಕಾರಣವಾಗಿವೆ. ಸವರ್ಣೀಯರು ಮೇಲಿನ ಕಾರಣಗಳಿಗೆ ಅವಮಾನ ಅನುಭವಿಸುವ ಹಲವು ಸಂಗತಿಗಳು ಆತ್ಮಕಥೆಗಳಲ್ಲಿವೆ.

**೪.೨.೧.** ಸ್ವಜಾತಿ ಅಭಿಮಾನ ಮತ್ತು ಅವಮಾನ: ಸಾಮಾಜಿಕ ವ್ಯವಸ್ಥೆಯಲ್ಲಿ ಸ್ವಜಾತಿ ಮೋಹವು ಅನ್ಯ ಸಮುದಾಯದವರನ್ನು ಪರಕೀಯಗೊಳಿಸುತ್ತವೆ. 'ಭಿತ್ತಿ' ಆತ್ಮಕಥೆಯಲ್ಲಿ ಎಸ್.ಎಲ್. ಭೈರಪ್ಪನವರು ಸಾಮಾಜಿಕವಾಗಿ ಸವರ್ಣೀಯರಾದರೂ ಸಹ ಜಾತಿ ಕಾರಣಕ್ಕಾಗಿ ಅವಮಾನ ಅನುಭವಿಸುತ್ತಾರೆ. ಮೈಸೂರಿನ ಸಾರ್ವಜನಿಕ ಹಾಸ್ಟೆಲ್‌ನಲ್ಲಿ ಆಯೋಜಿಸಿದ್ದ ಚರ್ಚಾ ಕೂಟದಲ್ಲಿ ಭಾಗವಹಿಸಿ ಉತ್ತಮವಾಗಿ ಚರ್ಚಿಸಿದ್ದ, ಕೇಳುಗರು ಮೆಚ್ಚಿದ್ದ ಎಸ್.ಎಲ್.ಭೈರಪ್ಪ ಮತ್ತು ಗಂಗಾಧರಪ್ಪ ಅವರುಗಳಿಗೆ ಪ್ರಶಸ್ತಿಗೆ ಆಯ್ಕೆ ಮಾಡಿಲ್ಲದ ಪ್ರಕರಣವಿದೆ. ಜಾತೀಯತೆಯಂತೆಯೇ ಸ್ವಜಾತಿ ವ್ಯಾಮೋಹವು ಅತ್ಯಂತ ಅಪಾಯಕಾರಿಯಾಗಿದ್ದು, ಇದು ಇತರರನ್ನು ಪರಕೀಯತೆಗೊಳಿಸಿ ಅವಮಾನಿಸುತ್ತದೆ. ಎಸ್.ಎಲ್.ಭೈರಪ್ಪ ಮತ್ತು ಗಂಗಾಧರಪ್ಪ ಇಬ್ಬರೂ ಅನುಭವಿಸಿದ ನೋವು ಸ್ವಜಾತಿ ವ್ಯಾಮೋಹದ ಫಲವೇ ಆಗಿದ್ದು, ಇಂತಹ ಜಾತಿ ವ್ಯಾಮೋಹವನ್ನು ಲೇಖಕರು ಅಸಮಾಧಾನದಿಂದ ಅಭಿವ್ಯಕ್ತಿಸುತ್ತಾರೆ. ಹೀಗೆ ವ್ಯವಸ್ಥೆಯಲ್ಲಿನ ವಿವಿಧ ಬಗೆಯ ಅಪಮಾನಗಳನ್ನು 'ಭಿತ್ತಿ'ಯು ಓದುಗರ ಗಹನಕ್ಕೆ ತರುತ್ತದೆ.

**೪.೨.೨.** ಪದಕ ಮತ್ತು ಅವಮಾನ: ಬ್ರಾಹ್ಮಣೇತರ ಚಳವಳಿಯ ಪ್ರಭಾವ ಪದಕ ಕೊಡುವಲ್ಲಿ ಉಂಡುಮಾಡಿದ ಅವಮಾನವನ್ನು 'ಭಿತ್ತಿ'ಯಲ್ಲಿ ಕಾಣಬಹುದಾಗಿದೆ. ಮೈಸೂರು ವಿಶ್ವವಿದ್ಯಾಲಯದಲ್ಲಿ 'ತತ್ವಶಾಸ್ತ್ರ'ದಲ್ಲಿ ಹೆಚ್ಚು ಅಂಕಗಳನ್ನು ತೆಗೆದವರಿಗೆ ಭಾಬಾ ಸ್ಮಾರಕ ಸುವರ್ಣ ಪದಕ ನೀಡಲಾಗುತ್ತಿತ್ತು. ಅದೇ ರೀತಿ 'ಭಾರತೀಯ ದರ್ಶನ' ವಿಷಯದಲ್ಲಿ ಅತ್ಯಧಿಕ ಅಂಕಗಳನ್ನು ತೆಗೆದುಕೊಂಡವರಿಗೆ ಅಂಬಳೆ ಅಣ್ಣಯ್ಯ ಪಂಡಿತರ ಸುವರ್ಣ ಪದಕ ನೀಡಲಾಗುತ್ತಿತ್ತು. ಎಸ್.ಎಲ್.ಭೈರಪ್ಪ ಅವರು ಇವೆರಡೂ ವಿಷಯಗಳಲ್ಲಿ ಅತಿ ಹೆಚ್ಚು ಅಂಕಗಳನ್ನು ತೆಗೆದುಕೊಂಡಿದ್ದರೂ ಸಹ ಅವರಿಗೆ ಒಂದೇ ಪದಕ ನೀಡಲಾಗುವುದು ಎಂದು ಪತ್ರ ಬರುತ್ತದೆ. ಅದರಲ್ಲಿ 'ಭಾರತೀಯ ದರ್ಶನಕ್ಕೆ' ನೀಡುತ್ತಿದ್ದ ಪುದುವಟ್ಟಿನ ಪದಕವನ್ನು ಸಮಾಜಶಾಸ್ತ್ರದ ವಿದ್ಯಾರ್ಥಿಗೆ(ಸ್ವಜಾತಿ) ನೀಡಲು ವಿಶ್ವವಿದ್ಯಾಲಯದ ಅಧಿಕಾರಿಗಳು ಮುಂದಾಗಿದ್ದರು. ಭೈರಪ್ಪ ಅವರು ಪುದುವಟ್ಟಿನ ಪದಕದ ಆಶಯದ ಪ್ರಕಾರ ನನಗೆ ಆ ಪದಕ ಕೊಡಬೇಕು ಎಂದು ವಿನಂತಿಸಿಕೊಳ್ಳುತ್ತಾರೆ. ಆದರೆ ಈ ವಿನಂತಿಯನ್ನು

ದೇ.ಜವರೇಗೌಡರವರು ನಿರಾಕರಿಸುತ್ತಾರೆ. ಆಗ ಆ ಪುದುವಟ್ಟನ್ನು ಇಟ್ಟಿದ್ದ ಮನೆಯವರಿಂದ ಕೇಸ್ ಹಾಕಿಸಿ ಕೊನೆಗೆ ವಿಶ್ವವಿದ್ಯಾಲಯವು ಆ ಪದಕವನ್ನು ಭೈರಪ್ಪನವರಿಗೆ ಕೊಡುವಂತಾಗುತ್ತದೆ. ಇಲ್ಲಿ ಅವಮಾನ ಮತ್ತು ಅದಕ್ಕೆ ತಕ್ಕ ಪ್ರತಿರೋಧಗಳೆರಡೂ ಇವೆ.

ಮೇಲಿನ ಸನ್ನಿವೇಶವು ಬ್ರಾಹ್ಮಣೇತರ ಚಳವಳಿ ಸಂದರ್ಭದಲ್ಲಿ ನಡೆದಿದ್ದಾಗಿದೆ. ಸಮಾಜಶಾಸ್ತ್ರ ವಿಷಯದಲ್ಲಿ ಹೆಚ್ಚು ಅಂಕ ತೆಗೆದುಕೊಂಡ ಬ್ರಾಹ್ಮಣೇತರ ವಿದ್ಯಾರ್ಥಿಗೆ ವಿಶ್ವವಿದ್ಯಾಲಯವೇ ವಿಷಯಧಾರಿತ ಪದಕವನ್ನು ಸೃಷ್ಟಿಸಬಹುದಿತ್ತು. ಅದರ ಬದಲಿಗೆ ಆತ್ಮಕಥನಕಾರರಿಗೆ ಸಿಗಬಹುದಾಗಿದ್ದ ಪದಕವನ್ನು ತಪ್ಪಿಸಲು ಹೋಗಲಾಗುತ್ತದೆ. ಇಲ್ಲಿ ಬ್ರಾಹ್ಮಣರೆಲ್ಲರನ್ನು ಶೋಷಕರೆಂದು ಸಾಮಾನ್ಯೀಕರಿಸಿದ ಮತ್ತು ಪ್ರತಿರೋಧ ತೋರುವಲ್ಲಿ ಅವಸರದ ನಿರ್ಣಯವನ್ನು ತೆಗೆದುಕೊಂಡು ಜವರೇಗೌಡ ಅವರು ಅವಮಾನಕ್ಕೆ ಒಳಗಾದ ಸಂಗತಿಗಳಿವೆ. ಇದರ ಜೊತೆ ಜೊತೆಗೆ ಲೇಖಕರು ಸಹ ದೇ.ಜವರೇಗೌಡ ಅವರ ಅವಮಾನಕ್ಕೆ ಮತ್ತೆ ಪದಕ ಪಡೆಯುವುದರ ಮೂಲಕ ಪ್ರತಿರೋಧ ತೋರುವಲ್ಲಿ ಯಶಸ್ವಿಯಾಗುತ್ತಾರೆ. ಜಾತಿ ವ್ಯವಸ್ಥೆಯಲ್ಲಿ ಎಲ್ಲಾ ಜಾತಿಗಳಲ್ಲಿರುವ ಎಲ್ಲರನ್ನೂ ಏಕಮುಖವಾಗಿ ಗ್ರಹಿಸುವ ಒಂದು ನೋಟವಿದೆ. ಇಂತಹ ನೋಟಗಳು ಹಲವು ಅವಮಾನಗಳಾಗುವುದಕ್ಕೆ ಕಾರಣವಾಗುವುದನ್ನು ಆತ್ಮಕಥೆಯು ಕಾಣಿಸುತ್ತದೆ.

**೪.೨.೩.** ಭಾಷಿಕ ಮಡಿವಂತಿಕೆ: ಭಾಷೆ ಮತ್ತು ಶಿಕ್ಷಣಗಳು ಪ್ರಾಚೀನ ಕಾಲದಿಂದಲೂ ಪುರೋಹಿಶಾಹಿ ವ್ಯವಸ್ಥೆಯ ಪ್ರಭಾವದಿಂದ ಮಡಿವಂತಿಕೆಗೆ ಒಳಪಟ್ಟಿವೆ. ಶೂದ್ರ ಹುಡುಗ ಕೇವಲ ಓಂ ನಮಃ ಶಿವಾಯ ಎಂದಿದ್ದಕ್ಕೆ ಪಂಚಾಯಿತಿ ಕರೆಸಿ ನಾಲಿಗೆಯನ್ನು ಕತ್ತರಿಸುವಷ್ಟರ ಮಟ್ಟಿಗೆ ಈ ಮಡಿವಂತಿಕೆಗಳು ಪ್ರಖರವಾಗಿವೆ. ಇಂತಹ ಭಾಷಿಕ ಮತ್ತು ಸಾಮುದಾಯಿಕ ಮಡಿವಂತಿಕೆಯನ್ನು 'ನೆನಪಿನ ದೋಣಿಯಲ್ಲಿ' ನೋಡಬಹುದಾಗಿದೆ. ಒಕ್ಕಲಿಗ ಸಮುದಾಯದವರಾದ ಕುವೆಂಪುರವರು ಶಾಲೆಯಲ್ಲಿ ಐಚ್ಛಿಕ ವಿಷಯವನ್ನು ಆಯ್ಕೆ ಮಾಡಿಕೊಳ್ಳುವಾಗ ಸಂಸ್ಕೃತ ಭಾಷೆಯನ್ನು ಆಯ್ಕೆ ಮಾಡಿಕೊಂಡಿದ್ದಕ್ಕೆ ಅವರನ್ನು "ಶೂದ್ರರಿಗೆ ಯಾಕೋ ಸಂಸ್ಕೃತ? ನೀನೇನು ಮಂತ್ರಗಿಂತ್ರ ಹೇಳಿ ಪೌರೋಹಿತ್ಯ ಮಾಡ್ತಿಯೇನೋ? ಸಂಸ್ಕೃತ ನಿನಗೆ ಉಚ್ಚಾರ ಮಾಡೋಕೆ ಆಗೋದಿಲ್ಲ"[೫] ಎಂದು ಗೆಳೆಯರು ಹೀಗಳೆಯುವರು. ಕುವೆಂಪು ಅವರ ನಿರ್ಧಾರವನ್ನು ಪ್ರೋತ್ಸಾಹಿಸಬೇಕಿದ್ದ ಶಿಕ್ಷಕ ಮುನಿಸಿಕೊಂಡು "ಶೂದ್ರ ಮಕ್ಕಳಿಗೆ ಬಾಯಿ ತಿರುಗುವುದೇ ಇಲ್ಲ. ಇವು ಸಂಸ್ಕೃತ ಕಲಿಯುತ್ತವಂತೆ. ನಿಲ್ಲೊ ಬೆಂಚಿನ ಮೇಲೆ ಎಂದು ಹೇಳುತ್ತಾರೆ. ಹೀಗೆ ಎರಡು ಮೂರು ದಿನ ಏಟು ದಿನ ಬೆಂಚಿನ ಮೇಲೆ ಹತ್ತಿ ನಿಂತು ನೋವಿಗೂ ಅಪಮಾನಕ್ಕೂ ಹೇಸಿ ರೋಸಿ ಹಾಳು ಸಂಸ್ಕೃತ ಹಾಳಾಗ! ಎಂದು ಮತ್ತೆ ಕನ್ನಡದ ತರಗತಿಗೇ ಸೇರಿಕೊಂಡೆವು"[೬] ಎಂದು ಕುವೆಂಪು ಬರೆಯುತ್ತಾರೆ.

ಭಾಷೆಗೂ ಸಾಮಾಜಿಕ ಸಂರಚನೆಗೂ ಸಂಬಂಧವಿರುತ್ತದೆ ಎಂಬುದಕ್ಕೆ ಮೇಲಿನ ಪ್ರಸಂಗ ಉತ್ತಮ ಉದಾಹರಣೆಯಾಗಿ ನಿಲ್ಲುತ್ತದೆ. ಇದುವರೆಗೂ ಪುರೋಹಿತಶಾಹಿ ವ್ಯವಸ್ಥೆಯು ಯಾವ

ಪರಿಕರಗಳನ್ನು (ಮಡಿವಂತ ಭಾಷೆ, ಶಿಕ್ಷಣ, ಗ್ರಂಥಗಳು, ದೇವರು ಇನ್ನು ಮುಂತಾದ ಸಂಗತಿಗಳ ಮೂಲಕ) ಬಳಸಿಕೊಂಡು ಅಸ್ಪೃಶ್ಯತೆಯನ್ನು ಆಚರಿಸಲಾಗುತ್ತಿತ್ತೋ, ಇದೇ ಪರಿಕರಗಳನ್ನು ಶೋಷಿತರು ಅರಿತುಕೊಳ್ಳಲು ಮುಂದಾದಾಗ ಮಾತ್ರ ಅವರನ್ನು ನಿಂದಿಸುವ ಮತ್ತು ಆ ಮೂಲಕ ಅಸ್ಪೃಶ್ಯತೆಯನ್ನು ಕಾಪಾಡಿಕೊಳ್ಳುವ ಪರಿಸ್ಥಿತಿ ಪ್ರಸ್ತುತ ಆತ್ಮಕಥೆಯಲ್ಲಿದೆ. 'ಶೂದ್ರರಿಗೆ ಯಾಕೋ ಸಂಸ್ಕೃತ ಹಾಗೂ ಮಂತ್ರಗಿಂತ್ರ ಹೇಳಿ ಪೌರೋಹಿತ್ಯ ಮಾಡ್ತಿಯೇನೋ' ಎನ್ನುವ ಸಾಲುಗಳು ಪುರೋಹಿತಶಾಹಿಗಳು ಮಾತ್ರ ಸಂಸ್ಕೃತ ಕಲಿಯಲು ಅರ್ಹರು, ಶೂದ್ರರೆಲ್ಲರೂ ಅನರ್ಹರು ಎಂಬುದನ್ನು ಹಾಗೂ ಪುರೋಹಿತ ವೃತ್ತಿಯನ್ನು ಅನುಸರಿಸುವ ತಮಗೆ ಮಾತ್ರ ಸೀಮಿತ ಎನ್ನುವ ಅಭಿಪ್ರಾಯಗಳನ್ನು ಸಾಂಕೇತಿಸುತ್ತಿದೆ. ಜೊತೆಗೆ ಲೇಖಕರಿಗೆ ಬೆಂಚು ಮೇಲೆ ನಿಲ್ಲಿಸಿದ ಪ್ರಸಂಗವು ಒತ್ತಾಯ ಪೂರ್ವಕವಾಗಿಯಾದರೂ ತರತಮವನ್ನು ಉಳಿಸಿಕೊಳ್ಳುವುದರ ಭಾಗವಾಗಿದ್ದು, ಲೇಖಕರು ಕನ್ನಡದ ತರಗತಿಗೆ ಮರಳಿ ಸೇರಿಕೊಂಡಿದ್ದು, ಅದನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಭಾಷಿಕ ಅಪಮಾನಗಳು ಸಾಮುದಾಯಿಕ ಅಪಮಾನಗಳು ಆಗುವುದನ್ನು ಆತ್ಮಕಥೆಯು ಧ್ವನಿಸುತ್ತಿದೆ.

**೪.೨.೪.** ಹಲ್ಲೆ ಮತ್ತು ಪ್ರತಿರೋಧ: ಜಾತಿ ಸೂಚಕವಾಗಿ ಹಲ್ಲೆ ಮಾಡುವುದು ಅಪಮಾನದ ಸಂಕೇತವಾದರೂ, ಇದೇ ಹಲ್ಲೆಯೂ ಕೆಲವೊಮ್ಮೆ ಪ್ರತಿರೋಧವು ಆಗುವ ಸಂಗತಿಯನ್ನು 'ನನ್ನ ಶೈಕ್ಷಣಿಕ ಬದುಕು' ಆತ್ಮಕಥೆಯಲ್ಲಿನ ಷಡಕ್ಷರಪ್ಪ ಅವರ ಮಾತಿನಲ್ಲಿ ಕಾಣಬಹುದಾಗಿದೆ. ಷಡಕ್ಷರಪ್ಪ ಅವರು "ಶಾಲೆಯಲ್ಲಿ ಲಿಂಗಾಯತ ಮಕ್ಕಳನ್ನು ವೈದಿಕರ ಮಕ್ಕಳು ಅಸ್ಪೃಶ್ಯರೆಂದು ಕಾಣುತ್ತಿದ್ದರು. ಕರೆಯುತ್ತಿದ್ದರು. ನನಗೆ ಬಹಳ ಸಿಟ್ಟು ಬರುತ್ತಿದ್ದರೂ ಆಗ ೯ನೇ ತರಗತಿಯಲ್ಲಿ ಲಿಂಗಾಯತ ವಿದ್ಯಾರ್ಥಿ ನಾನೊಬ್ಬನೇ. ಉಳಿದವರು ಬ್ರಾಹ್ಮಣರು, ಮುಸಲ್ಮಾನರು. ಒಮ್ಮೆ ಸೈನ್ಯ ಶಿಕ್ಷಕರಾದ ಮಹ್ಮದ ಉಜೈರ ಅವರು ಒಬ್ಬ ಬ್ರಾಹ್ಮಣ ವಿದ್ಯಾರ್ಥಿಗೆ ಹಿಂದುಗಳಲ್ಲಿ ಎಷ್ಟು ವರ್ಣಾಶ್ರಮವೆಂದು ವಿಚಾರಿಸಿದರು. ಅವನು ನಾಲ್ಕು ವರ್ಣಾಶ್ರಮಗಳು; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದನು. ಲಿಂಗಾಯತರು ಯಾವ ಆಶ್ರಮದಲ್ಲಿ ಬರುತ್ತಾರೆ ಎಂಬ ಶಿಕ್ಷಕರ ಪ್ರಶ್ನೆಗೆ ಭೀಮಭಟ್ಟನು (ಬ್ರಾಹ್ಮಣ ವಿದ್ಯಾರ್ಥಿ) ಅಸ್ಪೃಶ್ಯ ವರ್ಗದಲ್ಲಿ ಎಂದು ಉತ್ತರಿಸಿಬಿಟ್ಟನು. ನನ್ನ ಪಿತ್ತ ನೆತ್ತಿಗೇರಿತು. ತಕ್ಷಣ ಭೀಮಭಟ್ಟನ ಕುತ್ತಿಗೆಗೆ ಕೈಹಾಕಿ ಎದೆಯ ಮೇಲೆ ನಾಲ್ಕು ಜಜ್ಜಿದೆನು. ಅಂದಿನಿಂದ ನನ್ನ ತಂಟೆಗೆ ಯಾರು ಬರಲಿಲ್ಲ"[೬] ಎಂದು ಬರೆದುಕೊಳ್ಳುತ್ತಾರೆ.

ಪ್ರಸ್ತುತ ಸನ್ನಿವೇಶದ ಆರಂಭದ ಸಾಲು ಸಾಮಾಜಿಕ ವ್ಯವಸ್ಥೆಯಲ್ಲಿರುವ ಜಾತಿ ತಾರತಮ್ಯವು ಶೈಕ್ಷಣಿಕ ವ್ಯವಸ್ಥೆಯ ಮೇಲೆಯೂ ಪ್ರಭಾವ ಬೀರಿರುವುದನ್ನು ನಿದರ್ಶಿಸುತ್ತಿದೆ. ಇಲ್ಲಿ ಶಿಕ್ಷಕರ ಪ್ರಶ್ನೆಗೆ ಭೀಮಭಟ್ಟ ಕೊಟ್ಟ ಉತ್ತರ ಇಂತಹ ಪ್ರಭಾವದ ಫಲವೇ ಆಗಿದೆ. ಇದೇ ಸಂದರ್ಭದಲ್ಲಿ ಲೇಖಕರು ಬಳಸಿರುವ 'ಸಿಟ್ಟು' ಪದದಲ್ಲಿ ಎರಡು ಆಯಾಮಗಳಿವೆ. ಸವರ್ಣೀಯರ ಜಾತಿ ನಿಂದನೆಯ ವಿರುದ್ಧದ ಸಿಟ್ಟು ಮೊದಲನೆಯದಾದರೆ, ತಮ್ಮನ್ನು ತಮಗಿಂತ ತಳಮಟ್ಟದವರಾದ ಅಸ್ಪೃಶ್ಯರಿಗೆ

ಹೋಲಿಸಿರುವುದು ಎರಡನೆಯದಾಗಿದೆ. ಇವೆರಡೂ ಹಿನ್ನೆಲೆಗಳು ಪ್ರತಿರೋಧಗಳಿಗೆ ಕಾರಣವಾಗಿವೆ. '೯ನೇ ತರಗತಿಯಲ್ಲಿ ಇದ್ದದ್ದು ನಾನೊಬ್ಬನೇ ಲಿಂಗಾಯತ ವಿದ್ಯಾರ್ಥಿ' ಎನ್ನುವ ಸಾಲು ಪ್ರತಿರೋಧವನ್ನುಂಟು ಮಾಡುವವರಲ್ಲಿ ಸಮುದಾಯದ ಸಂಖ್ಯಾಬಲ ಒಂದು ಬಗೆಯ ಭರವಸೆಯನ್ನು ಮೂಡಿಸುತ್ತದೆ ಎಂಬ ಮನೋಧೋರಣೆಯನ್ನು ಸೂಚಿಸುತ್ತದೆ. ಹೀಗೆ ಸಂಖ್ಯಾಬಲದ ಕೊರತೆ ಇದ್ದರೂ ಲೇಖಕರು ತಮ್ಮ ಸಮುದಾಯವನ್ನು ಅಸ್ಪೃಶ್ಯರಿಗೆ ಹೋಲಿಸಿದ ಬ್ರಾಹ್ಮಣ ಗೆಳೆಯನ ಮೇಲೆ ಹಲ್ಲೆ ಮಾಡುವುದು ಪ್ರತಿರೋಧದ ಸ್ವರೂಪವೇ ಆಗಿದೆ. ವಯೋಸಹಜವಾದ ಹುರುಪು ಮತ್ತು ಅಪಮಾನವನ್ನು ಸಹಿಸದ ಲೇಖಕರ ಹಲ್ಲೆಯು ತನ್ನ ಗೆಳೆಯರಲ್ಲಿನ ಪುರೋಹಿತಶಾಹಿ ಮನಸ್ಥಿತಿಯ ಮೂಲ ಬೇರುಗಳನ್ನು ಅಲ್ಪಮಟ್ಟಿಗೆ ಕದಲಿಸಿರುವುದನ್ನು ಆತ್ಮಕಥೆಯಲ್ಲಿ ಗುರುತಿಸಬಹುದು

**೪.೨.೫.** ಸಾಹಿತ್ಯ ವಲಯದೊಳಗಿನ ಪ್ರತಿರೋಧ: ಸಾಹಿತ್ಯ ಲೋಕದಲ್ಲಿಯೂ ಬೀಡುಬಿಟ್ಟಿರುವ ಸಾಮಾಜಿಕ ವ್ಯವಸ್ಥೆಯ ಬೇರುಗಳು ಅಪಮಾನಗಳಿಗೂ, ಪ್ರತಿರೋಧಗಳಿಗೂ ಕಾರಣವಾಗುವುದನ್ನು 'ಕಾದಂಬರಿಕಾರನ ಕತೆ'ಯಲ್ಲಿ ಕಾಣಬಹುದಾಗಿದೆ. ಇಲ್ಲಿ ಬಸವರಾಜ ಕಟ್ಟೀಮನಿಯವರು "ಶ್ರೀ ಕುವೆಂಪು ಅವರು ಕವಿಯೇ ಅಲ್ಲ. ಅವರು ಇಂಗ್ಲೀಷಿನಿಂದ ಸಂಸ್ಕೃತದಿಂದ ಕಾಪಿ ಮಾಡುತ್ತಾರೆ. ಅವರ ಕವಿತೆಗಳಲ್ಲಿ ಏನೂ ಹುರುಳಿಲ್ಲ ಎಂದು ಮೊದಲಾಗಿ ಗೋಕಾಕರು ಅಪಪ್ರಚಾರ ಮಾಡುತ್ತಿದ್ದರು. ನಾನು ಎರಡು ಮೂರು ಲೇಖನ ಬರೆದು ಗೋಕಾಕರ ವಾದವನ್ನೆಲ್ಲ ಕೊಚ್ಚಿ ಕೊಚ್ಚಿ ಚೂರು ಚೂರು ಮಾಡಿದೆ"[೮] ಎಂದು ಬರೆದುಕೊಳ್ಳುತ್ತಾರೆ. ಇದು ಮೇಲ್ನೋಟಕ್ಕೆ ಸಾಹಿತ್ಯಕ ಸಂಘರ್ಷದಂತೆ ಕಂಡರೂ, ಇಲ್ಲಿ ಸಾಮುದಾಯಿಕ ಸಂಘರ್ಷವು ಅಡಗಿದೆ. ಗೋಕಾಕ್‌ರ ಆರೋಪವು ಬ್ರಾಹ್ಮಣೇತರ ಕವಿಯ ಮೇಲಿನ ಮತ್ತು ಆತನ ಸಾಹಿತ್ಯದ ಮೇಲಿನ ಅಸಹಿಷ್ಣುತೆಯನ್ನು ಸೂಚಿಸಿದರೆ, ಕಟ್ಟೀಮನಿಯವರ ಲೇಖನಗಳು ಸಾಹಿತ್ಯದ ಸಮರ್ಥನೆಯಷ್ಟೇ ಆಗದೆ ಸಾಮುದಾಯಿಕ ಅಸ್ತಿತ್ವದ ಭಾಗವೂ ಆಗಿದೆ. ಹೀಗೆ ಸಮುದಾಯ ಕೇಂದ್ರಿತವಾದ ಆರೋಪಗಳಿಗೆ ಕಟ್ಟೀಮನಿಯವರು ಸಾಹಿತ್ಯ ಮಾಧ್ಯಮದ ಮೂಲಕವೇ ಪ್ರತಿರೋಧ ತೋರುವುದನ್ನು ಆತ್ಮಕಥೆಯು ಕಾಣಿಸುತ್ತದೆ.

**೪.೨.೬.** ಮಡಿವಂತಿಕೆಯನ್ನು ಮೀರುವ ಪ್ರತಿರೋಧಗಳು: ಭಾರತೀಯ ಸಮಾಜದಲ್ಲಿ ಚಾರಿತ್ರಿಕವಾಗಿ ಮಡಿವಂತ ಭಾಷೆಯನ್ನು ಬಳಸಿಕೊಂಡು ಅಸ್ಪೃಶ್ಯತೆಯನ್ನು ಆಚರಿಸಲಾಗುತ್ತಿತ್ತು, ಅದೇ ಭಾಷೆಯನ್ನು ಕಲಿತು ಪುರೋಹಿತಶಾಹಿ ವ್ಯವಸ್ಥೆಯ ಶೋಷಕ ಗುಣವನ್ನು ಅರ್ಥೈಸಿಕೊಂಡು ಮತ್ತು ಅದನ್ನು ಪ್ರತಿರೋಧಿಸಿರುವುದಕ್ಕೆ ಒಂದು ದೊಡ್ಡ ಪರಂಪರೆಯೇ ಇದೆ. ಬಸವಣ್ಣ, ಫುಲೆ ದಂಪತಿಗಳು, ಅಂಬೇಡ್ಕರ್, ಇನ್ನೂ ಮುಂತಾದವರು ಈ ಕಾರ್ಯವನ್ನು ಮಾಡಿದ್ದಾರೆ. ಶೂದ್ರನೆಂದು ಸಂಸ್ಕೃತ ಕಲಿಸದೆ ಪುರೋಹಿತಶಾಹಿ ವ್ಯವಸ್ಥೆಯು ಮಾಡಿದ ಅವಮಾನವನ್ನು ಪ್ರತಿರೋಧಿಸಿದ ಕುವೆಂಪುರವರು ಸಂಸ್ಕೃತವನ್ನು ಕಲಿತು ತಮ್ಮ ಸಾಹಿತ್ಯದುದ್ದಕ್ಕೂ ಸಂಸ್ಕೃತದ ಪ್ರೌಢಿಮೆಯನ್ನು ವ್ಯಕ್ತಪಡಿಸುವುದು ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚೆಚ್ಚು ಸಾಧಿಸಿದ್ದು ಪುರೋಹಿತಶಾಹಿ ವ್ಯವಸ್ಥೆಗೆ ತೋರಿದ ಪ್ರತಿರೋಧವಾಗಿದೆ.

**೪.೩ ಮಹಿಳೆಯರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು**

ಜಾತಿ ಎನ್ನುವುದು ಒಂದು ರೀತಿಯಲ್ಲಿ ಮಾದಕ ವಸ್ತು ಇದ್ದಂತೆ ಅದು ಏಕಕಾಲಕ್ಕೆ ಸುಖವನ್ನು ಮತ್ತು ದುರಂತವನ್ನು ತಂದೊಡ್ಡಬಹುದಾದ ಗುಣವನ್ನು ಹೊಂದಿದೆ. ಹಾಗಾಗಿ ಈ ಜಾತಿ ವ್ಯವಸ್ಥೆ ತಲುಪದ ಜಾಗವೇ ಇಲ್ಲವೆನ್ನುವಂತಾಗಿದೆ. ಮಹಿಳೆಯು ಲಿಂಗದ ಕಾರಣಕ್ಕಾಗಿ ಅವಮಾನ ಅನುಭವಿಸಿದರೂ ಸಹ ಜಾತಿ ಕಾರಣಕ್ಕೆ ಅವಮಾನ ಅನುಭವಿಸುವುದನ್ನು ಸಹ ಕಾಣಬಹುದು. ಹೀಗಾಗಿ ಮಹಿಳೆಯರಿಗೆ ಅವಮಾನ ಎನ್ನುವುದು ಹಲವು ಸ್ವರೂಪಗಳಲ್ಲಿ ಆಗಿರುತ್ತವೆ. ಈಗಾಗಲೇ ರಚನೆಯಾಗಿರುವ ಲೇಖಕ ಮತ್ತು ಲೇಖಕಿಯರ ಆತ್ಮಕಥೆಗಳಲ್ಲಿ ಮಹಿಳೆಯರು ಜಾತಿ ಕಾರಣಕ್ಕಾಗಿ ಅವಮಾನಕ್ಕೆ ಒಳಗಾದ ಸಂದರ್ಭಗಳನ್ನು ಕಾಣಬಹುದಾಗಿದೆ.

**೪.೩.೧.** ಸಂಪ್ರದಾಯದ ಹೆಸರಲ್ಲಿ ಆಗುವಂತಹ ಅವಮಾನಗಳು: ಹಿರಿಯರು ಮಾಡಿಕೊಂಡು ಬಂದಿರುವ ಎಲ್ಲಾ ಆಚರಣೆಗಳಲ್ಲೂ ವೈಜ್ಞಾನಿಕ ಕಾರಣಗಳಿರುತ್ತವೆಂಬ ಅಭಿಪ್ರಾಯಗಳನ್ನು ಸಾಮಾನ್ಯವಾಗಿ ಗಮನಿಸುತ್ತ ಬಂದಿದ್ದೇವೆ. ಇದೇ ಅಭಿಪ್ರಾಯವನ್ನು ಎಲ್ಲಾ ಆಚರಣೆಗಳಿಗೂ ಅನ್ವಯಿಸಲು ಬರುವುದಿಲ್ಲ. ದೇವದಾಸಿ ಪದ್ಧತಿಯಲ್ಲಿ ವೈಜ್ಞಾನಿಕ ಕಾರಣವಿಲ್ಲದೆ 'ಮೇಲ್ಜಾತಿಗಳ' ಸ್ವಾರ್ಥವಿದೆ. ಇಂತಹ ಎಷ್ಟೋ ಆಚರಣೆಗಳಿನ್ನೂ ಜೀವಂತವಾಗಿವೆ. ಇಂತಹ ಆಚರಣೆಗಳು ಪುರೋಹಿತಶಾಹಿ ವ್ಯವಸ್ಥೆಯ ಉತ್ಪನ್ನಗಳಾಗಿದ್ದು, ದಮನಿತರನ್ನು ನಂಬಿಕೆಗಳ ಹೆಸರಲ್ಲಿ ಶೋಷಿಸುತ್ತವೆ. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿನ ಕೆಳಗಿನ ಎರಡೂ ಸನ್ನಿವೇಶಗಳಲ್ಲೂ ಅಂತಹ ಸಂಗತಿಗಳನ್ನು ಕಾಣಬಹುದು.

ಅ. 'ಓಕುಳಿಯೆಂಬ ಈಸ್ಟಮನ್ ಕಲರ್ ಚಿತ್ರ' ಸನ್ನಿವೇಶವನ್ನು ಸೂಕ್ಷ್ಮವಾಗಿ ಗಮನಿಸಬೇಕಿದೆ. ಬಿದರಕುಂದಿ ಎಂಬ ಊರಲ್ಲಿ ನಡೆಯುವ ಓಕುಳಿಯಲ್ಲಿ ದಲಿತ ಹೆಣ್ಣು ಮಕ್ಕಳು ಮಾತ್ರ ಅರೆಬೆತ್ತಲೆಯಾಗಿ ಭಾಗವಹಿಸುತ್ತಾರೆ. ಇವರು ದಲಿತೇತರ ಗಂಡಸರು ತಂದು ಎರಚುವ ಓಕುಳಿ ನೀರಿನಿಂದ ತಪ್ಪಿಸಿಕೊಂಡು, ನೀರನ್ನು ತಂದು ಎರಚುವ ಗಂಡಸಿಗೆ ಜಬರಿಯಿಂದ ಹೊಡೆಯುತ್ತಾರೆ. ಈ ಆಟದಲ್ಲಿ ದಲಿತ ಹೆಣ್ಣು ಮಕ್ಕಳ ಮಾನವು ಬೇರೆ ಬೇರೆ ಊರಿನಿಂದ ಬಂದ ಗಂಡಸರಿಗೆ, ದಲಿತೇತರಿಗೆ ಮನರಂಜನೆಯ ವಸ್ತುವಾಗಿದೆ.

ಆ. ಇದೇ ಆತ್ಮಕಥೆಯಲ್ಲಿ ಬರುವ ತುಣ್ಣಗನೂರಿನಲ್ಲಿಯೂ ದಲಿತ ಮಹಿಳೆಯರು ಪೂರ್ತಿ ಬೆತ್ತಲೆ ಇದ್ದು, ದಲಿತೇತರ ಗಂಡಸರ ಭುಜದ ಮೇಲೆ ಕೂತು ಗಂಡಸರಿಗೆ ಬಾಳೆ ಹಣ್ಣನ್ನು ತಿನ್ನಿಸುವಂತಹ ಹೀನಾಯವಾದ ಆಚರಣೆ ನಡೆಯುತ್ತದೆ. ಇಲ್ಲಿಯೂ ಕೂಡ ಸಂಪ್ರದಾಯದ ಹೆಸರಲ್ಲಿಯೇ ಆಟವನ್ನು ಆಡಿಸಲಾಗುತ್ತಿದೆ. ಮೇಲಿನ ಎರಡೂ ಘಟನೆಗಳಲ್ಲಿ ದಲಿತ ಹೆಣ್ಣು ಮಕ್ಕಳು ಮತ್ತು ದಲಿತೇತರ ಗಂಡಸರು ಮಾತ್ರ ಆಟದಲ್ಲಿ ತೊಡಗಿಸಿಕೊಳ್ಳುವುದರ ಹಿಂದೆ ಜಾತಿ ವ್ಯವಸ್ಥೆಯು ಪ್ರಮುಖ ಪಾತ್ರವಹಿಸಿದೆ. ಇಲ್ಲಿ ಅವಮಾನಗಳಿಗೆ ಒಳಗಾಗುತ್ತಿರುವವರು ಅಸ್ಪೃಶ್ಯ

ಮಹಿಳೆಯರು. ಪುರೋಹಿಶಾಹಿ ವ್ಯವಸ್ಥೆಯು ರೂಪಿಸಿದ 'ನಂಬಿಕೆ'ಗಳು ಇಲ್ಲಿನ ಅವಮಾನಗಳಿಗೆ ಕಾರಣವಾಗಿವೆ. ಇಲ್ಲಿ ಶೋಷಣೆಗೆ ಒಳಗಾಗುತ್ತಿರುವವರಿಗೆ ಅವಮಾನದ ಪ್ರಜ್ಞೆ ಇಲ್ಲದಿರುವುದನ್ನು ಕಾಣಬಹುದಾಗಿದೆ. ಈ ಆಟವನ್ನು ಆಡದಿದ್ದರೆ ಮಳೆ, ಬೆಳೆ ಚೆನ್ನಾಗಿ ಆಗುವುದಿಲ್ಲವೆಂಬ ಕಾರಣವನ್ನೊಡ್ಡಿ ದೇವರು, ಸಂಪ್ರದಾಯಗಳ ನೆಪದಲ್ಲಿ ದಲಿತ ಸಮುದಾಯದ ಮಹಿಳೆಯರನ್ನು ಅವಮಾನಿಸಲಾಗುತ್ತದೆ. ಜಾನಪದ ವಿದ್ವಾಂಸರಾದ ಅರವಿಂದ ಮಾಲಗತ್ತಿಯವರು ಇಂತಹ ಘಟನೆಗಳನ್ನು ಪಾರಂಪರಿಕ ಪ್ರಜನನದ ಸಂಕೇತ ಎಂಬರ್ಥವನ್ನು ಸೂಚಿಸದೆ, ಅವುಗಳ ಒಳಗಿರುವ ವಾಸ್ತವಿಕ ಶೋಷಣೆಯ ತರತಮಗಳನ್ನು ಕುರಿತು ವಿಷಾದದ ಧ್ವನಿಯಲ್ಲಿ ವ್ಯಕ್ತಪಡಿಸುತ್ತಾರೆ.

೪.೩.೨. ಅಸ್ಪೃಶ್ಯತೆ ಮತ್ತು ಅವಮಾನ: ಸಮತಾ ದೇಶಮಾನೆಯವರ 'ಮಾತಂಗಿ ದೀವಟಿಗೆ'ಯು ಏಕಕಾಲಕ್ಕೆ ಬದುಕಿನಲ್ಲಿ ಭರವಸೆ ತುಂಬುವ ಪುಸ್ತಕವಾಗಿಯೂ ದಲಿತ ಸಮುದಾಯದ ಕಥೆಯನ್ನೇಳುವ ಹೊತ್ತಿಗೆಯಾಗಿಯೂ ಅಭಿವ್ಯಕ್ತಿಗೊಂಡಿದೆ. ಇಲ್ಲಿ ಲೇಖಕಿಯ ತಾಯಿಯು ದಲಿತಳಾದ ಕಾರಣಕ್ಕಾಗಿ ಸವರ್ಣೀಯರು ನೀರನ್ನು ಮೇಲಿಂದ ಹಾಕುವ ಚಿತ್ರವಿದೆ. ಇದರ ಜೊತೆಗೆ ಆತ್ಮಕಥನಕಾರರ ತಂದೆಯ ಶಿಕ್ಷಣ ಪಡೆಯುವ ಆಸೆಯನ್ನು ಪೂರ್ಣಗೊಳಿಸದೆ ಅವರನ್ನು ಅಶಿಕ್ಷಿತನಾಗಿಯೇ ಉಳಿಯುವಂತೆ ಮಾಡಲು ಪ್ರಯತ್ನಿಸುವುದು ದಲಿತರಿಗೆ ಮಾಡಿದಂತಹ ಅವಮಾನವಾಗಿದೆ.

ಅಸ್ಪೃಶ್ಯತೆಯ ರೂಪಗಳು ಮೇಲಿನ ಎರಡೂ ಸನ್ನಿವೇಶಗಳಲ್ಲಿ ಎರಡು ಬಗೆಯಲ್ಲಿವೆ. ತಾವು ಬಳಸುವ ಪರಿಕರಗಳನ್ನು ದಲಿತರು ಮುಟ್ಟದಂತೆ ನೋಡಿಕೊಳ್ಳುವುದು ಮೊದಲನೆಯದಾದರೆ, ಮತ್ತೊಂದರಲ್ಲಿ ದಲಿತನೊಬ್ಬನ ಶಿಕ್ಷಣ ಪಡೆಯುವ ಆಸೆಯನ್ನು ಹತ್ತಿಕ್ಕುವುದು ಎರಡನೆಯದಾಗಿದೆ. ಪರಿಕರಗಳನ್ನು ಮುಟ್ಟಿಸಿಕೊಳ್ಳದಿರುವುದು ಪರಂಪರೆಯಿಂದ ನಡೆಸಿಕೊಂಡು ಬಂದಿರುವ ಅಸ್ಪೃಶ್ಯತೆಯಾದರೆ, ದಲಿತನೊಬ್ಬನಲ್ಲಿ ಶಿಕ್ಷಣ ಪಡೆಯುವ ಹಂಬಲ ಬಂದಿರುವುದು ಇತ್ತೀಚಿನದ್ದು. ಆದರೆ ಅದನ್ನು "ಬಾಬುರಾವ್ ಬೇಸರ ಮಾಡಿಕೊಳ್ಳಬೇಡ. ಮೊದಲು ಶಿಸ್ತು, ಸ್ವಚ್ಛತೆ, ಸಂಯಮ, ಪ್ರಾಮಾಣಿಕತೆ, ತ್ಯಾಗ, ಗುರುಭಕ್ತಿ, ದೇಶಭಕ್ತಿ ಎಲ್ಲವೂ ಕಲಿ ನಂತರ...ಅಕ್ಷರ ಕಲಿಯುವಂತೆ"[೫] ಎಂದು ಆತ್ಮಕಥನಕಾರರ ತಂದೆಯ ಗಮನವನ್ನು ಬೇರೆಡೆ ಸೆಳೆಯುವ, ಲೇಖಕರ ತಂದೆಯ ಅಪೇಕ್ಷೆಯನ್ನು ಜಾಣತನದಿಂದ ನಿಭಾಯಿಸಿ ಅಸ್ಪೃಶ್ಯತೆಯನ್ನು ಉಳಿಸಿಕೊಳ್ಳುವ ಮೇಲ್ಜಾತಿಯ ತಂತ್ರವನ್ನು ಆತ್ಮಕಥೆಯು ಕಾಣಿಸುತ್ತದೆ.

೪.೩.೩. ಜಾಗೃತಿ ಮತ್ತು ಪ್ರತಿರೋಧ: ಸಮತಾ ದೇಶಮಾನೆಯವರ 'ಮಾತಂಗಿ ದೀವಟಿಗೆ'ಯಲ್ಲಿ ಮಹಿಳೆ ಕೇವಲ ಅವಮಾನವನ್ನು ಅನುಭವಿಸುವ ಸಾಮಾನ್ಯರಂತಾಗದೆ ಅವಮಾನವನ್ನು ಪ್ರತಿರೋಧಿಸುವುದು ಕಾಣುತ್ತದೆ. ಚಕ್ರಕಟ್ಟಾ ಶಾಲೆಯ ಮಾರುತಿಚಾರಿ ಎಂಬ ಶಿಕ್ಷಕರೊಬ್ಬರು ಅಸ್ಪೃಶ್ಯರೆಂದರೆ ಹುಲಿಯಂತೆ ಆಡುತ್ತಿರುತ್ತಾರೆ. 'ಚಾಂಡಾಲರ ಮಕ್ಕಳೇ' ಎಂದು ಅವಮಾನಿಸಿ ಮಾನಸಿಕ ಮತ್ತು ದೈಹಿಕ ಹಿಂಸೆ ನೀಡುತ್ತಿದ್ದ ಶಿಕ್ಷಕನ ಶೋಷಣೆಯ ಸಂಗತಿ ತಿಳಿದ ಆತ್ಮಕಥನಕಾರರ ತಾಯಿ "ಸರಕಾರ ಇವರಿಗೆ ಬಡವರ ಮಕ್ಕಳಿಗೆ ಹೊಡೆಯುವದಕ್ಕೇನು ಪಗಾರ ಕೊಡುವುದು,

ಬಡವರ ಮಕ್ಕಳ ಕಷ್ಟ ಈ ಮಂಗ್ಯಾನಂಥ ಮಾಸ್ತರ್‌ಗೆ ಏನು ಅರ್ಥ ಆಗುತ್ತದ್"[೧೦] ಎಂದು ಪ್ರಶ್ನಿಸುತ್ತಾಳೆ. ಆಗ ತಪ್ಪಿಸಿಕೊಂಡು ಹೋಗಿದ್ದ ಶಿಕ್ಷಕರು, ಲೇಖಕರ ತಾಯಿ ಹೋದ ನಂತರ ಮರಳಿ ಬರುತ್ತಾರೆ. ಈ ಘಟನೆಯ ತರುವಾಯ ದಲಿತ ವಿದ್ಯಾರ್ಥಿಗಳನ್ನು ಅವಮಾನಿಸುವುದನ್ನು ನಿಲ್ಲಿಸಿದ ಶಿಕ್ಷಕರಲ್ಲಿನ ಪರಿವರ್ತನೆಯು ಪ್ರತಿರೋಧವು ಯಶಸ್ವಿಯಾಗಿರುವುದನ್ನು ಸ್ಪಷ್ಟಪಡಿಸುತ್ತದೆ. ದಮನಿತರು ಶಿಕ್ಷಣ ಪಡೆಯುವಲ್ಲಿ ಅನುಭವಿಸಿದ ಮತ್ತು ಅಸ್ಪೃಶ್ಯರಿಗೆ ಮಾತ್ರ ಸೀಮಿತವಾದ ಶೋಷಕ ಶಿಕ್ಷಕರು ನೀಡುತ್ತಿದ್ದ ಕಿರುಕುಳಗಳನ್ನು ಪ್ರಶ್ನೆ ಮಾಡಿ, ಪುನರಾವರ್ತನೆಯಾಗದಂತೆ ಮಾಡಿದ್ದು ಪ್ರತಿರೋಧವಾಗಿದೆ. ಲೇಖಕಿಯ ತಾಯಿಯ ಈ ಪ್ರತಿರೋಧವು ಪ್ರಾದೇಶಿಕ ಭಾಷೆಯಲ್ಲಿ ನಿರೂಪಣೆಗೊಂಡಿದ್ದು, ಶಿಕ್ಷಕನ ಬದ್ಧತೆಯನ್ನು ಪ್ರಶ್ನಿಸುವ ವಿಧಾನವು ಆಕ್ರೋಶದ ಮಾದರಿಯಲ್ಲಿದೆ.

**೪.೩.೪.** ಪ್ರತಿರೋಧ ಮತ್ತು ಪರಿವರ್ತನೆ: ಅವಮಾನದ ಸನ್ನಿವೇಶಗಳಿಗೆ ತೋರುವ ಪ್ರತಿರೋಧಗಳು ಶೋಷಕ ವ್ಯವಸ್ಥೆಯ ಮೇಲೆ ಪರಿಣಾಮ ಬೀರುವುದು ಬಹುತೇಕ ಕಡಿಮೆ. ಆದರೆ ಈ ಕೆಳಗಿನ ಪ್ರತಿರೋಧವು ಕೇವಲ ಪರಿಣಾಮಗಳಿಗೆ ಮಾತ್ರ ಸೀಮಿತವಾಗದೆ, ಪರಿವರ್ತನೆಯನ್ನುಂಟು ಮಾಡುವಲ್ಲಿಯೂ ಯಶಸ್ವಿಯಾಗಿದೆ. 'ಮಾತಂಗಿ ದೀವಟಿಗೆ'ಯಲ್ಲಿ ಸಮತಾ ಅವರು "ತರಕಾರಿ ಮಾರುತ್ತಿರುವ ಸಂದರ್ಭದಲ್ಲಿ ತರಕಾರಿ ತೆಗೆದುಕೊಂಡ ಲಿಂಗಾಯಿತರ ಹೆಂಗಸೊಬ್ಬಳು ಮೇಲಿಂದ ಎತ್ತಿ ದುಡ್ಡು ಹಾಕಿದಳು (ಎಸೆದಳು) ಮುಟ್ಟಿದರೆ ಮೈಲಿಗೆ ಆಗುತ್ತದೆಂಬ ಕೀಳು ಭಾವನೆ ಅವಳಲ್ಲಿ ಇತ್ತು. ಅವಳು ಕೂಡ ವಿದ್ಯಾವಂತಳೇ"[೧೧] ಎಂಬುದನ್ನು ದಾಖಲಿಸುತ್ತಾರೆ. ಈ ಸನ್ನಿವೇಶದಲ್ಲಿ ದಲಿತ ಸಮುದಾಯಗಳು ಉತ್ಪಾದಿಸಿದ ವಸ್ತುಗಳಲ್ಲಿರದ ಅಸ್ಪೃಶ್ಯತೆ ಉತ್ಪಾದಕರನ್ನು ಸ್ಪರ್ಶಿಸುವಾಗ ಮಾತ್ರ ತಕ್ಷಣ ಪ್ರತ್ಯಕ್ಷವಾಗುವುದನ್ನು ನೋಡಬಹುದಾಗಿದೆ. ಹೀಗೆ ಮಾಡಿದ ಲಿಂಗಾಯಿತರ ಹೆಂಗಸಿಗೆ ಸಮತಾರವರ ಅಣ್ಣ "ಏ ಅವ್ವಿ, ಆ ಅಮ್ಮ, ಎತ್ತಿ ಹಾಕಿರುವ ಹಣ ನೀವ್ಯಾರು ಕೈಯಿಂದ ಮುಟ್ಟಬ್ಯಾಡ್ರಿ, ಅದನ್ನು ನೀರಲ್ಲಿ ಹಾಕಿ ತೊಳೆಯರಿ. ಅದರ ಮೈಲಿಗೆ ಹೋಗಲಿ. ನೀರು ಶುದ್ಧದ ಸಂಕೇತ. ಹಣೆಯ ಮೇಲೆ ವಿಭೂತಿ ಹಾಕಿದ್ರೆ ಬಸವಣ್ಣ ಆಗಲ್ಲ. ನಡೆ ನುಡಿ ಒಂದಾಗಿರಬೇಕಮ್ಮಾ ತಾಯಿ"[೧೨] ಎಂದು ಪ್ರತಿಕ್ರಿಯಿಸುವ ಸನ್ನಿವೇಶವಿದೆ. ಇಲ್ಲಿ ಅವಮಾನಕ್ಕೆ ತಕ್ಕ ಪ್ರತಿರೋಧವಿದೆ. ಸಮತಾ ಅವರ ಅಣ್ಣನ ಮಾತಿಗೆ ಆ ಹೆಂಗಸಿಗೆ ಜ್ಞಾನೋದಯವಾಯಿತೇನೋ ಇಂದು ಅವರು ಕಲಬುರ್ಗಿಯ ತುಂಬೆಲ್ಲಾ ಸಮತಾವಾದದ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದಾರೆ ಎಂಬುದನ್ನು ಸಮತಾ ಅವರು ಉಲ್ಲೇಖಿಸುತ್ತಾರೆ. ಇಲ್ಲಿ ಶೋಷಕ ವ್ಯವಸ್ಥೆಯನ್ನು ಬಸವಣ್ಣನ ಸೈದ್ಧಾಂತಿಕತೆ ಮತ್ತು ಅಸ್ಪೃಶ್ಯತೆಯ ಅನುಭವದ ಮೂಲಕ ಪ್ರತಿರೋಧಿಸುವುದಷ್ಟೇ ಅಲ್ಲದೆ ತಂಗಿಗೆ ಬುದ್ಧಿ ಹೇಳುವ ನೆಪದಲ್ಲಿ ಶೋಷಕರಿಗೂ ತಿಳಿಹೇಳುವ ಧಾಟಿ ಪರೋಕ್ಷ ಮಾದರಿಯಾದರೂ ಅಪಮಾನಿಸುವವರನ್ನು ಪರಿವರ್ತಿಸುವಲ್ಲಿ ಯಶಸ್ವಿಯಾಗಿದೆ. ಈ ಪ್ರತಿರೋಧವು ಪರಿವರ್ತನೆಗೆ ಕಾರಣವಾಗುವುದನ್ನು ಗುರುತಿಸಬಹುದಾಗಿದೆ. ಆತ್ಮಕಥೆಗಳಲ್ಲಿ ಲೇಖಕರು ತೋರುವ ಪ್ರತಿರೋಧಗಳು ಕೇವಲ ಪ್ರತಿಕ್ರಿಯೆಯಷ್ಟೇ ಆಗದೆ ಪರಿವರ್ತನೆ ತರುವುದರಲ್ಲಿಯೂ ಕಾರಣವಾಗಿರುವುದನ್ನು ಆತ್ಮಕಥೆಯು ಸಾಕ್ಷೀಕರಿಸುತ್ತದೆ.

## ೪.೪. ಅಲೆಮಾರಿ ಸಮುದಾಯವಾದ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

ಎ.ಎಂ. ಮದರಿಯವರು ಬರೆದಿರುವ 'ಗೊಂದಲಿಗ್ಯಾ' ಆತ್ಮಕಥೆಯು ಅಲೆಮಾರಿ ಸಮುದಾಯಗಳು ಈ ಸಾಮಾಜಿಕ ವ್ಯವಸ್ಥೆಯಲ್ಲಿ ಅನುಭವಿಸುವ ನೋವು, ಅಪಮಾನಗಳನ್ನು ತಣ್ಣನೆಯ ನಿರೂಪಣ ಶೈಲಿಯಲ್ಲಿ ಅಭಿವ್ಯಕ್ತಿಗೊಳಿಸುತ್ತದೆ. ಅಲೆಮಾರಿ ಸಮುದಾಯಗಳು ಸಾಮಾನ್ಯವಾಗಿ ಒಂದು ಕಡೆ ನೆಲೆ ನಿಲ್ಲದೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಬಲರಿಲ್ಲದ ಕಾರಣಕ್ಕಾಗಿ ಹಲವು ಸಂದರ್ಭಗಳಲ್ಲಿ ಅವಮಾನ ಅನುಭವಿಸುವಂತಹ ಪರಿಸ್ಥಿತಿ ಆತ್ಮಕಥೆಗಳಲ್ಲಿವೆ. ಈ ಅವಮಾನಗಳ ಸ್ವರೂಪಗಳು ಕೆಳಗಿನಂತಿವೆ.

**೪.೪.೧.** ಹತ್ತಿ ಮಿಲ್‌ನಲ್ಲಿ ಆದ ಅವಮಾನ: ಅಲೆಮಾರಿಗಳು ಮತ್ತು ಅಸ್ಪೃಶ್ಯರು ಅನುಭವಿಸುವ ಅವಮಾನಗಳಲ್ಲಿ ಕೆಲವು ಸಾಮ್ಯತೆಗಳನ್ನು ಕಾಣಬಹುದು. 'ಗೊಂದಲಿಗ್ಯಾ'ದ ಈ ಕೆಳಗಿನ ಸನ್ನಿವೇಶದಲ್ಲಿ ಅಲೆಮಾರಿ ಹಿನ್ನೆಲೆಯ ಮದರಿಯವರು ಅಸ್ಪೃಶ್ಯತೆಗೆ ಒಳಗಾಗುವುದನ್ನು ಗಮನಿಸಬಹುದಾಗಿದೆ. ಆಲೂರಿನ ಹತ್ತಿ ಮಿಲ್ಲಿನಲ್ಲಿ ಆತ್ಮಕಥನಕಾರರು ಕೆಲಸ ಮಾಡುತ್ತಿದ್ದಾಗ ಮಿಲ್‌ನ ಮಾಲೀಕನು ತರಿಸಿದ ಚಹಾವನ್ನು ಲೇಖಕರು ಎಲ್ಲರಿಗೂ ನೀಡಲು ಹೋದರೆ "ಏ ನೀನು ನಮಗೆ ಏನು ಕೊಡಬ್ಯಾಡ, ದೋಸಗೇರ ಕೈಯ್ಯಾಗಿಂದೇನೂ ತಿನ್ನೋದಿಲ್ಲ, ಕುಡಿಯೋದಿಲ್ಲ"[೧೩] ಎಂದು ಅವಮಾನಿಸುತ್ತಾರೆ. ಈ ಅವಮಾನಿಸುವುದರ ಹಿಂದೆ ಆತ್ಮಕಥನಕಾರರ ಜಾತಿ ಪ್ರಮುಖ ಪಾತ್ರವಹಿಸಿದೆ. ಚಹಾದ ನಿರಾಕರಣೆಯು ಏಕಕಾಲಕ್ಕೆ ಆತ್ಮಕಥನಕಾರರ ಸಮುದಾಯದ ನಿರಾಕರಣೆಯೂ ಆಗಿದೆ. ಕೆಲಸಕ್ಕೆ ಹಾಗೂ ದುಡ್ಡಿಗೆ ಇಲ್ಲದಿರುವ ಈ ಅಸ್ಪೃಶ್ಯತೆಯು ಟೀ ಕುಡಿಯುವಾಗ ಮಾತ್ರ ತಕ್ಷಣ ಪ್ರತ್ಯಕ್ಷವಾಗುವುದು ಭಾರತೀಯ ಸಮಾಜದ ವಿಪರ್ಯಾಸವಾಗಿದ್ದು ಇದನ್ನು ಲೇಖಕರು ತಟಸ್ಥವಾದ ಧ್ವನಿಯಲ್ಲಿ ಅಭಿವ್ಯಕ್ತಿಸುತ್ತಾರೆ.

**೪.೪.೨.** ವೃತ್ತಿ ನಿರತ ಸ್ಥಳಗಳಲ್ಲಿ ಆದ ಅವಮಾನ: ಜಾತಿ ವ್ಯವಸ್ಥೆಯಲ್ಲಿ ದಮನಿತರಾಗಿ ಹುಟ್ಟಿರುವುದಕ್ಕೆ, ಮತ್ತು ದಮನಿತರ ಪರವಾಗಿ ಆಲೋಚನೆಯನ್ನು ಹೊಂದಿರುವುದಕ್ಕೆ ಅವಮಾನಗಳಾಗುವುದನ್ನು 'ಗೊಂದಲಿಗ್ಯಾ'ದಲ್ಲಿ ಕಾಣಬಹುದಾಗಿದೆ. ಮದರಿಯವರು "ನಮ್ಮ ಶಾಲೆಯ ಬ್ರಾಹ್ಮಣ ಶಿಕ್ಷಕರು ನಾವು ಮುಟ್ಟಿದ ನೀರನ್ನು ಕುಡಿಯುತ್ತಿರಲ್ಲಿಲ್ಲ. ವಿಜಾಪುರೆಯವರು ಬ್ರಾಹ್ಮಣರಾದರೂ ಎಂದು ಮಡಿವಂತಿಕೆ ಮಾಡುತ್ತಿರಲಿಲ್ಲ. ಮಡಿವಂತರು ಅವರನ್ನು ಸಹ ಅಸ್ಪೃಶ್ಯರಂತೆ ಕಾಣುತ್ತಿದ್ದರು"[೧೪] ಎಂಬುದನ್ನು ದಾಖಲಿಸುತ್ತಾರೆ. ಈ ಉಲ್ಲೇಖದಲ್ಲಿ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನಗಳ ಕುರಿತು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಇಲ್ಲಿ ಬ್ರಾಹ್ಮಣ ಶಿಕ್ಷಕರು ತಮ್ಮ ಸಹೋದ್ಯೋಗಿ ಸ್ಪರ್ಶಿಸಿದ ನೀರನ್ನು ಮುಟ್ಟದಿರುವುದು ಪ್ರಜ್ಞಾವಂತರೆ ಜಾತಿಯ ಕಾರಣಕ್ಕೆ ಅಮಾನುಷರಾಗುವುದನ್ನು ಸೂಚಿಸುತ್ತದೆ. ಇದರ ಜೊತೆಗೆ ಜಾತ್ಯತೀತ ಮನೋಭಾವನೆಯನ್ನು ಹೊಂದಿದ್ದ ವಿಜಾಪುರೆಯವರನ್ನು ಸಹ

ಅಸ್ಪೃಶ್ಯತೆಗೆ ಒಳಗಾಗಿಸುವುದು ಜಾತಿ ವ್ಯವಸ್ಥೆಯ ಕುರೂಪತೆಯನ್ನು ಕಾಣಿಸುತ್ತದೆ. ಚರಿತ್ರೆಯಲ್ಲಿ ಬಸವಣ್ಣ, ಸಾವಿತ್ರಿಬಾಯಿ ಫುಲೆಯವರು ಇದೇ ಮಾದರಿಯಲ್ಲಿ ಅವಮಾನ ಅನುಭವಿಸಿದನ್ನು ನೆನೆಯಬಹುದಾಗಿದೆ. ಇಲ್ಲಿ ಆತ್ಮಕಥೆಯೂ ಅಪಮಾನಿಸುವ ಮತ್ತು ಆಲಂಘಿಸುವ ಎರಡೂ ಮಾದರಿಗಳನ್ನು ಉದಾಹರಣೆಯಾಗಿ ನೀಡಿದೆ.

**೪.೪.೩.** ಸ್ನೇಹ, ಜಾತಿ, ಅವಮಾನ: ಸ್ನೇಹ ಜಾತಿಯನ್ನು ಮೀರಿ ಘಟಿಸುವಂತದ್ದು ಎಂಬುದು ಆದರ್ಶ, ಇನ್ನೂ ಕೆಲವೊಮ್ಮೆ ಸ್ನೇಹ ಜಾತಿಯನ್ನು ಮೀರುವುದಿಲ್ಲ ಎಂಬುದು ವಾಸ್ತವ. 'ಗೊಂದಲಿಗ್ಯಾ'ದ ಈ ಕೆಳಗಿನ ಸನ್ನಿವೇಶವು ಅಂತಹ ವಾಸ್ತವದ ಸಂಗತಿಗಳನ್ನು ಓದುಗರಿಗೆ ತೆರೆದಿಡುತ್ತದೆ. ಆರ್ಥಿಕವಾಗಿ ಅಲ್ಪಮಟ್ಟಿಗಿನ ಬಡವರಿದ್ದ ತಟ್ಟಿ ಮಠದ ಸ್ವಾಮಿಗೆ ಅದೇ ಸಮುದಾಯದವರು (ವಿಶ್ವಕರ್ಮ ಜನಾಂಗದವರು ಮತ್ತು ದೇವಾಂಗ ಜನಾಂಗದವರು) ಹೆಚ್ಚು ಆದ್ಯತೆ ನೀಡುತ್ತಿರಲಿಲ್ಲ. ಈ ಕಾರಣಕ್ಕಾಗಿ ಮದರಿಯವರ ತಂದೆಯೊಂದಿಗೆ ತಟ್ಟಿ ಮಠದ ಸ್ವಾಮಿ ಬಹಳ ಸಲುಗೆಯಿಂದ ಇದ್ದರು. ಒಂದೊಮ್ಮೆ ಸ್ವಾಮಿಯ ಮನೆಯಲ್ಲಿ ಎರಡು ವರ್ಷದ ಬಾಲೆ ತೀರಿಕೊಂಡು, ಮಗುವಿನ ಹೆಣವನ್ನು ಹೊರಲು ಯಾರು ಬರದೆ ಇದ್ದದ್ದನ್ನು ಗಮನಿಸಿದ ಮದರಿಯವರ ಕಾಕಾ, ಆ ಮಗುವನ್ನು ಎತ್ತಿಕೊಳ್ಳಲು ಬಾಗಿದಾಗ, ತಟ್ಟಿ ಮಠದ ಸ್ವಾಮಿ ಕಾಕನಿಗೆ ಚೆನ್ನಾಗಿ ಒಡೆದು, ನೂಕಿ "ಸ್ವಲ್ಪ ಸಲಿಗಿಯಿಂದ ಮಾತಾಡಿಸಿದ್ರ ನನ್ನ ಮಗಳನ್ನೆ ಮುಟ್ಟುವಷ್ಟು ಉದ್ದಟತನ ತೋರಿಸ್ತಿಯೇನ್ಲೆ ಗೊಂದಲಿಗ್ಯಾ! ನಿಮ್ಮನ್ನ ಎಲ್ಲಿಡಬೇಕ ಅಲ್ಲೆ ಇಡಬೇಕು ಎಲ್ಲಿಂದ ಬಂದ್ವೊ ಪರದೇಶಿ ಸೂಳೇಮಕ್ಳೊ ಏನೊ!"[೧೫] ಎಂದು ಮೂದಲಿಸುತ್ತಾನೆ.

ಆರ್ಥಿಕವಾಗಿ ಬಡವನಾಗಿದ್ದರೂ ತನ್ನ ಮಗಳ ಹೆಣವನ್ನು ತನ್ನ ಜಾತಿಯವರೆ ಮುಟ್ಟದಿದ್ದಾಗ ಸ್ನೇಹ ಮತ್ತು ಮಾನವೀಯ ನೆಲೆಯಲ್ಲಿ ಹೆಣವನ್ನು ಮುಟ್ಟಲು ಬಂದ ವ್ಯಕ್ತಿಗೆ ಜಾತಿ ಹೆಸರಲ್ಲಿ ನಿಂದಿಸುವುದು ಸಂಕಟದ ನಡುವೆಯೂ ಜಾತಿಯನ್ನು ಬಿಟ್ಟು ಕೊಡದ ಮನಸ್ಥಿತಿಗೆ ಉದಾಹರಣೆಯಾಗಿದೆ. ಆತ್ಮಕಥೆಯಲ್ಲಿನ ಎಲ್ಲಿಡಬೇಕೊ, ಅಲ್ಲೇ ಇಡಬೇಕು ಎನ್ನುವ ಪದವಾಗಲಿ, ಪರದೇಶಿ ಸೂಳೆಮಕ್ಳು ಎಂದಿದ್ದಾಗಲಿ ಇವೆಲ್ಲಾ ಅಲೆಮಾರಿಗಳ ಸಂಚಾರಿಯ ಮತ್ತು ಅಪಮಾನದ ಎರಡೂ ಬದುಕನ್ನು ಸೂಚಿಸುತ್ತವೆ. ಜೊತೆಗೆ ಹಿರಿಯ ಪೀಳಿಗೆಯಲ್ಲಿ ಎಂತಹ ನಿಕೃಷ್ಟ ಪರಿಸ್ಥಿತಿ ಎದುರಾದರೂ ಜಾತಿಯನ್ನು ಬಿಟ್ಟು ಕೊಡದ ಬದ್ಧತೆಯನ್ನು ಆತ್ಮಕಥೆಯು ಕಾಣಿಸುತ್ತದೆ.

**೪.೪.೪.** ಬದುಕೇ ಪ್ರತಿರೋಧ: ಭಾರತೀಯ ಸಮಾಜದಲ್ಲಿ ಕೆಲವು ಸಮುದಾಯಗಳನ್ನು ಕೇವಲವಾಗಿ ಕಾಣಲಾಗುತ್ತದೆ. ಆದರೆ ಹೀಗೆ ಕೇವಲವಾಗಿ ಕಂಡ ಸಮುದಾಯಗಳು ಅಪಮಾನಗಳಿಂದ ಹೊರಬಂದು ಪ್ರತಿರೋಧ ತೋರುತ್ತವೆ. 'ಗೊಂದಲಿಗ್ಯಾ'ದಲ್ಲಿ ಆಡಳಿತ ಮಂಡಳಿಯ ಪ್ರಮುಖರೊಬ್ಬರು ಮದರಿಯವರನ್ನು ಕುರಿತು "ಯಾವ ನೌಕ್ರಿ ಸಿಗತಾವಲೇ ನಿನಗೆ, ಅದೂ ನಿನ್ನಂಥ ಗೊಂದಲಗೇರ್ಗೆ"[೧೬] ಎಂದು ಹೇಳುತ್ತಾರೆ. ಇಲ್ಲಿ ಲೇಖಕರನ್ನು ಮತ್ತು ಲೇಖಕರ ಸಮುದಾಯವನ್ನು ತುಚ್ಛವಾಗಿ

ಕಾಣಲಾಗಿದೆ. ಸರ್ಕಾರಿ ನೌಕರಿ ತೆಗೆದುಕೊಳ್ಳಲು ಅನರ್ಹರೆಂದು ಅವಮಾನಗೊಳಿಸಿದ ವ್ಯಕ್ತಿಗೆ, ಸರ್ಕಾರಿ ಕೆಲಸವನ್ನು ತೆಗೆದುಕೊಂಡ ಲೇಖಕರು "ನಾವ ಕೈಬಿಟ್ರ ಏನಾಗತಿದ್ರು ಇವರು' ಅಂತ ಹೇಳಿತಿದ್ರಿ ಸರ್, ಜಗತ್ತ ಭಾಳ ದೊಡ್ಡದೈತಿ, ನಿಮ್ಮ ಉಪಕಾರದಾಗ ಬದಕಲಿ ಅಂತ ನಮ್ಮಂಥವರ್ನ ಹುಟ್ಟಿಸಿಲ್ಲ ದೇವರು. ಇನ್ನ ಮ್ಯಾಗರ ಸ್ವಲ್ಪ ತಿಳಕೊಂಡ ನಮ್ಮಂಥವರ ಕೂಡ ಹ್ಯಾಂಗ ನಡಕೋಬೇಕೋ ಹಂಗ ನಡಕೋರಿ"[೧೭] ಎಂದು ಪ್ರತಿಕ್ರಿಯಿಸುತ್ತಾರೆ. ಇಲ್ಲಿ ಧ್ವನಿ ಕಳೆದುಕೊಂಡಿದ್ದ ಸಮುದಾಯದಿಂದ ಬಂದಂತಹ ಮದರಿ ಅವರು ತೋರಿದ ಪ್ರತಿರೋಧವು ವ್ಯಕ್ತಿ ನೆಲೆಯೂ ಮತ್ತು ಸಾಮುದಾಯಿಕ ನೆಲೆಯೂ ಆಗಿದೆ. ಲೇಖಕರ ಉಲ್ಲೇಖಿತ ಸಾಲುಗಳಲ್ಲಿ ಭರವಸೆ ಮತ್ತು ಗೆದ್ದಿರುವ ವಿಶ್ವಾಸದ ಧ್ವನಿ ಇದೆ. ಇದು ಅವಮಾನಕ್ಕೆ ತಕ್ಷಣ ತೋರಿದ ಪ್ರತಿರೋಧವಲ್ಲದಿದ್ದರೂ ಕಾಲಾಂತರದಲ್ಲಿ ತೋರಿದ ಪ್ರತಿರೋಧವಾಗಿರುವುದನ್ನು ಆತ್ಮಕಥೆಯಲ್ಲಿ  ಗುರುತಿಸಬಹುದಾಗಿದೆ.

**೪.೪.೫.** ಸಂಘಟನಾತ್ಮಕ ಪ್ರತಿರೋಧ: ಸಂಘಟನೆ ಎನ್ನುವುದು ಶಕ್ತಿಯು ಮತ್ತು ಹೋರಾಟದ ಯಶಸ್ಸಿಗೆ ಕಾರಣವೂ ಆಗಿರುವಂತಹ ಸಂಗತಿಯಾಗಿದೆ. ಎಪ್ಪತ್ತರ ದಶಕದ ದಮನಿತ ಸಮುದಾಯಗಳು ಮಾಡಿದ ಹೋರಾಟಗಳು ಸಮಾಜದಲ್ಲಿ ಹಲವು ಬದಲಾವಣೆಗೆ ಕಾರಣವಾಗಿವೆ. 'ಗೊಂದಲಿಗ್ಯಾ'ದಲ್ಲಿ ಬಡತನ, ಅಸಹಾಯಕತೆಯ ಕಾರಣ ಪ್ರತಿರೋಧವು ಅಲ್ಪಮಟ್ಟಿಗೆ ಅಲ್ಲಲ್ಲಿ ಕಾಣಿಸಿಕೊಂಡಿದ್ದು 'ಕುದುರಿಮೋತಿ ಚಳವಳಿ'ಯು ಪ್ರಭುತ್ವಕ್ಕೆ ಪ್ರತಿರೋಧದ ಘಟನೆಯಾಗಿದೆ. ಮಠಾಧೀಶರೊಬ್ಬರ ಭಕ್ತರು ಇಬ್ಬರು ದಲಿತ ಮಹಿಳೆಯರನ್ನು ಬೆತ್ತಲೆ ಮೆರವಣಿಗೆ ಮಾಡಿ ಅವಮಾನಗೊಳಿಸಿದ್ದು, ಆಗಿನ ಕಾಲಕ್ಕೆ ದೊಡ್ಡ ಘಟನೆಯಾಗಿತ್ತು. ಈ ಘಟನೆ ನಡೆದ ನಂತರ ರಾಜ್ಯಾದ್ಯಾಂತ ಪ್ರತಿಭಟನೆ, ಪ್ರತಿರೋಧಗಳು ಆರಂಭವಾದವು. ಅಲ್ಲಮಪ್ರಭು ಬೆಟ್ಟದೂರು ಮತ್ತು ವಿಟ್ಟಪ್ಪ ಗೊರಂಟ್ಲ ಇನ್ನು ಮುಂತಾದ ಹಲವು ಪ್ರಗತಿಪರರು, ಚಿಂತಕರು ಸೇರಿಕೊಂಡು ಅವಮಾನಗೊಳಿಸಿದವರ ವಿರುದ್ಧ ಪ್ರತಿಭಟನೆ ತೋರಿದ್ದು ಅವಮಾನಕ್ಕೆ ಪ್ರತಿಯಾಗಿ ಹುಟ್ಟಿದ ಪ್ರತಿರೋಧದ ಪ್ರಜ್ಞೆಯನ್ನೂ ಸೂಚಿಸುತ್ತದೆ. ಇಲ್ಲಿ ಮತ್ತೊಂದು ಅಂಶವನ್ನು ಗಮನಿಸಲೇಬೇಕು. ೫೦ರ ದಶಕದ ನಂತರ  ಅಕ್ಷರ ವಂಚಿತ ಸಮುದಾಯಗಳು ಅಕ್ಷರ ಜ್ಞಾನ ಪಡೆದವು. ಇದರಿಂದ ಸವರ್ಣೀಯರು ಶೋಷಿತರ ಮೇಲೆ ಮಾಡುತ್ತಿದ್ದ ಅವಮಾನವನ್ನು ಪ್ರತಿರೋಧಿಸುವ ಮಾದರಿಯು ಸಂಘಟನೆ, ಹೋರಾಟಗಳ ಸ್ವರೂಪಕ್ಕೆ ತಿರುಗಿರುವುದನ್ನು ಗುರುತಿಸಬಹುದು.

## ೪.೫. ದಲಿತರಿಗೆ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧದ ಸ್ವರೂಪ

ಜಾತಿ ವ್ಯವಸ್ಥೆಯು ಸಾಮಾಜಿಕ ವ್ಯವಸ್ಥೆಯೊಳಗೆ ಆಳವಾಗಿ ಬೇರು ಬಿಟ್ಟಿದೆ. ಈ ಬೇರುಗಳಿಂದ ಜಾತೀಯತೆಯೆಂಬ ದೊಡ್ಡ ವೃಕ್ಷ ಸದೃಢವಾಗಿ ಬೆಳೆದಿದೆ ಮತ್ತು ಹಲವು ಕ್ಷೇತ್ರಗಳಲ್ಲಿ ವ್ಯಾಪಿಸಿಕೊಂಡಿದೆ. ಈ ವೃಕ್ಷದ ಕೆಲವು ರೆಂಬೆಗಳನ್ನು ಅಲ್ಲಲ್ಲಿ ಕಡಿಯುವ ಕೆಲಸವಾಗಿದ್ದರೂ, ಬೇರನ್ನು ಏನೂ

ಮಾಡಲಾಗಿಲ್ಲ. ಇದರಿಂದ ಜಾತೀಯತೆ ಹಲವು ಸಮಸ್ಯೆಗಳನ್ನು ತಂದೊಡ್ಡಿದೆ. ಇಂತಹ ಸಮಸ್ಯೆಗಳ ಚಿತ್ರಣ ಕೆಳಗಿನ ಆತ್ಮಕಥೆಗಳಲ್ಲಿ ಚಿತ್ರಿತವಾಗಿವೆ.

### ೪.೫.೧ ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆಯಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ

ಕನ್ನಡದ ಮೊಟ್ಟ ಮೊದಲ ದಲಿತ ಆತ್ಮಕಥೆಯಾದ 'ಗೌರ್ಮೆಂಟ್ ಬ್ರಾಹ್ಮಣ'ವು ತನ್ನ ವಿಶಿಷ್ಟತೆಯಿಂದ ಕನ್ನಡ ಸಾಹಿತ್ಯ ಲೋಕದಲ್ಲಿ ಬಹುಚರ್ಚಿತ ಆತ್ಮಕಥೆಯಾಗಿದೆ. ಇಲ್ಲಿ ಅರವಿಂದ ಮಾಲಗತ್ತಿಯವರು ದಲಿತ ಲೋಕದ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಅವರೇ ಹೇಳಿದಂತೆ ಇದು ಅಪೂರ್ಣವಾದ ಆತ್ಮಕಥೆಯಾದ ಕಾರಣ ಅನುಭವದ ಅಭಿವ್ಯಕ್ತಿ ಪೂರ್ಣವಾಗಿ ಬರಬೇಕಿದೆ. ಈ ಆತ್ಮಕಥೆಯು ಅವಮಾನದಿಂದಲೇ ಆರಂಭವಾಗಿ ಅವಮಾನದಿಂದಲೇ ಮುಗಿಯುತ್ತದೆಯಾದರೂ, ಅವಮಾನಗಳ ಸ್ವರೂಪ ಕೆಳಗಿನಂತಿವೆ.

ಅ. ದಲಿತರ ಅಸ್ಮಿತೆಗಾದ ಅವಮಾನ: ದಲಿತರ ಸ್ವಾಭಿಮಾನದ ಬದುಕು, ಸ್ವಾತಂತ್ರ್ಯ ಆಹಾರ ಇವೆಲ್ಲವೂ ಅವರ ಅಸ್ಮಿತೆಗಳೆ ಆಗಿವೆ. ಆದರೆ ಈ ಅಸ್ಮಿತೆಗಳನ್ನು ಸಹಿಸದ ಪಟ್ಟಭದ್ರ ಹಿತಾಸಕ್ತಿಗಳು ದಲಿತರನ್ನು ಅವಮಾನಿಸುವುದನ್ನು ಕಾಣಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮಾಲಗತ್ತಿಯವರು ಆತ್ಮಕಥೆ ಬರೆದಾಗ ಅದನ್ನು ಸಾಹಿತ್ಯ ಎಂದು ಒಪ್ಪಿಕೊಳ್ಳಬೇಕೆ ಅಥವಾ ಬೇಡವೆ ಎಂಬ ಚರ್ಚೆಯಾಯಿತೆಂದು ಮುನ್ನುಡಿಯಲ್ಲಿ ಹೇಳಿಕೊಳ್ಳುವುದನ್ನು ಗಮನಿಸಬಹುದು. ದಲಿತರು ಕಾವ್ಯ ಬರೆಯಲು ಆರಂಭಿಸಿದಾಗಲೂ ಹೀಗೆಯೇ ಚರ್ಚೆ ನಡೆದು ಕ್ರಮೇಣ ಅದನ್ನು ಒಪ್ಪಲಾಯಿತು. ಹೀಗೆ ಸಾಹಿತ್ಯ ಕ್ಷೇತ್ರದಲ್ಲೂ ಇರಬಹುದಾದ ಹಲವು ಸಮಸ್ಯೆಗಳು ದಲಿತರು ಬರೆದ ಸಾಹಿತ್ಯವನ್ನು ಅವಮಾನಿಸುವ ಸ್ಥಿತಿ ಆತ್ಮಕಥೆಗಳಲ್ಲಿವೆ. ಇದಕ್ಕೆ ಮಾಲಗತ್ತಿಯವರು "ಸಾಹಿತ್ಯದ ಕಾರ್ಯಗಳನ್ನು ನಿರ್ವಹಿಸುವ ಕೃತಿಗಳೆಲ್ಲ ಸಾಹಿತ್ಯ ಕೃತಿಗಳೆ"[೧೮] ಎಂದು ಪ್ರತಿಕ್ರಿಯಿಸುತ್ತಾರೆ. ಜೊತೆಗೆ ಅರವಿಂದ ಮಾಲಗತ್ತಿಯವರು ಬಿಡಿಸಿದ ಚಿತ್ರವನ್ನು ಮೊದಲು ಒಪ್ಪಿ, ನಂತರ ದಲಿತ ಬರೆದ ಚಿತ್ರವೆಂದು ಮಠದಿಂದ ಹೊರ ಎಸೆಯಲಾಗುತ್ತದೆ. ಈ ಮೂರು ಸಂದರ್ಭಗಳಲ್ಲೂ ದಲಿತರ ಅಭಿವ್ಯಕ್ತಿಯನ್ನು ಸಮ್ಮತಿಸದ ಸಂಗತಿಯನ್ನು ಕಾಣಬಹುದು. ಈ ಕಲೆ ಮತ್ತು ಬರಹಗಳೆ ದಲಿತ ಬದುಕಿನ ಅಸ್ಮಿತೆಯಾಗಿವೆ. ಇಂತಹ ಕಲೆಯನ್ನು ಕಲೆಯೆಂದು ಒಪ್ಪದ, ದಲಿತರ ಬದುಕನ್ನು ಗೌರವಿಸದೆ ಅವಮಾನಿಸುವ ಎಷ್ಟೋ ಘಟನೆಗಳು ಆತ್ಮಕಥೆಗಳಲ್ಲಿ ವ್ಯಕ್ತವಾಗಿವೆ.

ಆ. ಕೆಲವು ಪ್ರಗತಿಪರರೆಂದು ಕರೆಯುವವರಿಂದ ಆಗುವ ಅವಮಾನ: ದೇವನೂರು ಮಹಾದೇವ ಅವರ ಕೆಳಗಿನ ಸಾಲುಗಳು ಸಾಮಾಜಿಕ ಬದಲಾವಣೆಯ ಕೃತಕತೆಯನ್ನು ವಿಷಾಧಿಕರಿಸುತ್ತವೆ. 'ಬಸ್ಸು ರೈಲು ಕಾರಣಕ್ಕಾಗಿ ಅಕ್ಕಪಕ್ಕ ಕೂತಿದ್ದೆವೆ. ನೌಕರಿ ಕಾರಣಕ್ಕಾಗಿ ಒಟ್ಟಾಗಿ ಓಡಾಡಿದ್ದೇವೆ. ಅಲ್ಲಿ ಇಲ್ಲಿ ಮದುವೆಗಳು ಆಗಿವೆ, ಇಲ್ಲಿ ಆಗುತ್ತಿರುವ ಬದಲಾವಣೆಗಳು ಹೆಚ್ಚಾಗಿ ಬಹಿರಂಗ ಒತ್ತಡದವು ಅಂತರಂಗ ಕತ್ತಲಲ್ಲೆ ಇದೆ...' ಎನ್ನುವ ಸಾಲುಗಳು ಸಮಾಜದಲ್ಲಿ ಹೊಂದಾಣಿಕೆ

ಎಂಬುದೊಂದು ಇದ್ದರೆ, ಅದು ಯಾಂತ್ರಿಕವಾಗಿದೆಯೇ ಹೊರೆತು ಭಾವನಾತ್ಮಕವಾಗಿ ಆಗಿಲ್ಲವೆನ್ನುವುದನ್ನು ಸಾಕ್ಷೀಕರಿಸುತ್ತಿದೆ. ಈ ಬಗೆಯ ಹೊಂದಾಣಿಕೆಯು ಸಂಘಟನೆ, ಹೋರಾಟಗಳನ್ನು ಮಾಡುವವವರಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿರಬೇಕಾಗುತ್ತದೆ. ದಲಿತ, ಬಂಡಾಯ ಚಳವಳಿ ಸಂದರ್ಭಗಳಲ್ಲಿ ಬಹುತೇಕ ಹೋರಾಟಗಳು ಯಶಸ್ಸನ್ನು ಪಡೆಯುತ್ತಿದ್ದವು. ಇದಕ್ಕೆ ಕಾರಣ ಹೋರಾಟಗಾರರಲ್ಲಿದ್ದ ಸೈದ್ಧಾಂತಿಕ ಮತ್ತು ಭಾವನಾತ್ಮಕ ಬದ್ದತೆ. ಇದಕ್ಕೆ ಅಪವಾದ ಎಂಬಂತೆ ಕೆಲವರು ತಮ್ಮನ್ನು ಪ್ರಗತಿಪರರಂತೆ ತೋರ್ಪಡಿಸಿ, ಆಂತರ್ಯದಲ್ಲಿ ಜಾತೀಯತೆ ಮಾಡುವ ಸನ್ನಿವೇಶಗಳು 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿವೆ. 'ಮಾರ್ಕ್ಸವಾದ ಮತ್ತು ಎಂಜಲು ತಟ್ಟೆ' ಎಂಬ ಅಧ್ಯಾಯದಲ್ಲಿ ದಲಿತರ ಆಹಾರವನ್ನು ಹೀನವಾಗಿ ನೋಡುವ ಮತ್ತು ಲೇಖಕ ಉಂಡ ತಟ್ಟೆಯನ್ನು ಹೊರಗೆ ಇಟ್ಟು ಬಾಯಿಯಲ್ಲಿ ಮಾತ್ರ ಮಾರ್ಕ್ಸವಾದ ಮಾತಾಡುವ ವ್ಯಂಗ್ಯತೆಯನ್ನು ಮಾಲಗತ್ತಿಯವರು ವ್ಯಕ್ತಪಡಿಸುತ್ತಾರೆ. ಇದೇ ತರಹದ ಪ್ರಸಂಗಗಳು 'ಊರುಕೇರಿ', 'ಮಣೆಗಾರ' ಇನ್ನೂ ಮುಂತಾದ ಆತ್ಮಕಥೆಗಳಲ್ಲಿ ಉಲ್ಲೇಖಗೊಂಡಿವೆ. ಇಲ್ಲಿ ದಲಿತರಿಗೆ ಅವಮಾನ ಎನ್ನುವುದು ಕೇವಲ ಪಟ್ಟಭದ್ರಹಿತಾಸಕ್ತಿಗಳಿಂದ ಮಾತ್ರವಾಗಿರದೆ. ಪ್ರಜ್ಞಾವಂತರು ಎಂದು ಕರೆಸಿಕೊಳ್ಳುವವರಿಂದಲೂ ಆಗಿದೆ. ಪ್ರಗತಿಪರತೆಯ ಮುಖವಾಡವನ್ನು ಹಾಕಿಕೊಂಡು ತೋರ್ಪಡಿಕೆಯ ಬದುಕನ್ನು ಸಾಗಿಸುವ ಎಷ್ಟೋ ವ್ಯಕ್ತಿಗಳು ಎಲ್ಲಾ ಕಾಲದಲ್ಲಿಯೂ ಕಾಣುತ್ತಾರೆ. ಇಂತಹ ಬದ್ಧತೆಯಿಲ್ಲದ ಸೈದ್ಧಾಂತಿಕತೆಯೇ ಚಳವಳಿಗಳು ಕೆಲವೊಮ್ಮೆ ವಿಫಲವಾಗುವುದಕ್ಕೆ ಕಾರಣವು ಮತ್ತು ಅವಮಾನಗೊಳಿಸುವ ಸಂಗತಿಗಳು ಆಗಿರುವುದನ್ನು ಆತ್ಮಕಥೆಗಳು ಪ್ರಕಟಿಸುತ್ತವೆ.

ಇ. ಪರ್ಯಾಯಗಳನ್ನು ಕಟ್ಟಿಕೊಳ್ಳುವಿಕೆ ಮತ್ತು ಪ್ರತಿರೋಧ: ದಮನಿತರ ಬದುಕಿನಲ್ಲಿ ಕೇವಲ ಅಪಮಾನಗಳನ್ನು ಸಹಿಸಿಕೊಳ್ಳುವುದಷ್ಟೆ ಕಾಣದೇ, ಅಗತ್ಯವಿದ್ದಾಗ ಬೇರೆ ಬೇರೆ ರೂಪದಲ್ಲಿ ಪ್ರತೀಕಾರ ತೀರಿಸಿಕೊಳ್ಳುವ ಸಂಗತಿಗಳೂ ಕಾಣುತ್ತವೆ. ಅರವಿಂದ ಮಾಲಗತ್ತಿಯ 'ಗೌರ್ಮೆಂಟ್ ಬ್ರಾಹ್ಮಣ'ದ 'ಹೆಣದ ದುಡ್ಡು ಮತ್ತು ಮದುವೆಯ ಊಟ' ಸನ್ನಿವೇಶದಲ್ಲಿ ದಲಿತರಿಗೆ ಸಮಾರಂಭಗಳಲ್ಲಿ ಊಟಕ್ಕೆ ಸಂಬಂಧಿಸಿದಂತೆ ಇದ್ದ ನಿರ್ಬಂಧಗಳು ಹೀಗಿವೆ: ಅಗತ್ಯಕ್ಕಿಂತ ಹೆಚ್ಚು ಹಾಕಿಸಿಕೊಳ್ಳಬಾರದು. ಮನೆಗೆ ತೆಗೆದು ಕೊಂಡು ಹೋಗಬಾರದು, ಮತ್ತೊಮ್ಮೆ ಊಟಕ್ಕೆ ಬಾರದಿರಲಿ ಎನ್ನುವ ಗುರುತಿಗಾಗಿ ಬಣ್ಣದಲ್ಲಿ ಕೈ ಅದ್ದಿಸಿಕೊಳ್ಳುವುದು. (ಇವುಗಳಲ್ಲಿ ಕೊನೆಯ ನಿರ್ಬಂಧವು ಚುನಾವಣೆಯಲ್ಲಿ ಮತ ಹಾಕುವವರ ಬೆರಳಿಗೆ ಶಾಹಿ ಹಾಕಿದಂತಿದೆ.) ಬಣ್ಣಕ್ಕೆ ಕೈ ಅದ್ದಿಸುವ ಮೂಲಕ ದಲಿತರು ಮತ್ತೊಮ್ಮೆ ಊಟ ಮಾಡುವುದನ್ನು ತಪ್ಪಿಸಬಹುದು ಎಂಬ ತಂತ್ರವಿದೆ. ಈ ತಂತ್ರಕ್ಕೆ ಮಾಲಗತ್ತಿಯವರ ಅಜ್ಜಿ ಊಟವಿದ್ದ ದಿನ ಮಕ್ಕಳಿಗೆಲ್ಲರಿಗೂ ತಲೆಗೆ ಎಣ್ಣೆ ಹಚ್ಚಿಕೊಳ್ಳುವಂತೆ ಹೇಳಿ; ಊಟವಾಗಿ ಕೈ ತೊಳೆದ ಬಳಿಕ ಕೈಯನ್ನು ಎಣ್ಣೆ ಹಚ್ಚಿದ ತಲೆಗೆ ಸವರಿ, ನಂತರ ಬಣ್ಣದ ಡಬ್ಬಿಗೆ ಅದ್ದಿ ಕೈಯನ್ನು ಒರೆಸಿಕೊಂಡು ಮತ್ತೆ ಊಟ ಮಾಡುವುದು ಜಮೀನ್ದಾರಿ ವ್ಯವಸ್ಥೆಗೆ ತೋರಿದ ಪ್ರತಿರೋಧವಾಗಿದೆ. ಇಲ್ಲಿ ದಲಿತರು ಅಸಹಾಯಕ ಬದುಕಿನೊಳಗೂ ಅವಮಾನಿಸುವ ವ್ಯವಸ್ಥೆಗೆ ಪರ್ಯಾಯ ತಂತ್ರಗಳ

ಮೂಲಕ ಪ್ರತಿರೋಧ ತೋರುತ್ತಾರೆ. ಕೈಗೆ ಹಚ್ಚುವ ಬಣ್ಣ ನಿರ್ಬಂಧದ ಸಂಕೇತವಾದರೆ, ತಲೆಗೆ ಹಚ್ಚುವ ಎಣ್ಣೆ ಪ್ರತಿತಂತ್ರದ ಸಂಕೇತವಾಗಿದೆ. ಈ ಪ್ರತಿತಂತ್ರವು ಪ್ರತಿರೋಧವೇ ಆಗಿರುವುದನ್ನು ಆತ್ಮಕಥೆಗಳು ಸಾಕ್ಷೀಕರಿಸುತ್ತವೆ.

**ಈ.** ಸ್ವಾಭಿಮಾನದ ಭಾಗವಾಗಿ ಪ್ರತಿರೋಧ: ಯಾವಾಗಲೂ ಪ್ರತಿರೋಧಗಳು ಸಿದ್ಧ ಮಾದರಿಯ ಪಡಿಯಚ್ಚುಗಳಲ್ಲ, ಅವುಗಳು ಸಂದರ್ಭನುಸಾರವಾಗಿ ಭಿನ್ನ ಭಿನ್ನವಾಗಿ ಪ್ರಕಟವಾಗುತ್ತವೆ. ಲೇಖಕರನ್ನು ಸಮಾರಂಭಗಳಿಗೆ ಕರೆದು ಆಹಾರದ ವಿಷಯಕ್ಕಾಗಿರಬಹುದು ಅಥವಾ ಜಾತಿಯ ವಿಷಯಕ್ಕಾಗಿರಬಹುದು ಅವಮಾನಿಸುವ ಸಂಗತಿಗಳು 'ಚಹಾದ ಸಂವಾದ ಕಾಫಿಯಾದಾಗ' ಮತ್ತು ಮಾರ್ಕ್ಸವಾದ ಮತ್ತು ಎಂಜಲು ತಟ್ಟೆ' ಪ್ರಸಂಗಗಳಲ್ಲಿ ಕಾಣಬಹುದು. ಇಂತಹ ಅವಮಾನಿತ ಸನ್ನಿವೇಶಗಳನ್ನೆಲ್ಲ ಮಾಲಗತ್ತಿಯವರು ಆಹಾರ ಸ್ವೀಕಾರಕ್ಕೆ ನಿರಾಕರಣೆ ಮಾಡುವುದು ಅವಮಾನಕ್ಕೆ ತೋರಿದ ಪ್ರತಿರೋಧವೇ ಆಗಿದೆ. ಈ ಮೇಲಿನ ಎರಡೂ ಪ್ರತಿರೋಧಗಳನ್ನು ಗಮನಿಸಿದಾಗ ಮಾಲಗತ್ತಿಯವರ ಅಜ್ಜಿಯಲ್ಲಿ ಸಾಮುದಾಯಿಕ ಅಸ್ತಿತ್ವದ ಭಾಗವಾಗಿ ಮತ್ತು ಪರ್ಯಾಯ ಮಾದರಿಗಳನ್ನು ಹುಡುಕಿಕೊಳ್ಳುವ ಆಯಾಮದಲ್ಲಿ ಪ್ರತಿರೋಧವಿದ್ದರೆ ಮಾಲಗತ್ತಿಯವರಲ್ಲಿ ಅದು ನಿರಾಕರಿಸುವ ದಾರಿ ಹಿಡಿದಿರುವುದನ್ನು ಆತ್ಮಕಥೆಯ ಮೂಲಕ ಗುರುತಿಸಬಹುದಾಗಿದೆ.

**೪.೫.೨. ಊರುಕೇರಿ ಆತ್ಮಕಥೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳ ಸ್ವರೂಪ**

**ಅ.** ದಲಿತರು ಪಶು ಸಮಾನರು: ದಲಿತರು ಮತ್ತು ಅವರೊಂದಿಗೆ ಬದುಕುವ ಪಶುಗಳಿಗೂ ಜಾತೀಯತೆಯನ್ನು ಆರೋಪಿಸುವಷ್ಟರ ಮಟ್ಟಿಗೆ ಭಾರತೀಯ ಸಮಾಜವಿದೆ. ಇಂತಹ ಒಂದು ಪ್ರಸಂಗವನ್ನು ಈ ಕೆಳಗಿನಂತೆ ಕಾಣಬಹುದು. 'ಊರುಕೇರಿ' ಆತ್ಮಕಥೆಯು ದಲಿತರನ್ನು ಪಶುಗಳಂತೆ ಕಾಣುವ ಪ್ರಸಂಗದಿಂದಲೇ ಆರಂಭವಾಗುತ್ತದೆ. "ನೊಗಹೊತ್ತ ಆ ಇಬ್ಬರು ಮನುಷ್ಯರು ಎತ್ತುಗಳಂತೆ ಮುಂದೆ ಹೋಗುತ್ತಿದ್ದರೆ ಇನ್ನೊಬ್ಬ ಹಿಂದಿನಿಂದ ಚಾಟಿ ತಿರುಗಿಸುತ್ತಾ ಉಳುಮೆ ಮಾಡುತ್ತಿದ್ದ ದೃಶ್ಯ ಮೋಜಿನಂತೆ ಕಂಡರೂ ನೊಗ ಹೊತ್ತಿದ್ದ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬ ನನ್ನ ಅಪ್ಪ ಎಂದು ಗೊತ್ತಾದ ಕ್ಷಣದಿಂದ ನನ್ನಲ್ಲಿ ವಿಚಿತ್ರವಾದ ಸಂಕಟ ಶುರುವಾಯಿತು"[೯೯] ಎಂದು ಸಿದ್ಧಲಿಂಗಯ್ಯ ಬರೆದುಕೊಳ್ಳುತ್ತಾರೆ. ಈ ಮೇಲಿನ ಪ್ರಸಂಗವು ಪಶುವಿಗಿರುವ ಸಾಮಾನ್ಯ ನೈತಿಕತೆಯನ್ನು ಕಳೆದುಕೊಂಡಿರುವ ವ್ಯವಸ್ಥೆಯು ಬಡತನವುಳ್ಳ ದಲಿತರನ್ನು ಪಶು ಸಮಾನ ಬದುಕಿಗೆ ದೂಡಿರುವುದು, ದಲಿತರ ಅಪಮಾನದ ಬದುಕನ್ನು ಚಿತ್ರಿಸುತ್ತದೆ. ಸಿದ್ಧಲಿಂಗಯ್ಯ ಅವರ ತಂದೆ ಎತ್ತುಗಳಂತೆ ಬಳಕೆಯಾಗಿರುವುದರ ಹಿಂದೆ ಭೂಮಿ ಸಮಾನವಾಗಿ ಹಂಚಿಕೆಯಾಗಿಲ್ಲದಿರುವುದು ಮತ್ತು ಬಡವರಾಗಿಯೇ ಉಳಿದಿರುವ ಸ್ಥಿತಿಗತಿಗಳೇ ಕಾರಣಗಳಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ. ಮನುಸ್ಮೃತಿಯಲ್ಲಿ ಅಸ್ಪೃಶ್ಯರನ್ನು ಶ್ವಪಚ (ನಾಯಿ) ಎಂದು ಕರೆಯಲಾಗಿದೆ. ಹೀಗೆ ದಲಿತರು ಪ್ರಾಣಿಗಳಂತೆ ಬದುಕಬೇಕಾದ ಅನಿವಾರ್ಯತೆಗಳನ್ನು ಲೇಖಕರು ವೇದನೆ ತುಂಬಿದ ದನಿಯಲ್ಲಿ ವ್ಯಕ್ತಪಡಿಸುತ್ತಾರೆ.

**ಆ.** ಅಸ್ಪೃಶ್ಯತೆ ಮತ್ತು ಅವಮಾನಗಳು: ಸಿದ್ಧಲಿಂಗಯ್ಯರವರು ಉಂಡ ತಟ್ಟೆಯನ್ನು ಗೆಳೆಯನ ಮನೆಯಲ್ಲಿ ಹೊರಗೆ ಇಡುವುದು ಹಾಗೂ ಊರ ಪಟೇಲರು ಲೇಖಕರನ್ನು ಮನೆಯ ಹೊರಗಡೆಯೇ ನಿಲ್ಲಿಸಿ ಕಾಫಿ ಕೊಡುವುದು ಅಸ್ಪೃಶ್ಯತೆಯ ಫಲಗಳಾಗಿವೆ. ಈ ಸನ್ನಿವೇಶಗಳ ಜೊತೆಗೆ ಸರ್ಕಾರಿ ಆರ್ಟ್ಸ್ ಕಾಲೇಜಿನ ಗುರುಗಳು ಸಿದ್ಧಲಿಂಗಯ್ಯರವರ ಹೆಸರನ್ನು ನೋಡಿ ಜಂಗಮನೆಂದು ತಿಳಿದು ಪ್ರತಿದಿನ ನೀರು ತರಲು ಕಳುಹಿಸುತ್ತಿದ್ದರು. ಆದರೆ ಸಿದ್ಧಲಿಂಗಯ್ಯನವರು ದಲಿತನೆಂದು ಗೊತ್ತಾದ ಬಳಿಕ ನೀರು ತರುವುದನ್ನು ನಿಲ್ಲಿಸುವ ಸನ್ನಿವೇಶವಿದೆ. ಇಲ್ಲಿ ಆತ್ಮಕಥನಕಾರರ ಹೆಸರು ಗೌರವ ಪಡೆಯುವಲ್ಲಿಯೂ ಹಾಗೂ ಅವಮಾನವನ್ನುಂಟು ಮಾಡುವಲ್ಲಿಯೂ ಕಾರಣವಾಗಿದೆ. ಇಲ್ಲಿ ಗುರುಗಳು ತೋರುವ ಗೌರವ ಮತ್ತು ಅಪಮಾನಗಳೆರಡನ್ನೂ ಲೇಖಕರು ಶೋಕತಪ್ತ ಧ್ವನಿಯಲ್ಲಿ ಅಭಿವ್ಯಕ್ತಿಸದೆ, ಗಂಭೀರ ಸನ್ನಿವೇಶವನ್ನು ಹಾಸ್ಯ ಮಿಶ್ರಿತ ಧ್ವನಿಯಲ್ಲಿ ವ್ಯಕ್ತಪಡಿಸುತ್ತಾರೆ.

ಇ. ಸಂಪ್ರದಾಯವಾದಿಗಳ ವಾಂತಿ: ಸಾಮಾಜಿಕ ಕನಿಷ್ಠತೆ ಮತ್ತು ಆರ್ಥಿಕ ಕನಿಷ್ಠತೆ ದಲಿತ ಬದುಕಿನ ಸ್ಥಾಯಿಭಾವಾಗಿದೆ. ಜಾತಿಯಿಂದ ದಲಿತರಾಗಿದ್ದು ವರ್ಗದ ದೃಷ್ಟಿಕೋನದಿಂದ ಮೇಲ್ವರ್ಗಕ್ಕೆ ಸೇರಿದ ಮಾಜಿ ಶಾಸಕರೊಬ್ಬರು ತಮ್ಮ ಮನೆಯಲ್ಲಿ ಸತ್ಯ ನಾರಾಯಣ ಪೂಜೆ ಮಾಡಿಸಿ ರಾತ್ರಿ ಕೆಲವರಿಗೆ ಊಟದ ವ್ಯವಸ್ಥೆ ಮಾಡಿದ್ದರು. ಆದರೆ ಊಟ ಮಾಡಿದವರು, ಮನೆಯ ಹೊರಗಡೆ ಬಂದು ಸಾಮೂಹಿಕವಾಗಿ ವಾಂತಿ ಮಾಡಲು ಶುರು ಮಾಡಿದರು. ವಾಂತಿಗೆ ಕಾರಣ ತಿಳಿದಾಗ ಊಟ ಮಾಡಿದವರಿಗೆ ಮಾಜಿ ಶಾಸಕರು ದಲಿತರು ಎಂದು ಗೊತ್ತಾಗಿ, ಒತ್ತಾಯ ಪೂರ್ವಕವಾಗಿ ಅವರು ವಾಂತಿ ಮಾಡಿದ್ದರು. ಈ ಸನ್ನಿವೇಶದಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಮಾಜಿ ಶಾಸಕರು ಆರ್ಥಿಕವಾಗಿ ಸಬಲರಾದರೂ ಸಹ ಜಾತಿ ಕಾರಣಕ್ಕೆ ಅವಮಾನ ಅನುಭವಿಸುವುದು. ಇದು ಭಾರತ ದೇಶದ ಜಾತಿ ವ್ಯವಸ್ಥೆಯ ಅಮಾನುಷತೆಯ ಗುಣವನ್ನು ಸ್ಪಷ್ಟ ಪಡಿಸುತ್ತದೆ. ಇಂದಿಗೂ ಅಸ್ಪೃಶ್ಯತೆಯು ಆರ್ಥಿಕತೆಯನ್ನು ಮೀರಿದೆ. ದಲಿತರಿಗೆ ಜಾತಿ ಕನಿಷ್ಠತೆಯೂ ವರ್ಗ ಸಂಬಂಧವನ್ನು ಮೀರಿ ಅಂಟಿಕೊಂಡಿದೆ. ಈ ಕಾರಣಕ್ಕಾಗಿಯೇ ಆರ್ಥಿಕವಾಗಿ ಸಬಲರಾದರೂ ಸವರ್ಣೀಯರ ದೃಷ್ಟಿಯಲ್ಲಿ ಅಸ್ಪೃಶ್ಯರಾಗಿಯೇ ಉಳಿದಿರುವಂತಹ ಸಂಗತಿಗಳು ಆತ್ಮಕಥೆಗಳಲ್ಲಿ ಕಂಡುಬರುತ್ತದೆ.

**ಈ.** ಪ್ರತಿರೋಧ ಮತ್ತು ತಂತ್ರ : ಆತ್ಮಕಥೆಗಳು ಹಲವು ಬಗೆಯ ಪ್ರತಿರೋಧಗಳಿಗೆ ಸಾಕ್ಷಿ ಆಗಿವೆ. 'ಊರುಕೇರಿ'ಯಲ್ಲಿನ ಈ ಕೆಳಗಿನ ಪ್ರತಿರೋಧವು ಪ್ರಭುತ್ವದ ದಬ್ಬಾಳಿಕೆಯನ್ನು ಹಿನ್ನೆಡೆಗೊಳಿಸುವ ವ್ಯಂಗ್ಯತೆಯನ್ನು ಇಲ್ಲಿ ಕಾಣಬಹುದಾಗಿದೆ. "ಮಂಡ್ಯ ಜಿಲ್ಲೆಯ ಕಾಡುಕೊತ್ತನಹಳ್ಳಿಯಲ್ಲಿ ದಲಿತರ ಮೇಲೆ ಪೋಲೀಸರು ದೌರ್ಜನ್ಯ ನಡೆಸಿದ್ದರು. ಪೋಲೀಸರು ದಲಿತರ ಕೇರಿಗೆ ನುಗ್ಗಿದಾಗ ಹೆದರಿದ ಗಂಡಸರು ಮನೆಗಳಿಂದ ಪಲಾಯನ ಮಾಡಿ.. ಊರಿನ ಕೆರೆಗೆ ಹಾರಿದರು. ಪೋಲೀಸರು ಕೆರೆಯ ಸುತ್ತ ಕಾವಲು ನಿಂತರು. ಕೆರೆಗೆ ಬಿದ್ದವರು ಹೊರಗೆ ಬಂದೇ ಬರುತ್ತಾರೆ ಎಂಬುದು

ಪೋಲೀಸರ ನಂಬಿಕೆ. ದಲಿತರು ಎಷ್ಟು ಹೊತ್ತಾದರೂ ಕೆರೆಯಿಂದ ಹೊರಗೆ ಬರಲಿಲ್ಲ. ಉಸಿರುಕಟ್ಟುವಂತೆ ಆದಾಗ ಹೊರಕ್ಕೆ ತಲೆಯೆತ್ತಿ ಕೊಂಚ ಉಸಿರಾಡಿ ಮತ್ತೆ ತಲೆಮುಳುಗಿಸಿ ಬಿಡುತ್ತಿದ್ದರು. ಈ ಕ್ರಿಯೆ ಕೆರೆಯಲ್ಲಿ ಹತ್ತಾರು ಬಾತುಕೋಳಿಗಳಿವೆಯೇನೋ ಎಂಬ ಚಿತ್ರವನ್ನು ಮನಸ್ಸಿಗೆ ತರುತ್ತಿತ್ತು. ಪೋಲಿಸರು ನೀರಿಗೆ ಧುಮಕಲು ಸಮವಸ್ತ್ರ ಕಳಚಬೇಕು. ಯಾರಾದರೂ ಸಮವಸ್ತ್ರ ಅಪಹರಿಸಿದರೆ ಎಂದು ಮರಳಿ ಹೋದರು"[೨೦] ಎಂದು ಲೇಖಕರು ಬರೆಯುತ್ತಾರೆ. ಆತಂಕದ ಸನ್ನಿವೇಶವಾಗಬಹುದಾಗಿದ್ದ ಮೇಲಿನ ಘಟನೆಯು ಆತ್ಮಕಥನಕಾರರ ವ್ಯಂಗ್ಯ ನಿರೂಪಣೆಯ ಕಾರಣದಿಂದ ಭಿನ್ನವಾಗಿ ಅಭಿವ್ಯಕ್ತಿಗೊಂಡಿದೆ. ಇಲ್ಲಿ ದಲಿತ ಬದುಕು ಕಂಡುಕೊಂಡ ಜಲಸ್ತಂಭನ ವಿದ್ಯೆ(ಕೆರೆಯ ಆಶ್ರಯ) ಪೋಲಿಸರ ತಂತ್ರಕ್ಕೆ ಪ್ರತಿತಂತ್ರವಾಗಿದೆ. ಈ ಪ್ರತಿತಂತ್ರವು ಪ್ರತಿರೋಧವೂ ಆಗಿದೆ. ಅಪಮಾನಗಳ ನಡುವೆಯೂ ದಮನಿತರ ಇಂತಹ ಬದುಕು ಕಟ್ಟಿಕೊಳ್ಳುವ ಚೈತನ್ಯಶೀಲತೆಗೆ ಪ್ರಸ್ತುತ ಆತ್ಮಕಥೆಯು ಸಾಕ್ಷಿಯಾಗಿದೆ.

ಉ. ಸಾಮೂಹಿಕ ಪ್ರತಿರೋಧ: ಎಪ್ಪತರ ದಶಕವು ದಮನಿತರು ಸಂಘಟನೆಗೊಂಡ ಕಾಲ. ಸಂಘಟನೆಯ ಅರಿವು ಹಲವು ಪ್ರಭಾವಗಳಿಂದ ಬಂದಿದ್ದು. ಅವಮಾನಿಸುವ ವ್ಯವಸ್ಥೆಯನ್ನು ಕೂಡು ಹೋರಾಟಗಳ ಮೂಲಕ ಪ್ರತಿರೋಧಿಸಿರುವುದು ಆತ್ಮಕಥೆಗಳಲ್ಲಿ ಪ್ರಕಟವಾಗಿವೆ. 'ಊರುಕೇರಿ' ಆತ್ಮಕಥೆಯ 'ದೇವಾಲಯ ಪ್ರವೇಶ'ದ ಪ್ರಸಂಗವನ್ನು ಇಲ್ಲಿ ಗಮನಿಸಬಹುದಾಗಿದೆ. ಅಸ್ಪೃಶ್ಯತೆ ಆಚರಿಸುತ್ತಿದ್ದ ದೇವಸ್ಥಾನವನ್ನು ಪ್ರಗತಿಪರರೆಲ್ಲರೂ ಸೇರಿ ಪ್ರವೇಶಿಸಿದ್ದು, ಶೋಷಕ ವ್ಯವಸ್ಥೆಗೆ ತೋರಿದ ಪ್ರತಿರೋಧವಾಗಿದೆ. ಆದರೆ ಎಲ್ಲಾ ಪ್ರತಿರೋಧಗಳು ಯಶಸ್ವಿಯಾಗುವುದಿಲ್ಲ. ಮೇಲಿನ ಪ್ರತಿರೋಧ ಕೂಡ ವಿಫಲವಾದರೂ ದಮನಿತರಲ್ಲಿ ಅಲ್ಪಮಟ್ಟಿಗೆ ಜಾಗೃತಿ ಮೂಡಿಸುವಲ್ಲಿ ಸಫಲವಾಗಿದೆ.

**೪.೫.೩.ಸಂಬೋಳಿ ಆತ್ಮಕಥೆಯಲ್ಲಿ ಅವಮಾನ ಮತ್ತು ಪ್ರತಿರೋಧದ ಸ್ವರೂಪ**

ಈ ಕೆಳಗೆ ವಿವರಿಸಿರುವ ಅವಮಾನಗಳಲ್ಲಿ ಎದ್ದು ಕಾಣುವ ಸಂಗತಿ ಎಂದರೆ, ಆತ್ಮಕಥನಕಾರರಿಗೆ ಆಗುವ ಅವಮಾನಗಳು ಪ್ರಜ್ಞಾವಂತ ವಲಯದಿಂದಲೇ ಆಗಿರುವಂತವಹದ್ದು.

ಅ. ಶಿಕ್ಷಕನಿಂದ ಅವಮಾನ: ಕತ್ರಗುಪ್ಪೆ ಶಾಲೆಯ ಶಿಕ್ಷಕ ದಲಿತ ಮಕ್ಕಳು ಬರೆದ ನೋಟ್ಸ್‌ಗಳನ್ನು ಮುಟ್ಟದೆ, ಕಪ್ಪು ಹಲಗೆಯ ಬಳಿಯೂ ಕೂಡ ದಲಿತ ಮಕ್ಕಳು ಹೋಗದಂತೆ ನೋಡಿಕೊಂಡು, ಕಸ ಗುಡಿಸಲು ಮಾತ್ರ ದಲಿತ ಮಕ್ಕಳನ್ನೇ ಬಳಸಿಕೊಳ್ಳುವುದು ಅಸ್ಪೃಶ್ಯತೆಯ ಕರಾಳತೆಯನ್ನು ಸೂಚಿಸುತ್ತದೆ. ಜಾತ್ಯತೀತ ಆಗಿರಬೇಕಾದ ಹಾಗೂ ಸಮತೆಯ ನವ ಸಮಾಜವನ್ನು ಸೃಷ್ಟಿಸಬೇಕಾಗಿದ್ದ ಶಿಕ್ಷಕರೇ, ಆದರ್ಶಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವುದು ಶೈಕ್ಷಣಿಕ ವ್ಯವಸ್ಥೆಯ ವಿಫಲತೆಯಾಗಿದ್ದು, ಇದನ್ನು ಲೇಖಕರು ವೇದನೆ ತುಂಬಿದ ಧ್ವನಿಯಲ್ಲಿ ಅಭಿವ್ಯಕ್ತಿಸುತ್ತಾ ಅಸ್ಪೃಶ್ಯರ ಶೋಷಿತ ಬದುಕಿನ ವಿವರಗಳನ್ನು ಓದುಗರ ಮುಂದೆ ತೆರೆದಿಡುತ್ತಾರೆ.

**ಆ.** ಗೆಳೆಯನ ಮನೆಯಲ್ಲಿ ಅವಮಾನ: ಶಿಕ್ಷಣ ಮತ್ತು ನಗರೀಕರಣ ಅಸ್ಪೃಶ್ಯತೆಯನ್ನು ಅಲ್ಪ ಮಟ್ಟಿಗೆ ನಿಯಂತ್ರಿಸಿದೆ. ಹೀಗಾಗಿ ಅಸ್ಪೃಶ್ಯತೆಯು ಆಮೆಯ ವೇಗದಂತೆ ಬದಲಾದ ಸ್ವರೂಪಕ್ಕೆ ತೆರೆದುಕೊಳ್ಳುತ್ತಿದೆ. 'ಸಂಬೋಳಿ'ಯ ಲಕ್ಷ್ಮಣ್ ಅವರು ತನ್ನ ಗೆಳೆಯ ಜಗದೀಶನ ಮನೆಗೆ ಹೋದ ಸಂದರ್ಭದಲ್ಲಿ, ಜಗದೀಶನ ತಾಯಿ ಎಲೆಯಲ್ಲಿ ಉಪ್ಪಿಟ್ಟು ಕೊಟ್ಟದ್ದನ್ನು ಮಗಳು ಪ್ರಶ್ನಿಸಿದ್ದಕ್ಕೆ "ಏನಪ್ಪಾ ಮರಿ ಒಳ್ಳೇರು ಅಂತ ಜಾತಿ, ಕುಲ ಬಿಡಕಾತಾದಾ ನೀನೆ ಹೇಳು"[೨೧] ಎಂದು ಲಕ್ಷ್ಮಣ್ ಅವರಿಗೆ ಕೇಳುತ್ತಾರೆ. ಲೇಖಕರ ಸ್ನೇಹ ದಲಿತನನ್ನು ಮನೆಯೊಳಗೆ ಪ್ರವೇಶಿಸುವಂತೆ ಮಾಡಿದ್ದರೂ, ಅವಮಾನದಿಂದ ಸಂಪೂರ್ಣವಾಗಿ ಮುಕ್ತವಾಗಿಲ್ಲದ ಪರಿಸ್ಥಿತಿಯನ್ನು ಮೇಲ್ಕಂಡ ಸನ್ನಿವೇಶ ಸ್ಪಷ್ಟಪಡಿಸುತ್ತಿದೆ. 'ತಾಯಿಯಲ್ಲಿರುವ ಜಾತಿ ಕುಲ ಬಿಡಕಾತಾದಾ ನೀನೆ ಹೇಳು' ಎಂಬ ಮಾತು ಹಿರಿಯ ಪೀಳಿಗೆಯಲ್ಲಿನ ಜಾತೀಯತೆಯ ಬಿಗಿ ಹಿಡಿತವನ್ನು ಹಾಗೂ ಕಿರಿಯ ಪೀಳಿಗೆ(ಮಗಳ)ಯಲ್ಲಿನ ಪ್ರಶ್ನೆಯು ಅಸ್ಪೃಶ್ಯತೆ ಆಚರಣೆಯು ಅಲ್ಪಮಟ್ಟಿಗಿನ ಪರಿವರ್ತನೆಯ ಹಾದಿ ಹಿಡಿದಿರುವುದನ್ನು ಆತ್ಮಕಥೆಯು ಕಾಣಿಸುತ್ತಿದೆ.

ಇ. ಶೌಚಾಲಯ ಮತ್ತು ಅವಮಾನ: ಸಂಸ್ಥೆಯಲ್ಲಿ ಶೌಚಾಲಯ ಶುಚಿಗೊಳಿಸಲು ಕೆಲಸಗಾರರಿದ್ದರೂ ಆತ್ಮಕಥನಕಾರರಿಗೆ ಹೇಳುವುದು ಅಸ್ಪೃಶ್ಯರು ಮಾತ್ರ ಅನುಭವಿಸುವಂತ ಅವಮಾನವಾಗಿದೆ. ಅದೇ ಒಬ್ಬ ಸವರ್ಣೀಯ ವ್ಯಕ್ತಿಗೆ ಈ ತರದ ಪ್ರಸಂಗ ಬರುವುದು ಬಹುತೇಕ ಕಡಿಮೆ. ತಮ್ಮ ಶೌಚವನ್ನು ಶುಚಿಗೊಳಿಸಲು ಒಂದು ಸಮುದಾಯವನ್ನು ಸೀಮಿತಗೊಳಿಸಿದ ಈ ಜಾತಿ ವ್ಯವಸ್ಥೆಯು ಅಮಾನವೀಯವಾದದ್ದು. ಮೀನು ಸಹಜವಾಗಿ ಹೇಗೆ ಈಜು ಕಲಿಯುವುದೊ ಹಾಗೆಯೇ ಮನುಷ್ಯ ಸಹಜವಾಗಿ ಜಾತಿಯನ್ನು ತನ್ನೊಳಗೆ ಆವಾಹಿಸಿಕೊಳ್ಳುವಂತಹ ಸ್ಥಿತಿ ಈ ಸಮಾಜದಲ್ಲಿದೆ. ತಂತ್ರಜ್ಞಾನವು ಅನ್ಯಗ್ರಹಗಳನ್ನು ತಲುಪುತ್ತಿರುವ ಇಂತಹ ಸಂದರ್ಭದಲ್ಲೂ ಶೌಚಾಲಯ ಮತ್ತು ಮ್ಯಾನ್‌ಹೋಲನ್ನು ಶುಚಿಗೊಳಿಸಲು ಒಂದು ಸಮುದಾಯವನ್ನು ಸೀಮಿತಗೊಳಿಸಿದ್ದು ಭಾರತೀಯ ಸಮಾಜದ ಕುರೂಪತೆಯನ್ನು ಹೇಳುತ್ತದೆ. ಆತ್ಮಕಥೆಯಲ್ಲಿನ ಮೇಲೆ ಉಲ್ಲೇಖಿಸಿದ ಸನ್ನಿವೇಶವು ಅಸ್ಪೃಶ್ಯರನ್ನು ಹೀನಾಯವಾಗಿ ನಡೆಸಿಕೊಳ್ಳುವ ಇಂತಹ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಅಸಹಾಯಕತೆಯನ್ನು ವ್ಯಕ್ತಪಡಿಸುತ್ತದೆ.

**ಈ.** ಅಂತರ್ಜಾತಿ ವಿವಾಹ ಮತ್ತು ಪ್ರತಿರೋಧ: 'ಜಾತಿ ವಿನಾಶ' ಪುಸ್ತಕದಲ್ಲಿ ಅಂಬೇಡ್ಕರ್ ಅವರು ಅಂತರ್ಜಾತಿ ವಿವಾಹವನ್ನು ಸಮರ್ಥಿಸಿಕೊಂಡಿದ್ದರು. ಬಸವಣ್ಣನವರೂ ಸಹ ಅಂತರ್ಜಾತಿ ವಿವಾಹವನ್ನು ೧೨ನೇ ಶತಮಾನದಲ್ಲೇ ಮಾಡಿಸಿದ್ದರು. ಈ ಪ್ರಕ್ರಿಯೆಯು ವಿಫಲವಾಗಿದ್ದರೂ ಅಂದಿನ ಕಾಲಕ್ಕೆ ಜಾತಿ ನಿರ್ಮೂಲನೆಗೆ ಹೊಸ ಸಾಧ್ಯತೆಗಳನ್ನು ದೊರಕಿಸಿ ಕೊಟ್ಟಿತ್ತು. ಅಂದಿನಿಂದ ಇಂದಿನವರೆಗೂ ಅಂತರ್ಜಾತಿ ವಿವಾಹಗಳು ಕುಂಟುತ್ತ, ಎಡವುತ್ತ ಬಂದಿವೆ. 'ಸಂಬೋಳಿ'ಯಲ್ಲಿ ಇಂತಹದೇ ಅಂತರ್ಜಾತಿ ವಿವಾಹವು ನಡೆಯುತ್ತದೆ. ಅಂತರ್ಜಾತಿ ಕಾರಣಕ್ಕಾಗಿ ವಿರೋಧಕ್ಕೆ

ಕಾರಣವಾಗಿದ್ದ ಮತ್ತು ಅದೇ ಕಾರಣಕ್ಕಾಗಿ ಸಾಕಷ್ಟು ಅವಮಾನ ಅನುಭವಿಸಿದ್ದ ಆತ್ಮಕಥನಕಾರರು ಕೊನೆಗೆ ತಾನು ಪ್ರೀತಿಸಿದಾಕೆಯನ್ನೇ ವಿವಾಹವಾಗುವುದು ಪ್ರತಿರೋಧದ ಭಾಗವಾಗಿದೆ. ಆತ್ಮಕಥೆಗಳಲ್ಲಿ ಪ್ರೇಮ ಪ್ರಕರಣಗಳು ವಿಫಲವಾಗಿರುವದೇ ಹೆಚ್ಚು. ಆದರೆ ಮೇಲ್ಕಂಡ ಪ್ರಕರಣವು ಜಾತಿಯನ್ನು ಮೀರಿ ಒಂದಾಗುವಲ್ಲಿ ಯಶಸ್ವಿಯಾಗಿದೆ.

**೪.೬. ಅಭಿವ್ಯಕ್ತಿ ಸ್ವರೂಪ**

ಆತ್ಮಕಥೆಗಳು ವಾಸ್ತವ ಬದುಕಿನ ಸಂಗತಿಗಳಾಗಿದ್ದರೂ ಕೆಲವೊಮ್ಮೆ ಕಲಾತ್ಮಕ ನಿರೂಪಣಾ ಶೈಲಿಯ ಮೂಲಕ ಅಭಿವ್ಯಕ್ತಿಸಲಾಗುತ್ತದೆ. ಹೀಗಾಗಿ ಅಭಿವ್ಯಕ್ತಿಯು ಆತ್ಮಕಥನಕಾರರಿಂದ ಆತ್ಮಕಥನಕಾರರಿಗೆ ಭಿನ್ನಭಿನ್ನವಾಗಿರುತ್ತದೆ. ಅಭಿವ್ಯಕ್ತಿಯ ಈ ಭಿನ್ನತೆಗಳನ್ನು ಪ್ರಸ್ತುತ ಉಪ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಚರ್ಚೆ ಮಾಡಿದ್ದು, ಅಧ್ಯಯನದ 'ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ' ಎಂಬ ಕೊನೆಯ ಅಧ್ಯಾಯದಲ್ಲಿ ಹೆಚ್ಚು ವಿಶ್ಲೇಷಣೆ ಮಾಡಲಾಗಿದೆ.

ಕಲಾ ಸೃಷ್ಠಿಯೂ ಕೂಡ ಪ್ರತಿರೋಧದ ಭಾಗವಾಗಿದೆ. ಕವಿಯ ವಾಸ್ತವ ಬದುಕಿಗೂ ಕಲಾತ್ಮಕ ಬದುಕಿಗೂ ಸಾಕಷ್ಟು ವ್ಯತ್ಯಾಸವನ್ನು ಕಾಣಬಹುದು. ವಾಸ್ತವ ಬದುಕಿನಲ್ಲಿ ತಮಗೆ ಶೋಷಣೆ ಮಾಡಿದ ಪ್ರಭುತ್ವದ ಮೇಲೆ ಪ್ರತೀಕಾರ ತೀರಿಸಿಕೊಳ್ಳುವುದು ಸುಲಭವಾದುದಲ್ಲ. ಆದರೆ ಪ್ರತೀಕಾರ ತೀರಿಸಿಕೊಳ್ಳದ ಹೊರೆತು ಅವಮಾನಿತರಿಗೆ ಸಮಾಧಾನವಿಲ್ಲ. ಆಗ ಅವಮಾನಿತರು ತಮಗಾದ ಅವಮಾನವನ್ನು ಸಾಹಿತ್ಯ ರೂಪದಲ್ಲಿ ಹೊರ ಹಾಕುವ ಹಾಗೂ ಅಲ್ಲಿ ತನಗೆ ಅನ್ಯಾಯ ಮಾಡಿದವರ ವಿರುದ್ಧ ಪ್ರತಿರೋಧ ತೋರುವ ಸಂಗತಿಗಳಿವೆ. ಆ ಮೂಲಕ ಸಮುದಾಯವನ್ನು ಜಾಗೃತಿಗೊಳಿಸುವ ಪ್ರಯತ್ನವನ್ನೂ ಕಾಣಬಹುದು. ಅರವಿಂದ ಮಾಲಗತ್ತಿಯವರ ಆತ್ಮಕಥೆಯಾಗಿರಬಹುದು ಅಥವಾ ತೃತೀಯ ಲಿಂಗಿಗಳ ಆತ್ಮಕಥೆಗಳಾಗಿರಬಹುದು ಇಲ್ಲೆಲ್ಲಾ ಲೇಖಕರು ತಮ್ಮ ಬದುಕಿನ ಹಲವು ಸಂಗತಿಗಳನ್ನು ಹೇಳಿಕೊಂಡಿದ್ದಾರೆ. ಜೊತೆಗೆ ಸಿದ್ಧಲಿಂಗಯ್ಯನವರ ಹೋರಾಟದ ಹಾಡುಗಳು ಒಂದು ಬಗೆಯಲ್ಲಿ ಆತ್ಮಕಥನಗಳಾಗಿದ್ದು, ಪ್ರತಿರೋಧದ ಸಂಕೇತಗಳಾಗಿವೆ. ಹೀಗೆ ಕಲಾಸೃಷ್ಟಿ ಕೂಡ ಅಪಮಾನಿತ ಬದುಕಿನಿಂದ ಹೊರಬರುವ ಪ್ರತಿರೋಧದ ಸಾಂಕೇತಿಕವಾಗಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಈಗಾಗಲೇ ಚರ್ಚಿಸಿದಂತೆ ಜಾತಿ ವ್ಯವಸ್ಥೆಯು ದಮನಿತರಿಗೆ ಹಲವು ಬಗೆಯ ಅವಮಾನಗಳನ್ನುಂಟು ಮಾಡಿದೆ. ಪ್ರತಿ ಸಮುದಾಯಗಳು ಉಳಿದ ಸಮುದಾಯಗಳನ್ನು ಶೋಷಿಸುವ ಹಿನ್ನೆಲೆಯಲ್ಲಿಯೇ ಸಾಮಾಜಿಕ ವ್ಯವಸ್ಥೆಯು ಸಂರಚನೆಗೊಂಡಿದೆ. ಹೀಗೆ ಅವಮಾನಿಸುವ ಸಂಗತಿಗಳಲ್ಲಿಯೇ ಪ್ರತಿರೋಧದ ಅವಕಾಶಗಳು ಹಲವು ತೆರನಾಗಿವೆ.

**ಕೊನೆ ಟಿಪ್ಪಣಿ**

೧. ತುಂಬಾಡಿ ರಾಮಯ್ಯ, ಮಣೆಗಾರ, ಪು. ೨೫

೨. ಲಕ್ಷ್ಮಣ್. ಎಂ, ಸಂಬೋಳಿ, ಪು. ೭೭

೩. ವಿಜಯಾದಬ್ಬೆ (ಸಂ), ಲೇಖಲೋಕ, ಪು ೪೧

೪. ಸಮತಾ ಬಿ. ದೇಶಮಾನೆ, ಮಾತಂಗಿ ದೀವಟಿಗೆ, ಪು. ೨೩೪

೫. ಕುವೆಂಪು. ನೆನಪಿನ ದೋಣಿಯಲಿ, ಪು. ೬೭-೭೦

೬ ಅದೇ, ಪು. ೬೭-೭೦

೭ ಷಡಕ್ಷರಪ್ಪ, ನನ್ನ ಶೈಕ್ಷಣಿಕ ಬದುಕು, ಪು. ೫

೮. ಬಸವರಾಜ ಕಟೀಮನಿ, ಕಾದಂಬರಿಕಾರನ ಕತೆ, ಪು. ೩೪೬

೯. ಸಮತಾ ಬಿ. ದೇಶಮಾನೆ, ಮಾತಂಗಿ ದೀವಟಿಗೆ, ಪು. ೧೮

೧೦. ಅದೇ, ಪು. ೭೮

೧೧. ಅದೇ, ಪು. ೧೨೨

೧೨. ಅದೇ, ಪು. ೧೨೨

೧೩. ಮದರಿ ಎ.ಎಂ. ಗೊಂದಲಿಗ್ಯಾ, ಪು. ೧೦೪

೧೪. ಅದೇ, ಪು. ೨೦೪

೧೫. ಅದೇ, ಪು. ೯೨

೧೬. ಅದೇ, ಪು. ೧೮೫

೧೭. ಅದೇ, ಪು.೧೯೨

೧೮. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೦೨

೧೯. ಸಿದ್ಧಲಿಂಗಯ್ಯ, ಊರುಕೇರಿ, ಪು. ೦೯

೨೦. ಸಿದ್ಧಲಿಂಗಯ್ಯ, ಊರುಕೇರಿ(ಭಾಗ ೨), ಪು. ೭೫

೨೧. ಲಕ್ಷ್ಮಣ್. ಎಂ, ಸಂಬೋಳಿ, ಪು. ೮೩

ಅಧ್ಯಾಯ : ಐದು

# ವರ್ಗದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

೫.೧. ವರ್ಗ, ಹಸಿವು : ಅವಮಾನ ಮತ್ತು ಪ್ರತಿರೋಧಗಳು

೫.೨. ವರ್ಗ, ಜಾತಿ : ಅವಮಾನ ಮತ್ತು ಪ್ರತಿರೋಧಗಳು

೫.೩. ವರ್ಗದ ಇತರೆ ಅವಮಾನ ಮತ್ತು ಪ್ರತಿರೋಧಗಳು

೫.೪. ವರ್ಗ, ಲಿಂಗ : ಅವಮಾನ ಮತ್ತು ಪ್ರತಿರೋಧಗಳು

೫.೫. ಅಭಿವ್ಯಕ್ತಿ ಸ್ವರೂಪ

ಅಧ್ಯಾಯ : ಐದು

# ವರ್ಗದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

## ಪ್ರಸ್ತಾವನೆ

ಈ ಹಿಂದಿನ ಅಧ್ಯಾಯದಲ್ಲಿ ಜಾತಿಯ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ಎಂಬ ವಿಷಯದ ಕುರಿತು ಅಧ್ಯಯನ ಮಾಡಲಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ವರ್ಗದ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ಎಂಬ ವಿಷಯದ ಕುರಿತು ಚರ್ಚೆ ಮಾಡಲಾಗುವುದು. ಅಧ್ಯಾಯದ ಮೊದಲಿಗೆ ವರ್ಗ ಎಂದರೇನು ಎಂಬುದನ್ನು ಅರಿಯಬೇಕಾಗಿದೆ. ವರ್ಗ ಎಂಬುದರ ಪದಶಃ ಅರ್ಥ ಗುಂಪು, ಸಮೂಹ ಎಂಬುದಾಗಿದೆ. ವರ್ಗ ಎಂಬ ಪದವನ್ನು ಆರ್ಥಿಕತೆಗೆ ಸಂಬಂಧಿಸಿದಂತೆ ಕಾರ್ಲ್‌ಮಾರ್ಕ್ಸ್ ಆದಿಯಾಗಿ ಇಂದಿಗೂ ಬಳಸಿಕೊಂಡು ಬರಲಾಗಿದೆ. ಈ ವರ್ಗ ಪರಿಕಲ್ಪನೆಯನ್ನು ಆರ್ಥಿಕ ಆಧಾರದಿಂದ ವ್ಯಕ್ತಿಯ, ಕುಟುಂಬದ, ಸಮುದಾಯದ ಅದರ ಅವಸ್ಥೆಯನ್ನು ಗುರುತಿಸುವ ಒಂದು ಮಾನದಂಡವಿದೆ. ಈ ಮಾನದಂಡವನ್ನು ಅನುಸರಿಸಿ ಪ್ರಸ್ತುತ ಅಧ್ಯಾಯದಲ್ಲಿ ವರ್ಗ ಎಂಬುದಾಗಿ ಅಧ್ಯಯನ ಮಾಡಲಾಗಿದೆ. ವರ್ಗಗಳಲ್ಲಿ ಮೇಲ್ವರ್ಗ, ಮಧ್ಯಮ ವರ್ಗ, ಬಂಡವಾಳಶಾಹಿ, ದುಡಿಯುವ ವರ್ಗ, ಕೆಳವರ್ಗ ಎಂಬ ಹಲವು ಗುಂಪುಗಳಿವೆ. ಹೀಗೆ ಹಲವು ಮಾದರಿಯ ಗುಂಪುಗಳನ್ನು ನಾವು ಗಮನಿಸಬಹುದು. ಈ ರೀತಿಯ ಅನೇಕ ಸಮೂಹಗಳಿಂದ ರಚನೆಗೊಂಡ ಸಾಮಾಜಿಕ ಮತ್ತು ಆರ್ಥಿಕ ಸಂರಚನೆಯು ಭಾರತ ದೇಶದ್ದಾಗಿದೆ. ಹೀಗೆ ವರ್ಗಗಳಿಂದ ರಚನೆಗೊಂಡ ಸಾಮಾಜಿಕ ವ್ಯವಸ್ಥೆಯು ವರ್ಗ-ವರ್ಗಗಳ ನಡುವಿನ ತಾರತಮ್ಯದಿಂದ ತುಂಬಿ ಹೋಗಿದ್ದೂ, ಅಸಮಾನತೆಯೂ ಗಟ್ಟಿಯಾಗಿ ನೆಲೆಗೊಂಡಿದೆ.

ಮೇಲ್ವರ್ಗ ಎಂಬುದು ಸಂಪತ್ತನ್ನು ಅತಿಯಾಗಿ ಉಳ್ಳವರ ಮತ್ತು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಪ್ರಭುತ್ವವನ್ನು ಹೊಂದಿರುವವರ ನಿರ್ದಿಷ್ಟ ಸಮೂಹವಾಗಿದೆ. ಕೆಳವರ್ಗವು ಅತ್ಯಂತ ಕೆಳಸ್ತರದ ವರ್ಗವಾಗಿದ್ದೂ, ಈ ವರ್ಗ ಬಹುತೇಕ ಭೂಮಿ ಹೊಂದಿರುವುದಿಲ್ಲ. ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಾಬಲ್ಯವಿಲ್ಲದೇ ದುಡಿಮೆಯನ್ನು ನಂಬಿಯೇ ಬದುಕಬೇಕಾಗಿರುತ್ತದೆ. ಈ ಆರ್ಥಿಕ ಹಿಂದುಳಿದಿರುವಿಕೆಗಾಗಿಯೇ ಆಗಾಗ ಮೇಲ್ವರ್ಗದಿಂದ ಅವಮಾನಕ್ಕೆ ಒಳಗಾಗುತ್ತಿರುತ್ತದೆ.

ಇದರ ಜೊತೆಗೆ ಮೂಲಭೂತ ಆವಶ್ಯಕತೆಗಳ ಪೂರೈಕೆಯೂ ಸರಿಯಾಗಿ ಆಗದೆ, ಹಸಿವು ಈ ವರ್ಗದ ಸ್ಥಾಯಿಭಾವವಾಗಿದೆ. ಇದನ್ನು ಕೆಳವರ್ಗ ಎಂದು ಕರೆಯಬಹುದು. ಮೇಲ್ವರ್ಗವು ಈ ವ್ಯವಸ್ಥೆಯನ್ನು ಸಂಪೂರ್ಣ ತನ್ನ ಹಿಡಿತದಲ್ಲಿಟ್ಟುಕೊಂಡಿರುತ್ತದೆ. ತನ್ನ ಹಣ ಸಂಪತ್ತಿನಿಂದ ರಾಜಕೀಯ ಪಕ್ಷಗಳನ್ನು ಕೊಂಡುಕೊಂಡು ತನ್ನ ಅನುಕೂಲಕ್ಕೆ ಪೂರಕವಾದ ಯೋಜನೆಗಳನ್ನು ಜಾರಿಗೆ ತಂದು ದುಡಿಯುವ ವರ್ಗದ ದುಡಿಮೆಯ ನೆರವಿನಿಂದ ಬದುಕುತ್ತಿರುತ್ತದೆ. ಕೆಳವರ್ಗ ಎಂಬುದು ಬಡತನದ ಬದುಕನ್ನು ದೂಡುತ್ತಿರುತ್ತದೆ. ಸರ್ಕಾರ ತರುವ ಯೋಜನೆಗಳು ಇವರಿಗೆ ಮೂಗಿನ ಮೇಲೆ ಸವರಿರುವ ತುಪ್ಪದಂತೆ ಆಗಿರುತ್ತದೆ. ಈ ವರ್ಗ ತಾರತಮ್ಯ ಎನ್ನುವುದು ಭಾರತಕ್ಕೆ ಮಾತ್ರ ಸೀಮಿತವಾಗದೆ ಇಡೀ ಪ್ರಪಂಚಕ್ಕೆ ಸಂಬಂಧಿಸಿದ ಸಮಸ್ಯೆಯಾಗಿದೆ. ಕಾರ್ಲ್‌ಮಾರ್ಕ್ಸ್, ಏಂಗಲ್ಸ್ ಇನ್ನೂ ಮುಂತಾದ ಹಲವು ಚಿಂತಕರು ವರ್ಗ ಸಂಘರ್ಷವನ್ನು ಕುರಿತು ಚರ್ಚಿಸಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಬಡವರು ಹೇಗೆ ಮೇಲ್ವರ್ಗದವರಿಂದ ಅವಮಾನಕ್ಕೆ ಒಳಗಾಗುತ್ತಿದ್ದಾರೆ ಮತ್ತು ಅದನ್ನು ಹೇಗೆ ತಮ್ಮ ಅಸಹಾಯಕ ಬದುಕಿನೊಳಗೂ ಪ್ರತಿರೋಧಿಸುತ್ತ ಬಂದಿದ್ದಾರೆ ಎಂಬುದನ್ನು ಪರಿಶೀಲನೆ ಮಾಡಲಾಗುತ್ತದೆ.

ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯು ಬಡವರಿಗೆ ತಮ್ಮ ಬಡತನವನ್ನು ಹಿಂದಿನಿಂದಲೂ ಒಪ್ಪಿಸುತ್ತಾ ಬಂದಿವೆ. ಈ ಮೂಲಕ ಬಡವರು ತಮ್ಮ ಸ್ಥಿತಿಯನ್ನು ಒಪ್ಪಿಕೊಳ್ಳುತ್ತಾ, ಶ್ರೀಮಂತ ವರ್ಗ ಕುರಿತು ಟೀಕಿಸುವುದನ್ನು ತಪ್ಪಿಸಿದೆ. 'ಬಡವ ನೀನು ಮಡಗಿದಂಗೆ ಇರು.' 'ಬಡವನ ಕೋಪ ದವಡೆಗೆ ಮೂಲ'. ಮುಂತಾದ ಎಲ್ಲಾ ಹೇಳಿಕೆಗಳು ಬಡವರು ತಮ್ಮ ಬಡತನವನ್ನು ಒಪ್ಪಿಕೊಳ್ಳುವಂತೆ ಮಾಡುವ ಹುನ್ನಾರವಾಗಿವೆ. ಇವುಗಳ ಮೂಲಕ ಮೇಲ್ವರ್ಗವು ಸಂಪತ್ತನ್ನು ದೋಚುವ ಕಾಯಕವನ್ನು ಮುಂದುವರಿಸುತ್ತಾ ಬಡವರು ತಮ್ಮ ಶೋಷಣೆಯನ್ನು ಸಹಿಸುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ. ಈ ಯಶಸ್ಸಿನ ನಡುವೆಯು ವರ್ಗ ಹೋರಾಟಗಳು ನಡೆದಿವೆ. ಹೀಗೆ ಮೇಲ್ವರ್ಗದವರಿಂದ ಶೋಷಣೆಗೆ ಒಳಗಾಗಿರುವ ಮತ್ತು ಅಲ್ಪಮಟ್ಟಿಗೆ ಪ್ರತಿರೋಧ ತೋರಿರುವ ಹಲವು ಪ್ರಸಂಗಗಳು ಆತ್ಮಕಥೆಗಳಲ್ಲಿ ಕಾಣುತ್ತವೆ. ಆದರೂ ಬಡತನದ ನಿರೂಪಣೆ ಕನ್ನಡದ ಆತ್ಮಕಥೆಗಳಲ್ಲಿ ಬಹುತೇಕ ಪ್ರಕಟಗೊಂಡಿವೆ. ಬಿ.ಎಂ ಪುಟ್ಟಯ್ಯನವರ 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ' ಎಂಬ ಕೃತಿಯಲ್ಲಿನ 'ಬಡತನ: ಆತ್ಮಕಥೆಗಳ ಮೀಟುಗೋಲು' ಎಂಬ ಅಧ್ಯಾಯವು ಅದನ್ನು ಮತ್ತಷ್ಟು ಸಮರ್ಥಿಸುತ್ತಿದ್ದು, ಅದು ವಾಸ್ತವವೂ ಆಗಿದೆ. ಬಡತನವು ಕೆಲವೊಮ್ಮೆ ದ್ವಿರೂಪದಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುತ್ತದೆ. ಬಡವರು ತಮ್ಮ ಬಡತನವನ್ನು ಬಹುತೇಕ ಮರೆಮಾಚಲು ಪ್ರಯತ್ನಿಸಿದರೆ. ಶ್ರೀಮಂತರು ಬಹುತೇಕ ಸರಳ ಬದುಕನ್ನು ಬದುಕುತ್ತಿರುವಂತೆ ತೋರ್ಪಡಿಸುತ್ತಾರೆ. ಪ್ರಸ್ತುತ ಆತ್ಮಕಥೆಗಳನ್ನು ಬರೆದಿರುವ ಆತ್ಮಕಥನಕಾರರ ಬಾಲ್ಯದ ಆರ್ಥಿಕ ಬದುಕು ತಳಮಟ್ಟದಲ್ಲಿದ್ದು, ಆತ್ಮಕಥೆ ಬರೆಯುವಾಗ ಅಲ್ಪಮಟ್ಟಿಗೆ ಸುಧಾರಣೆಯಾಗಿರುವುದನ್ನು ಕಾಣುತ್ತೇವೆ. ಆದರೂ ಬಡತನದ ಹಲವು ಸಂಗತಿಗಳು ಕನ್ನಡದ ಆತ್ಮಕಥೆಗಳಲ್ಲಿ ಕಡ್ಡಾಯವಾಗಿ ಬಂದಿವೆ. ಬಹುಶಃ ಆತ್ಮಕಥೆ

ಪ್ರಕಾರದ ವಿಶಿಷ್ಟತೆಯೂ ಇದಕ್ಕೆ ಕಾರಣವಿರಬಹುದು. ಇದರ ಜೊತೆಗೆ ತನ್ನ ಬದುಕಿನ ಬವಣೆಗಳನ್ನು ಹೇಳಿಕೊಳ್ಳುವ ಸಲುವಾಗಿ ಈ ತರದ ಆತ್ಮಕಥೆಗಳು ರಚನೆಗೊಂಡಿರಬಹುದು.

ಅವಮಾನ ಎನ್ನುವುದು ಇನ್ನೊಬ್ಬರು ಮಾಡಿದಾಗ ಮಾತ್ರ ಆಗುವಂತಹದ್ದಲ್ಲ. ಸನ್ನಿವೇಶ, ಸಂದರ್ಭಗಳು ವ್ಯಕ್ತಿಯ ಸ್ವಾಭಿಮಾನಕ್ಕೆ ಕುಂದು ತರುವಂತಿದ್ದರೆ ಅದನ್ನೂ ಪ್ರಸ್ತುತ ಅಧ್ಯಯನದಲ್ಲಿ ಅವಮಾನವೆಂದು ಪರಿಗಣಿಸಲಾಗುತ್ತದೆ. 'ಭಿತ್ತಿ' 'ಸಂಬೋಳಿ', 'ಮಣೆಗಾರ', 'ಬಿಚ್ಚಿದ ಜೋಳಿಗೆ', 'ಅನುದಿನದ ಅಂತರಗಂಗೆ' ಇನ್ನೂ ಮುಂತಾದ ಆತ್ಮಕಥೆಗಳಲ್ಲಿ ವರ್ಗದ ಕಾರಣಕ್ಕೆ ಅವಮಾನ ಅನುಭವಿಸುವ ಸಂಗತಿಗಳಿವೆ. ಆರ್ಥಿಕತೆ ಹೇಗೆ ಹಲವು ವರ್ಗಗಳಲ್ಲಿ ರಚನೆಯಾಗಿದೆಯೋ ಹಾಗೆಯೇ ಬಡತನದ ಕಾರಣಕ್ಕೆ ಆಗುವಂತಹ ಅವಮಾನಗಳು ಕೂಡ ಹಲವು ರೂಪಗಳಲ್ಲಿವೆ. ವರ್ಗವು ಒಂದು ಸ್ವತಂತ್ರವಾದ ಪರಿಕಲ್ಪನೆಯಲ್ಲ. ಅದು ಜಾತಿ, ಲಿಂಗ ಹಾಗೂ ಇತರೆ ವಿಷಯಗಳೊಂದಿಗೆ ಬೆರೆತುಕೊಂಡಿದೆ. ಅದಕ್ಕಾಗಿಯೇ ಪ್ರಸ್ತುತ ಅಧ್ಯಾಯವನ್ನು ವರ್ಗೀಕರಿಸಿ ವಿಭಿನ್ನ ಉಪಶೀರ್ಷಿಕೆಯಲ್ಲಿ ಅಧ್ಯಯನ ಮಾಡಲಾಗಿದೆ.

**ಅ. ವರ್ಗ, ಹಸಿವು : ಅವಮಾನ ಮತ್ತು ಪ್ರತಿರೋಧ**

ಮೊದಲನೇ ಉಪ ಅಧ್ಯಾಯದಲ್ಲಿ ಬಡತನ ಮತ್ತು ಹಸಿವಿಗೂ ಇರಬಹುದಾದ ಅಂತರ್‌ಸಂಬಂಧವನ್ನು ಕುರಿತು ಚರ್ಚಿಸಲಾಗುತ್ತದೆ. ಕನ್ನಡದ ಆತ್ಮಕಥೆಗಳಲ್ಲಿ ಹಸಿವು ಎನ್ನುವುದು ಅತಿ ಹೆಚ್ಚು ಕಾಡಿದಂತಹ ಸಮಸ್ಯೆಯಾಗಿದೆ. ಕನ್ನಡದ ಆತ್ಮಕಥೆಗಳು ಎಂದರೆ ಒಂದು ರೀತಿಯಲ್ಲಿ ಹಸಿವಿನ ಮೀಮಾಂಸೆ ಕೃತಿಗಳೇ ಆಗಿವೆ. ಮೇಲ್ವರ್ಗವು ಒಂದೆಡೆ ತಾನು ತಿಂದದ್ದನ್ನು ಕರಗಿಸಲು ಪ್ರಯತ್ನಪಡುತ್ತ, ಬೊಜ್ಜು, ಮಧುಮೇಹ ಮುಂತಾದ ಸಮಸ್ಯೆಗಳಿಂದ ಬಳಲುತ್ತಿದ್ದರೆ, ಒಂದೊತ್ತಿನ ಊಟಕ್ಕೂ ಕಷ್ಟಪಡಬೇಕಾದ ಸ್ಥಿತಿಯಲ್ಲಿ ಕೆಳವರ್ಗವಿದೆ. ಸ್ವಾತಂತ್ರ್ಯ ಸಿಕ್ಕಿ ೭೩ ವರ್ಷಗಳಾದರೂ ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ, ಉಳ್ಳವರು ಉಳ್ಳವರಾಗಿಯೇ ಇದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಹಸಿವು ನೀಗಿಸಿಕೊಳ್ಳಲು ಆಗಿರುವ ಹಲವು ಅವಮಾನಗಳನ್ನು ಕುರಿತು ಚರ್ಚಿಸಲಾಗುತ್ತದೆ. ಏಕೆಂದರೆ 'ಹಸಿವು' ದೈಹಿಕ ಲಕ್ಷಣವಾದರೂ ಬಡತನದ ಉತ್ಪನ್ನವೂ ಆಗಿದೆ.

**ಆ. ವರ್ಗ, ಜಾತಿ: ಅವಮಾನ ಮತ್ತು ಪ್ರತಿರೋಧ**

ಜಾತಿ ವ್ಯವಸ್ಥೆಯು ಭಾರತಕ್ಕೆ ಸೀಮಿತವಾದ ಅತಿ ಕ್ರೂರ ವ್ಯವಸ್ಥೆಯಾಗಿದೆ. ಇತರೆ ದೇಶಗಳಲ್ಲಿ ಇದು ಭಿನ್ನ ಸ್ವರೂಪದಲ್ಲಿದ್ದರೂ ಭಾರತದಲ್ಲಿ ಅತಿ ಸೂಕ್ಷ್ಮವಾದ ಸಮಸ್ಯೆಯಾಗಿದೆ. ವರ್ಗ ಮತ್ತು ಜಾತಿಗಳೆರಡೂ ಅಂತರ್‌ಸಂಬಂಧವನ್ನು ಒಳಗೊಂಡಿರುವುದರ ಜೊತೆಗೆ ಶ್ರೇಷ್ಠ–ಕನಿಷ್ಠವೆಂಬ ಶ್ರೇಣೀಕರಣಗಳನ್ನು ಒಳಗೊಂಡಿವೆ. ಕೆಲವು ಜಾತಿಗಳಲ್ಲಿ ವಿನಾಯಿತಿ ರೂಪದಲ್ಲಿ ಶ್ರೀಮಂತರಿದ್ದರೂ ಸಾಮಾನ್ಯವಾಗಿ ಆ ಸಮುದಾಯಗಳಲ್ಲಿ ಬಡವರ ಸಂಖ್ಯೆಯು ಹೆಚ್ಚಾಗಿರುತ್ತದೆ. ಮತ್ತೆ ಕೆಲವು

ಜಾತಿಗಳಲ್ಲಿ ಬಡವರಿದ್ದರೂ ಅವರ ಪ್ರಮಾಣ ಕಡಿಮೆ. ಇದನ್ನು ಇನ್ನೂ ಸ್ಪಷ್ಟೀಕರಿಸಿ ಹೇಳುವುದಾದರೆ 'ಮೇಲ್ಜಾತಿ'ಗಳೆಂದು ಕರೆಯಲಾಗುವ ಸಮುದಾಯಗಳಲ್ಲಿನ ಕೆಲವರಲ್ಲಿಯೂ ಬಡತನ ಹಲವು ಸಮಸ್ಯೆಗಳನ್ನುಂಟು ಮಾಡಿರುತ್ತದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಇವರಿಗೆ ಉತ್ತಮ ಸ್ಥಾನಮಾನವಿದ್ದರೂ ಆರ್ಥಿಕವಾಗಿ ಹಿಂದುಳಿದಿರುವ ಕೆಲವು ಉದಾಹರಣೆಗಳನ್ನು ಕಾಣಬಹುದು. ಸಾಮಾಜಿಕ ಮತ್ತು ಆರ್ಥಿಕವಾಗಿ ಅವಮಾನಕ್ಕೆ ಒಳಗಾಗುವವರಲ್ಲಿ ಅಸ್ಪೃಶ್ಯರು ಮತ್ತು ಮಹಿಳೆಯರ ಪ್ರಮಾಣವೇ ಹೆಚ್ಚಿವೆಯಾದರೂ ಹಿಂದುಳಿದ ಸಮುದಾಯಗಳು ಬಡತನದ ಅವಮಾನಗಳನ್ನು ಅನುಭವಿಸಿವೆ. ಹೀಗೆ ಬಡತನ ಎನ್ನುವುದು ಕೇವಲ ತಳಸಮುದಾಯಗಳಿಗೆ ಮಾತ್ರ ಸೀಮಿತವಾಗದೆ. ಇತರೆ ಸಮುದಾಯಗಳಲ್ಲೂ ಗಂಭೀರ ಸಮಸ್ಯೆಯಾಗಿಯೇ ಉಳಿದಿದೆ. ಎಲ್ಲಾ ಜಾತಿಗಳಲ್ಲಿ ಬಡವರಿದ್ದರೂ ಅವಮಾನ ಮತ್ತು ಪ್ರತಿರೋಧಗಳು ಮಾತ್ರ ಜಾತಿಯಿಂದ ಜಾತಿಗೆ ಭಿನ್ನವಾಗಿರುತ್ತವೆ. ಅಷ್ಟೇ ಅಲ್ಲದೆ ಒಂದೇ ಜಾತಿಯೊಳಗಡೆಯೂ ಹಲವು ತೆರನಾಗಿರುತ್ತವೆ. ಈ ಎಲ್ಲಾ ಕಾರಣಗಳಿಗಾಗಿ ವರ್ಗ ಮತ್ತು ಜಾತಿಯ ನಡುವಿನ ಅಂತರ್‌ಸಂಬಂಧವನ್ನು ಪ್ರತ್ಯೇಕ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

### ಇ. ವರ್ಗ, ಲಿಂಗ: ಅವಮಾನ ಮತ್ತು ಪ್ರತಿರೋಧಗಳು

ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯನ್ನು ತನ್ನ ಹಿಡಿತದಲ್ಲಿಯೇ ಇಟ್ಟುಕೊಳ್ಳುವ ಮನಸ್ಥಿತಿಯನ್ನು ಹೊಂದಿರುತ್ತದೆ. ಕನ್ನಡದ ಆತ್ಮಕಥೆಗಳಲ್ಲಿ ಮಹಿಳೆಯನ್ನು ಹೇಗೆ ಕೇವಲ ಒಂದು ವಸ್ತುವಿನಂತೆ ಕಾಣಲಾಗಿದೆ ಎಂಬುದಕ್ಕೆ ಹಲವು ಆಕರಗಳು ದೊರಕುತ್ತವೆ. ಮಹಿಳೆಯರು ಆರ್ಥಿಕವಾಗಿ ಸಬಲರಿದ್ದರೂ ಪತಿಗೆ ತನ್ನ ದುಡಿಮೆಯನ್ನು ವರ್ಗಾಯಿಸುವ ಮತ್ತು ತನ್ನ ಖರ್ಚಿನ ಆಗು ಹೋಗುಗಳಿಗೆ ಪತಿಯನ್ನೇ ಅವಲಂಬಿಸುವ ಸಂಗತಿಗಳು ಆತ್ಮಕಥೆಗಳಲ್ಲಿವೆ. ಇದು ಒಂದು ತರಹದ ದುಡಿಮೆಯೊಂದಿಗೆ ಕಾಣುವ ಲಿಂಗ ಮತ್ತು ವರ್ಗ ತಾರತಮ್ಯವಾಗಿದೆ. ಮಹಿಳೆಯರ ಆರ್ಥಿಕ ಸ್ಥಿತಿಗತಿಗೆ ಸ್ಪಷ್ಟ ಉದಾಹರಣೆಯೆಂದರೆ, ಮಹಿಳೆಯರ ಮತ್ತು ಪುರುಷರ ಉಡುಪಿನ ಶೈಲಿ. ಪುರುಷರ ಉಡುಪುಗಳಿಗೆ ಜೇಬುಗಳಿದ್ದರೆ ಮಹಿಳೆಯರ ಉಡುಪಿಗೆ ಕಿಸೆ ಇರುವುದಿಲ್ಲ. ಇಲ್ಲಿ ಜೇಬು ವರ್ಗ (ಆರ್ಥಿಕತೆಯ) ಪ್ರಶ್ನೆಯ ಸಂಕೇತವಾಗಿದೆ. ಸಂಪತ್ತಿನ ಹಿಡಿತ ಮತ್ತು ಅದರ ಸ್ವಾಯತ್ತತೆಯು ಪುರುಷರ ಅಂಕೆಯಲ್ಲಿಯೇ ಇರುತ್ತದೆ. ಆದರೆ ಇತ್ತೀಚೆಗೆ ಮಹಿಳೆಯರ ಉಡುಪಿನಲ್ಲಿಯು ಅಲ್ಪಮಟ್ಟಿಗೆ ಜೇಬುಗಳಿವೆ. ಇದು ಮಹಿಳೆಯರು ಕೂಡ ಆರ್ಥಿಕವಾಗಿ ಸಬಲರಾಗುತ್ತಿರುವ ಸಂಕೇತವಾದರೂ ಇದರ ಪ್ರಮಾಣ ಕಡಿಮೆ.

ಮಂಗಳಮುಖಿಯರ ಬಗ್ಗೆ ಸಮಾಜದಲ್ಲಿ ತಪ್ಪು ಭಾವನೆ ಇರುವ ಕಾರಣ ಮಂಗಳಮುಖಿಯರೂ ಸಹ ನ್ಯಾಯವಾಗಿ ಬದುಕುವ ಅವಕಾಶಗಳೆಲ್ಲ ಬಹುತೇಕ ಇಲ್ಲವಾಗಿ ಬಡತನದಿಂದ ಬದುಕುವ ಪರಿಸ್ಥಿತಿ ಆತ್ಮಕಥೆಗಳಲ್ಲಿವೆ. ಮಹಿಳೆ ಮತ್ತು ಮಂಗಳಮುಖಿಯರು ಈ ಆರ್ಥಿಕತೆಯ ಕಾರಣಕ್ಕಾಗಿ ಅವಮಾನ ಅನುಭವಿಸುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು ವರ್ಗ ಮತ್ತು ಮಹಿಳೆ ಎಂಬ

ಅಧ್ಯಾಯವನ್ನು ಮಾಡಲಾಗಿದೆ. ಮಹಿಳೆಯರು ಅನುಭವಿಸುವಂತಹ ಅವಮಾನಗಳನ್ನು ಲಿಂಗದ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ಎಂಬ ಅಧ್ಯಾಯದಲ್ಲಿ ಹೆಚ್ಚು ಚರ್ಚೆ ಮಾಡುತ್ತಿರುವುದರಿಂದ ಈ ಅಧ್ಯಾಯದಲ್ಲಿ ವರ್ಗ ಮತ್ತು ಮಹಿಳೆಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳನ್ನು ಪ್ರಾಸಂಗಿಕವಾಗಿ ಮಾತ್ರ ಚರ್ಚೆ ಮಾಡಲಾಗುವುದು.

**ಈ. ವರ್ಗದ ಇತರೆ ಅವಮಾನ ಮತ್ತು ಪ್ರತಿರೋಧಗಳು**

ಬಡತನದ ಕಾರಣಕ್ಕೆ ಆಗುವಂತಹ ಹಲವು ಅವಮಾನಗಳನ್ನು ಆತ್ಮಕಥೆಗಳಿಂದಲೇ ಉದಾಹರಣೆ ಕೊಡುತ್ತಾ ಅವುಗಳನ್ನು ಚರ್ಚೆಗೆ ಒಳಪಡಿಸಲಾಗುತ್ತದೆ. ಶ್ರೀಮಂತಿಕೆ ಪ್ರತಿಯೊಬ್ಬರಿಗೂ ಆಕರ್ಷಣೀಯವಾದ ಗೌರವವನ್ನು ತಂದುಕೊಡುವ ಸಂಗತಿಯಾದರೆ, ಬಡತನ ಅವಮಾನಗಳನ್ನುಂಟು ಮಾಡುವ ಸಂಗತಿಯಾಗಿದೆ. ಬಡತನವು ಆತ್ಮಕಥೆಗಳಲ್ಲಿ ಹೆಣದ ಮೇಲಿನ ದುಡ್ಡನ್ನು ಪಡೆಯುವುದರ ಮೂಲಕ, ಮಹಿಳೆ ವೇಶ್ಯಾ ವೃತ್ತಿಯನ್ನು ಆಯ್ಕೆ ಮಾಡಬೇಕಾದ ಅನಿವಾರ್ಯತೆಗಳ ಮೂಲಕ ಹೀಗೆ ಹಲವು ಮಾದರಿಗಳಲ್ಲಿ ಅಭಿವ್ಯಕ್ತಿಗೊಂಡಿದೆ.

**ಉ. ಅಭಿವ್ಯಕ್ತಿ ಸ್ವರೂಪ**

ದಮನಿತರಿಗೆ ಬರಹವು ಒಂದು ಬಗೆಯಲ್ಲಿ ತಮ್ಮ ನೋವನ್ನು ಇತರರಿಗೆ ತಿಳಿಸುವ ಮಾಧ್ಯಮವು ಹೌದು, ಪ್ರತಿರೋಧದ ಸಂಗತಿಯೂ ಹೌದು. ಇವೆರಡೂ ಕಾರಣಗಳು ಆತ್ಮಕಥೆಗಳ ಅಭಿವ್ಯಕ್ತಿಯನ್ನು ಭಿನ್ನವಾಗಿಸುವ ಸಾಧ್ಯತೆಗಳಿವೆ. ಅವುಗಳನ್ನು ಗುರುತಿಸುವ ಕೆಲಸವನ್ನು ಇಲ್ಲಿ ಮಾಡಲಾಗುವುದು.

**೫.೧. ವರ್ಗ, ಹಸಿವು: ಅವಮಾನ ಮತ್ತು ಪ್ರತಿರೋಧಗಳು**

ಪ್ರಸ್ತಾವನೆಯಲ್ಲಿ ಹೇಳಿದಂತೆ ವರ್ಗ ಮತ್ತು ಹಸಿವು ಒಂದಕ್ಕೊಂದು ಸಂಬಂಧವನ್ನು ಒಳಗೊಂಡಿರುವಂತವುಗಳಾಗಿವೆ. ಹಸಿವು ಜೈವಿಕ ಉತ್ಪನ್ನವಾದರೂ, ಬಡತನ ಅದರ ತೀವ್ರತೆಯನ್ನು ಹೆಚ್ಚಿಸುತ್ತದೆ. ಕೆಳವರ್ಗವು ಆರ್ಥಿಕವಾಗಿ ಹಿಂದುಳಿದಿರುವ ಕಾರಣ ಪ್ರತಿದಿನ ತನ್ನ ಹಸಿವನ್ನು ನೀಗಿಸಿಕೊಳ್ಳಲು ಪ್ರಯತ್ನ ಪಡುತ್ತಿರುತ್ತದೆ. ಕನ್ನಡದ ಬಹುತೇಕ ಆತ್ಮಕಥೆಗಳಲ್ಲಿ ಇಂತಹ ಹಲವು ಪ್ರಸಂಗಗಳಿವೆ. ಹಸಿವು ಈ ಆತ್ಮಕಥೆಗಳ ಸ್ಥಾಯಿಭಾವವಾಗಿದೆ. ಹಸಿವನ್ನು ನೀಗಿಸಿಕೊಳ್ಳಲು ಅನ್ಯ ಮಾರ್ಗವಿಲ್ಲದೆ. ಕೆಲವೊಂದು ಬಾರಿ ಭಿಕ್ಷೆ ಬೇಡುವ ಪ್ರಸಂಗಗಳು ಆತ್ಮಕಥೆಗಳಲ್ಲಿವೆ. ಹಸಿವನ್ನು ನೀಗಿಸಿಕೊಳ್ಳಲು ಅಗತ್ಯವಾದ ಭೂಮಿ, ಇನ್ನಿತರ ಸಂಪನ್ಮೂಲಗಳ ಕೊರತೆ ಇರುವುದು. ಹೀಗೆ ಕೆಲವು ಆರ್ಥಿಕ ಕಾರಣಗಳಿಗೆ ಹಸಿವು ಆತ್ಮಕಥನಕಾರರಿಗೆ ಆಳವಾಗಿ ಕಾಡಿರುವ ಸಂಗತಿಯಾಗಿದೆ. ಈ ಕಾರಣಗಳಿಗಾಗಿ ಹಸಿವು ಆತ್ಮಕಥೆಗಳಲ್ಲಿ ಮತ್ತೆ ಮತ್ತೆ ಅಭಿವ್ಯಕ್ತಿಗೊಂಡಿದೆ. ಕನ್ನಡದ ಆತ್ಮಕಥೆಗಳಲ್ಲಿನ ಅಂತಹ ಹಸಿವಿನ ಚಿತ್ರಣಗಳನ್ನು ಈ ಕೆಳಗಿನಂತೆ ಅನುಕ್ರಮವಾಗಿ ನೋಡಬಹುದಾಗಿದೆ.

೫.೧.೧. ಅವ್ಯವಸ್ಥೆ, ಹಸಿವು ಮತ್ತು ಅವಮಾನಗಳು: ವ್ಯವಸ್ಥೆ ಎಂದರೆ ಎಲ್ಲವೂ ಸಮಾನವಾಗಿ ಮತ್ತು ಸರಿಯಾಗಿ ಜೋಡಿಸಲ್ಪಟ್ಟಿರುವುದು ಎಂದರ್ಥ. ಭಾರತೀಯ ಸಮಾಜವು ಒಂದು ವ್ಯವಸ್ಥೆಯಲ್ಲ ಏಕೆಂದರೆ ಇಲ್ಲಿ ಅಸಮಾನತೆ ಸಾಮಾಜಿಕ ಸಂರಚನೆಯ ಮೂಲ ಬೇರಾಗಿರುವುದರಿಂದ ಇದೊಂದು ಅವ್ಯವಸ್ಥೆಯಾಗಿದೆ. ಈ ಆರ್ಥಿಕ ಅವ್ಯವಸ್ಥೆಯ ಕಾರಣಕ್ಕಾಗಿ ಆತ್ಮಕಥನಕಾರರು ಅವಮಾನಗಳನ್ನು ಅನುಭವಿಸಿದ್ದೂ, ಅವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ಅ. ಹಸಿವು ಮತ್ತು ಸಾವು: 'ಉರಿ ಬರಲಿ ಸಿರಿ ಬರಲಿ'ಯಲ್ಲಿ ಮಕ್ಕಳೊಂದಿಗೆ ಅವರ ತಾಯಿ ಪಟ್ಟ ಪಾಡನ್ನು ಆರ್.ಸಿ ಹಿರೇಮಠ ಅವರು ಹೀಗೆ ಚಿತ್ರಿಸಿದ್ದಾರೆ. "ಆಗ ನಾನು ೬ ವರ್ಷಗಳ ಹಾಲುಗಲ್ಲದ ಹಸುಳೆ ಮೂರು ದಿವಸ ಊಟವಿಲ್ಲದೆ. ಹೊಟ್ಟೆಗೆ ಮೊಳಕಾಲು ಹಚ್ಚಿಕೊಂಡು ಹಾಸಿಗೆಯಲ್ಲಿ ಮಲಗಿದ್ದೆವು. ಒಂದು ರಾತ್ರಿ, ತಾಯಿ ನಮ್ಮನ್ನು ಒಮ್ಮೆಲೆ ಹಾಸಿಗೆಯಿಂದ ಎಬ್ಬಿಸಿ ಕರೆದುಕೊಂಡು ಹೋಗುವಾಗ ಹೊಸ್ತಿಲಿಗೆ ನಮಸ್ಕರಿಸಿದಳು. ಕಣ್ಣೀರಿನ ಹನಿಗಳಿಂದ ಪಾದುಕೆಗಳಿಗೆ ಅಭಿಷೇಕ ಮಾಡಿದಳು"[೧] ಎನ್ನುವ ಸನ್ನಿವೇಶವಿದೆ.

ಆ. ಶಾಲಾ ಸನ್ನಿವೇಶಗಳು ಮತ್ತು ಹಸಿವು: 'ಉಚಲ್ಯಾ'ದಲ್ಲಿ "ಉಳಿದವರು ಉಣ್ಣುವಾಗ ನಾನು ಪುಸ್ತಕ ಹಿಡಿದು ಮೂಲೆಯಲ್ಲಿ ಕೂತಿರುತ್ತಿದ್ದೆ. ಹೊಟ್ಟೆಯಲ್ಲಿ ಬೆಂಕಿ ಬಿದ್ದಿರುತ್ತಿತ್ತು. ನನ್ನ ಬಡತನ ಕಂಡು ಕೆರಳುತ್ತಿದ್ದೆ. ಹೀಗೆ ಎಷ್ಟೋ ದಿನ ಕಳೆಯಿತು"[೨] ಎಂದು ಬರುತ್ತದೆ.

'ಸಂಬೋಳಿ'ಯಲ್ಲಿ ಲಕ್ಷ್ಮಣ್ ಅವರು ಮಧ್ಯಾಹ್ನ ತನ್ನ ಇತರ ಗೆಳೆಯರಂತೆ ಶಾಲೆಯಲ್ಲಿ ಊಟ ಮಾಡಲು ಊಟವಿಲ್ಲದೆ. ತರಗತಿಯೊಳಗಡೆಯೇ ಕೂರುವ ಸನ್ನಿವೇಶ ಹೀಗಿದೆ. "ನನ್ತರ್ಗತಿಯ ಸಹಪಾಠಿ ರಾಘವೇಂದ್ರನ ಊಟದ ಡಬ್ಬಿಯನ್ನು ಬೇರೆಯವರು ಮುಟ್ಟಿದರೆ ಅವನು ಊಟಾನ ಮಾಡುತ್ತಿರಲಿಲ್ಲ. ತಕ್ಷಣ ನಮ್ಮಗಳ ಕಣ್ಣೇದುರ್ಗೆನೇ ಬಿಸಾಕ್ಬುಡ್ತಿದ್ದ! ಆ ಅನ್ನ ನೋಡಿದಾಗ್ಲೆಲ್ಲಾ "ದೇವ್ರೆ ಇದು ನನ್ಗೆ ಸಿಕ್ಕಿದ್ರೆ ಹೊಟ್ಟೆ ತುಂಬಿಸ್ಕಂಬೋದಾಗಿತಲ್ಲಾ ಅಂದ್ಕಂತಿದೆ"[೩] ಎಂದು ಲೇಖಕರು ಬರೆದುಕೊಂಡಿದ್ದಾರೆ. ಮೇಲ್ಕಂಡ ಮೂರೂ ಸನ್ನಿವೇಶಗಳಲ್ಲಿ ಬಡತನ ಮತ್ತು ಹಸಿವು ಮುಖ್ಯವಾಗಿ ಕಾಣುವ ಸಂಗತಿಗಳಾಗಿವೆ. ಆರ್.ಸಿ. ಹಿರೇಮಠ ಹಾಗೂ ಲಕ್ಷ್ಮಣ ಗಾಯಕವಾಡ ಹಾಗೂ ಲಕ್ಷ್ಮಣ್ ಅವರು ಹೀಗೆ ಹಸಿವಿನಿಂದ ಬಳಲುತ್ತಿರುವ ಬಡವರ ಪ್ರತಿನಿಧಿಯಾಗಿದ್ದಾರೆ. ಮೂರೂ ಸನ್ನಿವೇಶಗಳಲ್ಲಿ 'ಹೊಟ್ಟೆ' ಎನ್ನುವ ಪದವು ಪುನರಾವರ್ತನೆಗೊಂಡಿದೆ. ಈ ಹೊಟ್ಟೆ ಹಸಿವಿನ ಸಂಕೇತವಾಗಿದೆ. ಆತ್ಮಕಥನಕಾರರು ಬಡತನದ ಕಾರಣಕ್ಕೆ ಹಸಿವಿನ ಚೀಲವಾದ ಹೊಟ್ಟೆಯನ್ನು ತುಂಬಿಸಿಕೊಳ್ಳಲು ಹಪಹಪಿಸುವ ಸಂದರ್ಭದಲ್ಲಿ ಹಿರೇಮಠರಲ್ಲಿ ಮತ್ತು ಲಕ್ಷಣ್ ಅವರಲ್ಲಿ ಅಸಹಾಯಕತೆ ಮಡುಗಟ್ಟಿದ್ದರೆ, ಗಾಯಕವಾಡರಲ್ಲಿ ಆಕ್ರೋಶವಿದೆ. ಮೂರನೆಯ ಸನ್ನಿವೇಶವು ಬಸವಣ್ಣನವರ "ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ" ಎಂಬ ವಚನವನ್ನು ನೆನಪಿಸುತ್ತದೆ. ಇಲ್ಲಿ ಬಸವಣ್ಣ ಬಳಸಿರುವ 'ಸಿರಿಗರ' ಎಂಬ ಪದವು ಸಿರಿಯು ಶ್ರೀಮಂತಿಕೆ ಎಂಬ

ಅರ್ಥವನ್ನೊಳಗೊಂಡರೆ, ಗರ ಎಂಬುದು ವಿಷ, ತಟಸ್ಥ ಎಂಬರ್ಥವನ್ನೊಳಗೊಂಡಿದೆ. ಇದರರ್ಥ ಶ್ರೀಮಂತಿಕೆಯೂ ಸಮಾಜದ ವಿಷವೂ ಹೌದು. ಹಾಗೂ ಅದು ಇತರರ ನೋವನ್ನು ಅರ್ಥ ಮಾಡಿಕೊಳ್ಳದ ತಟಸ್ಥವಾದದ್ದೂ ಹೌದು. ಮತ್ತೊಬ್ಬರು ಕೇವಲ ಡಬ್ಬಿ ಮುಟ್ಟಿದ್ದಕ್ಕಾಗಿ ಇಡೀ ಅನ್ನವನ್ನೇ ಚೆಲ್ಲುವ ಲಕ್ಷ್ಮಣ್ ಅವರ ಗೆಳೆಯನ ವರ್ತನೆ. ಇತರರ ನೋವನ್ನು ಅರ್ಥ ಮಾಡಿಕೊಳ್ಳದ ಸಿರಿಗರದ ಗುಣವಾಗಿದೆ. ಇದನ್ನು ಸಣ್ಣ ಮಕ್ಕಳ ಹಠ ಎಂದು ಸರಳೀಕರಿಸುವಂತಿಲ್ಲ. ಇದು ಮೇಲ್ವರ್ಗವು ಹೊಂದಿರಬಹುದಾದ ದಬ್ಬಾಳಿಕೆಯ ಪ್ರಭಾವವಾಗಿದೆ. ಇತರರಿಗೆ ಅನ್ನವೇ ಇಲ್ಲ ಎಂಬ ಯಾವ ಸಹಾನುಭೂತಿಯೂ ಗೆಳೆಯನಿಗೆ ಇಲ್ಲವಾಗಿರುವುದು ಸಂವೇದನಾರಾಹಿತ್ಯದ ಸಂಕೇತವಾಗಿದ್ದರೆ, ಬಿದ್ದ ಆಹಾರವನ್ನೇ ಲೇಖಕರು ತಿನ್ನಲು ಅಪೇಕ್ಷಿಪಡುವುದು ಬಡತನ ಮತ್ತು ಹಸಿವು ಉಂಟುಮಾಡುವ ಭೀಕರತೆಗಳನ್ನು ಸೂಚಿಸುತ್ತದೆ. ಇಂತಹ ಭೀಕರತೆಗಳನ್ನು ಆತ್ಮಕಥೆಗಳು ವಿಷಾದದ ಧಾಟಿಯಲ್ಲಿ ಕಾಣಿಸಿವೆ.

**೫.೧.೨. ಬಡತನ, ಹಸಿವು, ಕಳ್ಳತನ ಮತ್ತು ಅವಮಾನ:**

ಅ. ಬಡತನ ಮತ್ತು ಹಸಿವಿನ ಒತ್ತಡಗಳು ಮನುಷ್ಯನನ್ನು ಅನ್ಯದಾರಿಯನ್ನು ಹಿಡಿಯುವಂತೆ ಮಾಡುತ್ತವೆ. ಈ ಕೆಳಗೆ ಅಂತಹ ಹಲವು ಸಂಗತಿಗಳನ್ನು ಚರ್ಚಿಸಲಾಗಿದೆ. ತುಂಬಾಡಿ ರಾಮಯ್ಯ ಅವರ 'ಮಣೆಗಾರ' ಆತ್ಮಕಥೆಯಲ್ಲಿನ ಒಂದು ಪ್ರಸಂಗ ಹೀಗಿದೆ. "ಕೊರಟಗೆರೆಯಿಂದ ನಾಲ್ಕು ಗಂಟೆಗೇ ಸ್ಕೂಲು ಮುಗಿಸಿಕೊಂಡು ಮನೆಗೆ ಬಂದಿದ್ದೆ. ಬಂದವನೇ ಹಿಟ್ಟಿನ ಸೋರೆ ನೋಡಿದೆ. ಖಾಲಿ ಕಂಡಿತು. ಹೊಟ್ಟೆ ತಕತಕ ಅಂತಿತ್ತು. ನಮ್ಮ ಹಟ್ಟಿಯ ಸ್ವಲ್ಪ ದೂರದಲ್ಲೇ ವಡ್ಡರ ವೆಂಕಟಪ್ಪನ ಹೊಲ. ಅವರ ಹೊಲ ಸ್ವಲ್ಪ ತಗ್ಗಿನಲ್ಲಿದ್ದುದ್ದರಿಂದ ಹೊಲದಲ್ಲಿ ಕೂತರೆ ಯಾರಿಗೂ ಕಾಣಿಸುತ್ತಿರಲಿಲ್ಲ. ಅವರ ಹೊಲದ ಕೊನೆ ಸೀಳಿನಲ್ಲಿ ಕುಳಿತುಕೊಂಡು ಗಿಡದಲ್ಲಿದ್ದ ಕಡ್ಲೆಕಾಯನ್ನು ಒಂದೊಂದೆ ತೆಗೆದು ತಿನ್ನಲು ಮುಂದಾದೆ. ಆಗ ನನಗಿದ್ದ ಹಸಿವು ಸುತ್ತಲಿದ್ದುದನೆಲ್ಲಾ ಮರೆಸಿತ್ತು. ಬಳ್ಳಿ ಗಿಡವಾದ್ದರಿಂದ ಗಿಡ ಮುರಿಯದೆ ಕಡ್ಲೆಕಾಯಿ ಬಿಡಿಸಿ ತಿಂದು, ಬೇರನ್ನು ಮೊದಲಿನಂತೆ ನೆಡುವ ಯೋಚನೆ ಮಾಡಿ. ಹೀಗೆ ನಾಲ್ಕೈದು ಗಿಡ ಬಿಡಿಸಿ ತಿಂದಿರಬೇಕು........ಅಲ್ಲೇ ಇದ್ದ ವಡ್ಡರ ವೆಂಕಟಪ್ಪ ಹೊಲೇರ ಮುದ್ದ ಹನುಮಪ್ಪನವರ ಬಳಿ ಎಳೆದುಕೊಂಡು ಹೋಗಿ ಹೀನಮಾನವಾಗಿ ಬೈದನು."[೪]

ಆ. ಹಸಿವನ್ನು ಕುರಿತು 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಲ್ಲಿ ಮಾಲಗತ್ತಿಯವರು "ಬೆಳಗು ಹೊಟ್ಟೆಗಿಲ್ಲದೆ ಶಾಲೆಗೆ ಹೋಗುವುದು. ಎಷ್ಟೋ ಬಾರಿ ಕಣ್ಣಿಗೆ ಬವಳಿ ಬಂದು ರಸ್ತೆಯಲ್ಲಿಯೇ ಬಿದ್ದದ್ದೂ ಇದೆ......"[೫] ಎಂದು ಬರೆದುಕೊಳ್ಳುತ್ತಾರೆ. ಜೊತೆಗೆ ಹಸಿವನ್ನು ತೀರಿಸಿಕೊಳ್ಳುವ ಸಲುವಾಗಿ ಹತ್ತಿಯನ್ನು ಕದಿಯಲು ಹೋದಾಗ ಸಿಕ್ಕಿಕೊಂಡ ಕಾರಣ ಮಾಲಿಕನಿಂದ ಹೀನಾಯವಾಗಿ ಹೊಡೆಸಿಕೊಳ್ಳುತ್ತಾರೆ. ಹೀಗೆ ಲೇಖಕರ ಮೇಲೆ ಹಲ್ಲೆ ಮಾಡಿದ ಮಾಲಿಕನು "ಯ್ಯೋ ಬಿಡ್ರಿ

ಹೊಡಿತನ ಹೊಡ್ದ ಮತ್ತ ಎಳ್ದ ಒಯ್ಯಿತ್ತೀರೆಲ್ಲಾ'[೬] ಎಂದು ಹೆಣ್ಣು ಮಕ್ಕಳು ಹೇಳಿದರು, ಬಿಡದೆ 'ನಿಮ್ಮ ಹುಟ್ಟು ಗುಣಾ ಹ್ಯಾಂಗ ಬಿಟ್ಟೀರಿ?.....ದನದ ಚರ್ಮಾ ಸುಲ್ದು ತೆಗ್ದೆಂಗ ನಿಮ್ಮಾ ಚರ್ಮಾ ಸುಲ್ದು ತಗೀಬೇಕು, ಅಂದ್ರೆ ಬಿಡ್ತೀರಿ......."[೭] ಎಂದು ನಿಂದಿಸುವ ಸನ್ನಿವೇಶವಿದೆ.

ಇ. 'ಉಚಲ್ಯಾ' ಆತ್ಮಕಥೆಯಲ್ಲಿ ಲಕ್ಷ್ಮಣ ಗಾಯಕವಾಡ ಅವರು ಶಾಲೆಗೆ ಹೋದಾಗ ಅವರನ್ನು ಕಂಡವರು ಮತ್ತು ಶಾಲಾ ಮಕ್ಕಳು "ಕಳ್ಳ ಬಂದ್ನಪೋ ಕಳ್ಳ"[೮] ಎಂದು ಹಂಗಿಸುವ ಸನ್ನಿವೇಶವಿದೆ. ಇದು ಅತ್ಯಂತ ಹಿಂದುಳಿದ ತಳಸಮುದಾಯಕ್ಕೆ ಈ ಸಮಾಜವೇ ಸೃಷ್ಟಿಸಿದ ಮತ್ತು ಆರೋಪಿಸಿದ ಸಂಗತಿಯಾಗಿದೆ. ಮೇಲ್ಕಂಡ 'ಮಣೆಗಾರ'ದ ಕಡಲೆ 'ಕದಿ'ಯಲು ಹೋದ ಪ್ರಸಂಗ, 'ಗೌರ್ಮೆಂಟ್ ಬ್ರಾಹ್ಮಣ'ದ ಹತ್ತಿ ಕದ್ದು ಹೊದೆ ತಿಂದದ್ದಾಗಲಿ, 'ಉಚಲ್ಯಾ'ದ ಹಸಿವಿಗೆ ಪರಿತಪಿಸುವುದಾಗಲಿ ಸಮಾಜದಲ್ಲಿ 'ಕಳ್ಳತನ' ಎಂದೆನಿಸಿಕೊಳ್ಳುತ್ತವೆ. ಭ್ರಷ್ಟರು ಕಳ್ಳರಾಗದೆ ಬಡವರು ತುತ್ತಿನ ಚೀಲ ತುಂಬಿಸಿಕೊಳ್ಳುವುದಕ್ಕಾಗಿ ಹತ್ತಿ ಕದ್ದವರು ಕಳ್ಳರು ಎನಿಕೊಂಡಿರುವುದು ಸಾಮಾಜಿಕ ವ್ಯವಸ್ಥೆಯ ದುರಂತವು ಹೌದು. ಹಸಿವು ಮತ್ತು ಬಡತನಗಳೆರಡು ಒಂದಕ್ಕೊಂದು ಆಂತರಿಕ ಸಂಬಂಧಗಳನ್ನು ಹೊಂದಿದ್ದು, ಒಂದು ಮತ್ತೊಂದರ ಕಾರಣ ಮತ್ತು ಪರಿಣಾಮ ಆಗಿರುತ್ತದೆ. ಮೇಲಿನ ಎಲ್ಲಾ ಪ್ರಸಂಗಗಳು ಆತ್ಮಕಥನಕಾರರು ಹಸಿವು ನೀಗಿಸಿಕೊಳ್ಳಲು ಪ್ರಯತ್ನಿಸಿದ ಬಗೆಯನ್ನು ಭಾಷಿಕವಾಗಿ ಕಟ್ಟಿಕೊಟ್ಟಿವೆ. ಮೇಲೆ ಉಲ್ಲೇಖಿಸಿದ ಎಲ್ಲಾ ಆತ್ಮಕಥೆಗಳು ಚಡಪಡಿಕೆ ಜೊತೆಗೆ ತಮ್ಮ ಸಮುದಾಯಕ್ಕೆ ಅಂಟಿರುವ (ನಿಮ್ಮ ಹುಟ್ಟು ಗುಣಾ, ಕಳ್ಳ ಬಂದ್ನಪೋ) ಆರೋಪಗಳ ಹಿಂದಿರುವ ವಾಸ್ತವತೆಗಳನ್ನು (ಬಡತನ, ಹಸಿವು) ಓದುಗರಿಗೆ ತೆರೆದಿಡುವ ತವಕವನ್ನು ಹೊಂದಿವೆ.

**೫.೧.೩.** ಬಾಲ್ಯ ಮತ್ತು ಪ್ರತಿರೋಧ: ಶೋಷಿತ ಬದುಕಿಗೆ ಸಂಬಂಧಿಸಿದಂತೆ ಆತ್ಮಕಥನಕಾರರ ಬಾಲ್ಯವು, ಅವಮಾನಿಸುವ ವ್ಯವಸ್ಥೆಗೆ ಅಸಹಾಯಕ ಪ್ರತಿಕ್ರಿಯೆ ನೀಡುವುದಕ್ಕಷ್ಟೇ ಸೀಮಿತವಾಗಿರುತ್ತದೆ. ಈ ಕೆಳಗಿನ ಉದಾಹರಣೆ ಮೂಲಕ ಅದನ್ನು ಸ್ಪಷ್ಟಪಡಿಸಿಕೊಳ್ಳಬಹುದು. 'ಸಂಬೋಳಿ' ಆತ್ಮಕಥೆಯಲ್ಲಿ ಹುಣಿಸಿ ಹಣ್ಣು ತಿಂದ್ದಿದ್ದಕ್ಕಾಗಿ ಅವಮಾನಕ್ಕೆ ಒಳಗಾದ ಲಕ್ಷ್ಮಣ್ ಮತ್ತು ಗೆಳೆಯರು ಒಗ್ಗಟ್ಟಾಗಿ ಸೇರಿ ಅವಮಾನಿಸಿದ ನಾರಾಯ್ಣಿಯನ್ನೇ ಕುರಿತು ಶಿಳ್ಳೆ ಹೊಡೆಯುವುದು. ಇದು ಮಕ್ಕಳು ತಮ್ಮ ಬಾಲ್ಯದಲ್ಲಿಯೇ ಮೇಲ್ವರ್ಗದವರಿಗೆ ತೋರುವ ಅಸಹಾಯಕ ಪ್ರತಿರೋಧವಾಗಿ ಕಾಣುತ್ತದೆ. ಅವಮಾನಗಳಿಂದ ನೊಂದ ಸಮೂಹ ಶೋಷಕ ವ್ಯವಸ್ಥೆಯನ್ನು ಪ್ರಶ್ನಿಸಲಾಗದೆ ಶಿಳ್ಳೆ ಹೊಡೆಯುವುದು ಮಾನಸಿಕ ವೇದನೆಗಳಿಂದ ಹೊರ ಬರುವುದರ ಸಂಕೇತವಾಗಿರುವುದನ್ನು ಆತ್ಮಕಥೆಯಲ್ಲಿ ಗುರುತಿಸಬಹುದು.

**೫.೧.೪.** ಸಂಘಟನಾತ್ಮಕ ಪ್ರತಿರೋಧ: ದಮನಿತ ಸಮುದಾಯವು ಶಿಕ್ಷಣ ಪಡೆದು ಸಂಘಟನೆಗೊಂಡ ಕಾರಣ ಅವಮಾನಗಳನ್ನು ಸಹಿಸದೆ ಪ್ರತಿರೋಧಿಸುವುದಕ್ಕೆ ತೆರೆದುಕೊಂಡಿತ್ತು. ಲಕ್ಷ್ಮಣ ಗಾಯಕವಾಡ ಅವರ 'ಉಚಲ್ಯಾ'ದಲ್ಲಿ ಅಂತಹ ಪ್ರತಿರೋಧವನ್ನು ಮುಂದಿನ ಸನ್ನಿವೇಶದಲ್ಲಿ ಗುರುತಿಸಬಹುದು.

“ನಮ್ಮ ಮೇಲಿನ ಶೋಷಣೆಯನ್ನು ವಿರೋಧಿಸಿ ಕಾರ್ಮಿಕರೆಲ್ಲ ಪ್ರಚಂಡ ಒಗ್ಗಟ್ಟಾಗಿ ಸಂಪಿನಲ್ಲಿ ಭಾಗವಹಿಸಿದೆವು. ಹದಿನೈದು ದಿನಗಳವರೆಗೆ ಸತತವಾಗಿ ಸಂಪು ಮುಂದುವರೆಯಿತು...ಕಾರ್ಮಿಕರ ಸಂಪು ಮುರಿಯುವ ಎಲ್ಲ ಪ್ರಯತ್ನ ನಡೆಯಿತು... ಮತ್ತಷ್ಟು ಕಾರ್ಮಿಕರು ಉಪವಾಸ ಸತ್ಯಾಗ್ರಹ ಆರಂಭಿಸುವಂತೆ ನಾನು ಕಾರ್ಮಿಕರಿಗೆ ಸೂಚಿಸಿದೆ.......ಶಿವಾಜಿ ಪಾಟೀಲ ತುಂಬಾ ಧಾಡಸಿ ಮನುಷ್ಯ; ಅವನು ‘ಯಾರಿಗಾದರೂ ಹೆಚ್ಚು ಕಡಿಮೆ ಆತ ಅಂದರ ನಾವು ನಿಮ್ಮನ್ನು ಬಿಡಂಗಿಲ್ಲ.’ ಎಂದು ಮೇನೇಜರಿಗೆ ಎಚ್ಚರಿಕೆ ನೀಡಿದ. ಸಾವಿರಾರು ಕಾರ್ಮಿಕರು ಮೇನೇಜರನ ಮನೆಗೆ ಕೆರಳಿ ಭೇಟಿ ಕೊಡಲಾರಂಭಿಸಿದರು. ನಮ್ಮನ್ನು ಭೆಟ್ಟಿಯಾಗಲು ಸಾವಿರಾರು ಕಾರ್ಮಿಕರು ಹೆಂಡಂದಿರು, ಮಕ್ಕಳು ಬರುತ್ತಿದ್ದರು. ಸತ್ತರೂ ಅಡ್ಡಿಯಿಲ್ಲ. ಬೇಡಿಕೆ ಈಡೇರುವವರೆಗೆ ಸಂಪು ನಿಲ್ಲಿಸಬಾರದೆಂದು ನಿರ್ಧರಿಸಿದೆ. ಉಪವಾಸ ಬಿಡುವಂತೆ ಬಹಳ ಜನ ಹೇಳುತ್ತಿದ್ದರು. ಅಂತೂ ಕೊನೆಗೆ ಹತ್ತನೇ ದಿನ ಮೇನೇಜರ ನಮ್ಮ ಬೇಡಿಕೆ ಒಪ್ಪಿಕೊಂಡ” ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಇಲ್ಲಿ ಅವಮಾನಗಳನ್ನು ಸಹಿಸದೆ ಸಂಘಟನಾತ್ಮಕವಾಗಿ ಪ್ರತಿರೋಧಿಸುವುದನ್ನು ಕಾಣಬಹುದಾಗಿದೆ. ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಅವಮಾನಗಳನ್ನು ಸಹಿಸುವುದೇ ಹೆಚ್ಚಿನ ಪ್ರಮಾಣದಲ್ಲಿದ್ದರೂ, ಸ್ವಾತಂತ್ರ್ಯ ಸಿಕ್ಕ ನಂತರ ದಮನಿತರು ಶಿಕ್ಷಣ ಪಡೆದು, ವೈಚಾರಿಕ ಬದುಕಿಗೆ ತೆರೆದುಕೊಂಡ ಕಾರಣ ಅವಮಾನಗಳನ್ನು ಪ್ರತಿರೋಧಿಸುವುದು ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ವೈಚಾರಿಕ ಪ್ರಜ್ಞೆಯ ಲಕ್ಷ್ಮಣ ಗಾಯಕವಾಡ ಹಾಗೂ ಇತರೆ ಕಾರ್ಮಿಕರು ಸೇರಿ ಸಂಘಟಕರಾಗಿ ಹೋರಾಟ ಮಾಡಿ ಯಶಸ್ವಿಯಾಗುತ್ತಾರೆ. ‘ಸಂಪು’ ಕೂರುವ ಪರಂಪರಾಗತ ಹೋರಾಟದ ವಿಧಾನ ಮತ್ತು ಬದ್ಧತೆಯು ಇಲ್ಲಿ ಗೆಲುವಿಗೆ ಕಾರಣವಾಗಿದೆ. ಇಂತಹ ಗೆಲುವಿನ ಪ್ರತಿರೋಧಗಳನ್ನು ‘ಊರುಕೇರಿ’, ‘ಸಂಬೋಳಿ’ ಆತ್ಮಕಥೆಗಳಲ್ಲೂ ಕಾಣಬಹುದಾಗಿದೆ.

### ೫.೨. ವರ್ಗ, ಜಾತಿ: ಅವಮಾನ ಮತ್ತು ಪ್ರತಿರೋಧಗಳು

ವರ್ಗ ಮತ್ತು ಜಾತಿ ಭಾರತ ದೇಶದಲ್ಲಿ ಒಂದರೊಳಗೊಂದು ಅವಿಭಜಿತಗೊಂಡಿವೆ. ಸಂಪತ್ತಿನ ಅಸಮಾನ ಹಂಚಿಕೆಯು ವರ್ಗ ಭೇದವನ್ನು ಹುಟ್ಟು ಹಾಕಿದೆ. ಈ ಸಂಪತ್ತು ಜಾತಿಗಳಲ್ಲೂ ಅಸಮಾನವಾಗಿ ಹಂಚಿಕೆಯಾಗಿದೆ. ಹಲವು ಸಮುದಾಯಗಳಿರುವ ಈ ಸಮಾಜದಲ್ಲಿ ಲಭ್ಯವಿರುವ ಸಂಪತ್ತು ಕೆಲವರಿಗೆ ಮಾತ್ರ ಸೇರಬೇಕು ಎನ್ನುವುದಾದರೆ, ಉಳಿದ ಸಮುದಾಯಗಳು ಅದನ್ನು ಪಡೆಯದಂತೆ ಹಾಗೂ ಅದನ್ನು ಅವರು ಬಯಸದಂತೆ ಮಾಡಬೇಕು. ಈ ಕಾರಣಕ್ಕಾಗಿ ಅವರನ್ನು ಕೇವಲ ದೈಹಿಕವಾಗಿ ದಂಡಿಸಲು ಬರುವುದಿಲ್ಲ. ಏಕೆಂದರೆ ಅವರು ದೈಹಿಕವಾಗಿ ಬಲಾಢ್ಯರು, ಹಾಗಾಗಿ ಅವರನ್ನು ಆ ಸಂಪತ್ತು ತೆಗೆದುಕೊಳ್ಳಲು ಅನರ್ಹರು ಎಂದು ಪುರೋಹಿತಶಾಹಿಗಳು ನಂಬಿಸಿದರು. ಇದಕ್ಕೆ ಪುರಾಣ, ವೇದಗಳ ಸಹಾಯ ಪಡೆದುಕೊಂಡು ಮತ್ತು ತಮಗೆ ಬೇಕಾದಂತೆ ಬರೆದುಕೊಂಡರು. ಶಕ್ತಿಯಿಂದ ಆಗದಿದ್ದನ್ನು ಯುಕ್ತಿಯಿಂದ ಮಾಡಿದರು.

ವರ್ಣ ವ್ಯವಸ್ಥೆಯು ಸೃಷ್ಟಿಯಾಗಿದ್ದೇ ಹೀಗೆ. ಅಮಾಯಕರಾದ ಜನ ಅವರ ಕುತಂತ್ರವನ್ನು ಅರಿಯದೆ ಅವರು ಹೇಳಿದ್ದನ್ನು ನಂಬಿದರು ಮತ್ತು ಅನುಸರಿಸಿದರು. ಹೀಗೆ ಜಾತಿ ಮತ್ತು ಬಡತನವು ಸೃಷ್ಟಿಯಾಯಿತು. ಇದಕ್ಕೆ ಇನ್ನೊಂದು ಆಯಾಮವೂ ಇದೆ. ಈ ವರ್ಗ ತಾರತಮ್ಯ ಎಲ್ಲಾ 'ಮೇಲ್ಜಾತಿ'ಯವರಿಂದಲೇ ಆಗಿದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ 'ಮೇಲ್ಜಾತಿ' ಎಂದು ಕರೆಯುವ ಕೆಲವರಲ್ಲೂ ಬಡತನವಿದೆ. ಹಾಗಾಗಿ ಬಡತನವು ಒಂದೇ ಸಮುದಾಯಕ್ಕೆ ಸೀಮಿತವಲ್ಲ. ಕೆಲವು ಜಾತಿಗಳಲ್ಲಿ ಹೆಚ್ಚು ಬಡವರಿದ್ದರೆ, ಮತ್ತೆ ಕೆಲವು ಜಾತಿಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಬಡವರಿದ್ದಾರೆ. ಹೀಗಾಗಿ ವರ್ಗದ ಪ್ರಶ್ನೆಗೂ ಜಾತಿಗೂ ನಿಕಟವಾದ ಸಂಬಂಧವಿದೆ. ಎಲ್ಲಾ ಜಾತಿಗಳಲ್ಲಿ ಬಡವರಿದ್ದರೂ ಸಹ ಅವರಿಗೆ ಆಗುವ ಅವಮಾನಗಳು ಮಾತ್ರ ಭಿನ್ನ ಭಿನ್ನವಾಗಿರುತ್ತವೆ.

ಈ ಅಧ್ಯಾಯದಲ್ಲಿ ಜಾತಿ ಕುರಿತಂತೆ ಎರಡು ಬಗೆಯ ವಿಭಾಗ ಕ್ರಮಗಳಿವೆ. ಒಂದನೆಯದು ಸವರ್ಣೀಯರಿಗೆ ವರ್ಗದ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು. ಎರಡನೆಯದಾಗಿ ತಳಸಮುದಾಯದವರಿಗೆ ವರ್ಗದ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು. ಇವುಗಳನ್ನು ಕ್ರಮವಾಗಿ ಕೆಳಗಿನಂತೆ ವಿಶ್ಲೇಷಣೆ ಮಾಡಬಹುದಾಗಿದೆ.

**೫.೨.೧. ಸವರ್ಣೀಯರಿಗೆ ಬಡತನದ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:**

ಅ. ಆರ್ಥಿಕ ಕನಿಷ್ಠತೆ ಮತ್ತು ಅವಮಾನ: ಸಾಮಾಜಿಕ ಶ್ರೇಷ್ಠತೆಯ ಕಾರಣಕ್ಕೆ ವಾರಾನ್ನ ಕೆಲವು ಮನೆಯಲ್ಲಿ ದೊರಕಿದರೂ, ಆರ್ಥಿಕ ಕನಿಷ್ಠತೆಯ ಕಾರಣಕ್ಕೆ ಭೈರಪ್ಪ ಅವರು ಅವಮಾನ ಅನುಭವಿಸುವುದನ್ನು 'ಭಿತ್ತಿ'ಯಲ್ಲಿ ಕಾಣಬಹುದು. ಸಾಮಾಜಿಕವಾಗಿ 'ಮೇಲ್ಜಾತಿ'ಯವರಾದ ಎಸ್.ಎಲ್. ಭೈರಪ್ಪ ಅವರು ಬಡತನದ ಕಾರಣಕ್ಕೆ ವಾರಾನ್ನದ ಮೂಲಕ ಹಸಿವು ನೀಗಿಸಿಕೊಳ್ಳುವ ಹಾಗೂ ಅವಮಾನಗಳಿಗೆ ಒಳಗಾಗುವಂತಹ ಸನ್ನಿವೇಶಗಳನ್ನು ಗಮನಿಸಬಹುದಾಗಿದೆ. ಭೈರಪ್ಪ ಅವರನ್ನು ಸುಬ್ಬಣ್ಣಯ್ಯರವರು ತಮ್ಮ ಮನೆಗೆ ಊಟಕ್ಕೆ ಕರೆದಿದ್ದಕ್ಕಾಗಿ ಅವರು ಊಟಕ್ಕೆ ಹೋಗುತ್ತಾರೆ. ಆಗ ಸುಬ್ಬಣ್ಣಯ್ಯರಿಗೂ ಅವರ ಹೆಂಡತಿಗೂ ನಡೆಯುವ ಸಂಭಾಷಣೆಯನ್ನು ಲೇಖಕರು ಹೀಗೆ ದಾಖಲಿಸುತ್ತಾರೆ. "ಯಾವನೆ ಭೈರಪ್ಪ ಅಂದರೆ? ಇಲ್ಲಿ ಬೇಸಿ ಹಾಕುಕ್ಕೆ ನಾನು ಗಟ್ಟಿಯಾಗಿಲ್ಲ ಅಂತ ಅವತ್ತೇ ಹೇಳಿದೆನಲ್ಲ."[೧೦] "ನೋಡೆ ಅವನಿಗೆ ಅಂತ ನೀನೇನೂ ಪ್ರತ್ಯೇಕ ಅಡಿಗೆ ಮಾಡೊಲ್ಲ. ಅದೇ ತಪ್ಪಲೆಗೆ ಒಂದು ಶಾರೆ ಅಕ್ಕಿ ಜಾಸ್ತಿ ಹಾಕುತೀಯ. ಅದೇ ಕೊಳದಪ್ಪಲೆಗೆ ಒಂದು ಹಿಡಿ ಬೇಳೆ ಮೂರು ಸೌಟು ನೀರು ಹೆಚ್ಚಾಗಿ ಹಾಕಿದರೆ ಸಾಕು ಪುಣ್ಯ ಬರುತ್ತೆ."[೧೧] "ನನಗೆ ಪುಣ್ಯವು ಬ್ಯಾಡ ಪುರುಷಾರ್ಥವು ಬ್ಯಾಡ ಆಗಲ್ಲ ಅಂದರೆ ಆಗಲ್ಲ. ಅವನು ಏನಾದ್ರು ಮಾತಾಡಿದರೆ ಮಡಿಕೋಲು ತಗಂಡು ಹ್ವಡೀತೀನಿ ಅವನಿಗೆ. ಯಾವನವನು? ಎನ್ನುತ್ತಾ ನನ್ನನ್ನು ನೋಡಲೆಂದು ಆಕೆ ನಾನಿದ್ದ ಅಂಗಳಕ್ಕೆ ನುಗ್ಗಿ ಬಂದರು."[೧೨]

ಅದೇ ಆತ್ಮಕಥೆಯಲ್ಲಿ ಲೇಖಕರು ಶನಿವಾರ ಒಬ್ಬರ ಮನೆಗೆ ಭಿಕ್ಷಾನ್ನಕ್ಕೆ ಹೋದಾಗ ನಡೆದ ಘಟನೆಯನ್ನು ಹೀಗೆ ವಿವರಿಸುತ್ತಾರೆ. "ಒಂದು ಹಿಡಿ ಅನ್ನ ಮೇಲೆ ಸಾರು. ಅರ್ಧ ಹಿಡಿ ಅನ್ನದ ನಂತರ ಮಜ್ಜಿಗೆ. ಅಪ್ಪ ಸತ್ತರೂ ತಡಕೊಳ್ಳಬಹುದು ಅರೆಹೊಟ್ಟೆ ತಡಕೊಳ್ಳುವುದು ಕಷ್ಟ ಎಂಬ ಗಾದೆ ನಿಜವಾಯಿತು. ಒಂದು ಮಧ್ಯಾಹ್ನ ಧೈರ್ಯ ಮಾಡಿ ಮಜ್ಜಿಗೆಗೆ ಅನ್ನ ಬಡಿಸಿದಾಗ ಅವರು ಮಜ್ಜಿಗೆ ತರುವಷ್ಟರಲ್ಲಿ ಎಲೆ ಕೊನೆಯಲ್ಲಿ ನೆಂಚಿಕೊಳ್ಳಲು ಬಿಟ್ಟಿದ್ದ ಸಾರಿನ ಚರಟದಲ್ಲಿ ಕಲಸಿ ಒಂದೇ ಗುಕ್ಕಿಗೆ ನುಂಗಿ ಕೂತಿದ್ದೆ. ಮಜ್ಜಿಗೆ ತಂದರು. ಇನ್ನೊಂದಿಷ್ಟು ಅನ್ನ ಅಂದೆ 'ಹಾಕಿದ್ದೆನಲ್ಲ, ಮಜ್ಜಿಗೆಗೆ ಅಂತ ಏನಾಯ್ತು? ಎಂದರು.' ನಾನು ಉತ್ತರ ಹೇಳಲಿಲ್ಲ. ಆಕೆ ಒಳಗೆ ಹೋಗಿ ಇನ್ನರ್ಧ ಹಿಡಿ ಅನ್ನ ತಂದು ಹಾಕಿ ಮಜ್ಜಿಗೆ ಬಡಿಸಿದರು. ನಾನು ತಿಂದ ಮೇಲೆ ಗೋಮಯ ಹಾಕಿ ಹೋಗಿ ಬರ್ತಿನಿ ಎಂದಾಗ "ಮುಂದಿನ ವಾರದಿಂದ ನಮ್ಮ ಮನೆಗೆ ಬರಬೇಡ. ಬೇರೆ ಕಡೆ ನೋಡಿಕೊ" ಎಂದು ಬಿಟ್ಟರು."[೧೩] ಮೇಲಿನ ಎರಡೂ ಸನ್ನಿವೇಶಗಳಲ್ಲಿ ಹಸಿವು, ಬಡತನ, ಅಸಹಾಯಕತೆ ಹಾಗೂ ಸ್ವಾರ್ಥ ಸೇರಿಕೊಂಡು ಆತ್ಮಕಥನಕಾರರನ್ನು ಅವಮಾನಕ್ಕೀಡು ಮಾಡಿವೆ. ಭೈರಪ್ಪನವರು ಆರ್ಥಿಕವಾಗಿ ಬಡವರಾಗಿದ್ದಕ್ಕಾಗಿಯೇ ಅವಮಾನ ಅನುಭವಿಸಿದ್ದಾರೆ. 'ಅಪ್ಪ ಸತ್ತರೂ ತಡಕೊಳ್ಳಬಹುದು ಅರೆಹೊಟ್ಟೆ ತಡಕೊಳ್ಳುವುದು ಕಷ್ಟ' ಎಂಬ ಮಾತು ವಾಸ್ತವವಾಗಿ ಲೇಖಕರಿಗೆ ಅಪ್ಪನ ಮೇಲಿದ್ದ ತಿರಸ್ಕಾರದ ಭಾವನೆಯನ್ನು ಹಾಗೂ ಹಸಿವು ನೀಗಿಸಿಕೊಳ್ಳಲಾಗದ ನಿಕೃಷ್ಟ ಸ್ಥಿತಿಯನ್ನು ಸಾಂಕೇತಿಸುತ್ತಿದೆ. ಈ ಎರಡೂ ಸನ್ನಿವೇಶದಲ್ಲು ಮಹಿಳೆಯೇ ಊಟವನ್ನು ಹಾಕಲು ಒಪ್ಪಿಲ್ಲ ಎಂಬುದು ಗಮನಾರ್ಹ ಸಂಗತಿ. ಬಹುಶಃ ಅಡಿಗೆ ಮಾಡುವುದು ಮಹಿಳೆಯರೇ ಆಗಿರುವುದರ ಕಾರಣ ಹೀಗೆ ಆಗಿರಬಹುದು ಎಂಬುದು ಮೇಲ್ನೋಟಕ್ಕೆ ಗೋಚರಿಸುತ್ತದೆ. ಮೇಲಿನ ಸನ್ನಿವೇಶಗಳಲ್ಲಿ ಎರಡು ಮಾದರಿಗಳ ಉಲ್ಲೇಖಗಳಿವೆ. ಹಸಿವು ನೀಗಿಸಲು ಪ್ರಯತ್ನ ಪಡುವ ಗುರುಗಳ ಮಾನವೀಯ ಮನಸ್ಥಿತಿಯು ಒಂದನೆಯ ಮಾದರಿಯಾದರೆ, ಯಾವುದೇ ಕಾರಣಕ್ಕೂ ಊಟವನ್ನು ಹಾಕಲು ಒಪ್ಪದ ಗುರುಗಳ ಪತ್ನಿಯ ಮನಸ್ಥಿತಿಯು ಎರಡನೆಯ ಮಾದರಿಯಾಗಿದೆ. ಹೀಗೆ ಎರಡೂ ಮಾದರಿಗಳನ್ನು ಉಲ್ಲೇಖಿಸುವ ಲೇಖಕರು; ಯಾರನ್ನೂ ಮೌಲ್ಯೀಕರಿಸುವ ಗೋಜಿಗೆ ಹೋಗದೆ ತಟಸ್ಥ ಧ್ವನಿಯಲ್ಲಿ ಓದುಗರ ಎದುರಿಗೆ ತನ್ನ ಅಸಹಾಯಕತೆಯನ್ನು ತೆರೆದಿಟ್ಟಿರುವುದನ್ನು ಆತ್ಮಕಥೆಯು ಕಾಣಿಸುತ್ತದೆ.

ಆ. ಶ್ರೀಮಂತಿಕೆಯ ಆಕರ್ಷಣೆ ಮತ್ತು ಬಡತನದ ವಿಕರ್ಷಣೆ: ಶ್ರೀಮಂತ ವರ್ಗ ಎನ್ನುವುದು ಒಂದು ತರಹದ ಆಕರ್ಷಣೀಯವಾದ ಸಂಗತಿ. ಶ್ರೀಮಂತಿಕೆ ಇದ್ದರೆ ಎಲ್ಲವೂ ಸುಲಭ, ಮತ್ತು ಚೆನ್ನಾಗಿರುತ್ತದೆ ಎಂಬ ಅಭಿಪ್ರಾಯಗಳು ಸಮಾಜದಲ್ಲಿವೆ. ಸಾಮಾಜಿಕ ವ್ಯವಸ್ಥೆಯು ಜಾತಿ ಮತ್ತು ಶ್ರೀಮಂತಿಕೆಗೆ ಮಹತ್ವ ಕೊಡುತ್ತದೆ. ಸ.ಜ ನಾಗಲೋಟಿಮಠ ಅವರ 'ಬಿಚ್ಚಿದ ಜೋಳಿಗೆ' ಆತ್ಮಕಥೆಯಲ್ಲಿನ ಈ ಕೆಳಗಿನ ಪ್ರಸಂಗವನ್ನು ಗಮನಿಸಬಹುದು. ಶ್ರೀಮಂತಿಕೆ ಜೊತೆಗಿದ್ದಾಗ ಇವರಿಗೆ ಹೆಣ್ಣು ಕೊಡಲು ಆಗಿಂದಾಗ್ಗೆ ಹಲವಾರು ನೆಂಟರಿಷ್ಟರು, ಇನ್ನೂ ಮುಂತಾದವರು ಬರುತ್ತಿದ್ದರು. ಆಗ

ನಾಗಲೋಟಿಮಠ ಅವರು "ಕನ್ಯಾ ನೋಡುವೆ ಆದರೆ ಮದುವೆ ಆಗುವುದಿಲ್ಲವೆಂದು ಹಾಗೂ ವರದಕ್ಷಿಣೆ ಬೇಡ"[೧೪] ಎಂದಿದ್ದರು. ನಂಬಿಕೆ ದ್ರೋಹದ ಪರಿಣಾಮ ಲೇಖಕರ ತಂದೆ ಮರಣದ ನಂತರ ಬಡತನ ಆವರಿಸಿತು. ಕೊನೆಗೆ ಲೇಖಕರೇ ಹೆಣ್ಣು ಕೇಳಲು ಹೋದಾಗ "ಸ್ವಲ್ಪ ಸಮಯವಾದ ಮೇಲೆ ಮಗಳನ್ನು ಕೊಡಲಾಗುವುದಿಲ್ಲವೆಂದರು. ಮತ್ತೊಂದು ಮನೆಗೆ ಹೋಗಿ ಎಂ.ಬಿ.ಬಿ.ಎಸ್ ಪರೀಕ್ಷೆ ಪಾಸಾಗಿದ್ದನ್ನು ತಿಳಿಸಿ ಈ ಕಾಲೇಜು ಓದು ನಿಲ್ಲಿಸಬೇಕಾಗಿದೆ, ತಾವು ನನಗೆ ಸಹಾಯ ಮಾಡಿದರೆ... ಹಿಂದೆ ಅವರ ಮಗಳ ಬಗ್ಗೆ ಸೂಚಿಸಿದ ಪ್ರಸ್ತಾಪವನ್ನು ತೆಗೆದೆ ಅವರು ಎಲ್ಲವನ್ನು ಕೇಳಿ ಕೊನೆಗೆ ಎರಡು ಸಾಧ್ಯವಿಲ್ಲವೆಂದರು. ನಂತರ ಮಧ್ಯಸ್ಥರ ಮನೆಗೆ ಹೋದೆ. ಅವರಿಗೂ ವಿವರಿಸಿ ಹೇಳಿದೆ."[೧೫] ಆಗ ಅವರು "ಏನಪ್ಪಾ! ನಿನಗ ಇಷ್ಟು ತಿಳಿಯುವುದಿಲ್ಲ ಏನು? ಆಗ ನಿಮ್ಮ ಅಪ್ಪ ಜಂಬಯ್ಯ ಇದ್ದ, ಸಾಕಷ್ಟು ಆಸ್ತಿ ಗಳಿಸಿದ್ದ. ಆಗ ಕನ್ಯಾ ಕೊಡತೀವು ಅಂದದ್ದು ನಿಜ. ಈಗ ನೀನು ದಿವಾಳಿಕೋರ. ಒಂದ ದಮಡಿ ಆಸ್ತಿ ಇಲ್ಲ. ನಿನಗ ಮಗಳನ್ನು ಕೊಡುವುದೆಂದರೆ ಬಾವಿಗೆ ನೂಕಿದಾಂಗ. ಈಗ ನಿನಗೆ ಯಾರ ಹೆಣ್ಣು ಕೊಡತಾರೋ ಹುಚ್ಚಪ್ಪ? ಸುಮ್ಮಕ ಅಡ್ಡಾಡಬೇಡ. ಮನೀಗ ಹೋಗಿ ಎಲ್ಲಿಯಾದರು ದುಡಿ. ಕಾಲೇಜು ಮರೆತುಬಿಡು"[೧೬] ಎನ್ನುತ್ತಾರೆ.

ಈ ಪ್ರಸಂಗದಲ್ಲಿ ಲೇಖಕರು ಶ್ರೀಮಂತರಿದ್ದಾಗ ಇದ್ದ ಸಂಬಂಧ ಬೆಳೆಸುವ ಆಸಕ್ತಿ ಬಡತನವಿದ್ದಾಗ ಮರೆಯಾಗಿರುವುದನ್ನು ಕಾಣಬಹುದು. 'ದಿವಾಳಿಕೋರ', 'ಬಾವಿಗೆ ನೂಕಿದಂತೆಯೇ' ಎನ್ನುವ ಪದಗಳು ವೈವಾಹಿಕತೆ ಕುರಿತಂತೆ ಇರುವ ವರ್ಗ ತಾರತಮ್ಯದ ಸ್ಥಾಪಿತ ಅಭಿಪ್ರಾಯಗಳ ಫಲವಾಗಿವೆ. ಇಂತಹ ಅಭಿಪ್ರಾಯಗಳು ಲೇಖಕರಿಗೆ ಅವಮಾನವನ್ನುಂಟು ಮಾಡಿವೆ. ಮೇಲಿನ ಎಲ್ಲಾ ಪ್ರಕರಣಗಳಲ್ಲಿ ಸಾಮಾಜಿಕವಾಗಿ 'ಉಚ್ಚ' ಎಂದು ಕರೆಯಲಾಗುವ ಸಮುದಾಯದವರಾದ ಭೈರಪ್ಪ ಮತ್ತು ನಾಗಲೋಟಿಮಠ ಅವರು ತಾವು ಆರ್ಥಿಕವಾಗಿ ಹಿಂದುಳಿದಿರುವ ಕಾರಣಕ್ಕೆ ಅವಮಾನಿತರಾಗುವುದನ್ನು ಚರ್ಚಿಸಲಾಯಿತು. ಹಾಗಾಗಿ ಬಡತನ ಕಾರಣಕ್ಕೆ ಆಗುವಂತಹ ಅವಮಾನಗಳು ಕೇವಲ ತಳಸಮುದಾಯಗಳಿಗೆ ಸೀಮಿತವಾಗದೇ ಸಾಮಾಜಿಕವಾಗಿ ಮೇಲುಸ್ತರದಲ್ಲಿರುವವರು ಸಹ ಬಡತನದ ಕಾರಣಕ್ಕೆ ಅವಮಾನ ಅನುಭವಿಸುವ ಸಂಗತಿಗಳಿರುವುದನ್ನು ಆತ್ಮಕಥೆಗಳು ಸಾಕ್ಷೀಕರಿಸುತ್ತವೆ.

ಇ. ಅಸಹಾಯಕತೆ ಮತ್ತು ಪ್ರತಿರೋಧ: ದಮನಿತರು ತಮ್ಮ ಮೇಲಿನ ಅಪಮಾನಗಳ ವಿರುದ್ಧ ಪ್ರತಿಕಾರ ತೀರಿಸಿಕೊಳ್ಳಲು ಹಲವು ಮಾರ್ಗಗಳನ್ನು ಅನುಸರಿಸುತ್ತಾರೆ. ಶಾಪ ಹಾಕುವುದು ಸಹ ಅಂತಹದ್ದೇ ಪ್ರತಿರೋಧವಾಗಿದೆ. 'ಭಿತ್ತಿ'ಯಲ್ಲಿ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿದ್ದಾಗಲೂ ಸಹಾಯ ಮಾಡದ ಸಂಪಮ್ಮನ ಕುರಿತು ಎಸ್.ಎಲ್.ಭೈರಪ್ಪ ಅವರ ಅಜ್ಜಿ "ಜಾತಿಸ್ಥಳಾಗಿದ್ದುಕೊಂಡು ಸತ್ತ ಮನೆಗೆ ನೀನೇ ಊಟ ತಂದಿಡಬೇಕು. ಅಂಥಾದ್ದರಾಗೆ ಹಳೇ ಸಾಲ ತಂದು ಮಡಗಿ ಹ್ವಸದು ಕೇಳು ಅಂತೀ ಏನೇ ಗರತಿ? ನಿನ್ನ ಮಕ್ಕಳೂ ಹಾಲು ಕಡಿಮೆ ಮಾಡಿ ನಿನ್ನ ಮಗೂಗೆ ಎದೆ ಕುಡಿಸಿ ಉಳಿಸಿಕೊಟ್ಟಳಲ್ಲಾ ಧರ್ಮಕಟ್ಟಿಕಳುಕ್ಕೆ ಆ ನಿನ್ನ ಹಿರೀಮಗನ್ನ ಮಾರಮ್ಮ ತಿಂದ್ಕಂಡು

ಹೋಗಲಿ"[೭೬] ಎಂದು ಪ್ರತಿಕ್ರಿಯಿಸುವ ವಿವರವಿದೆ. ಸ್ವಜಾತಿಯವರು ಸಹಾಯ ಮಾಡುವವರು ಎಂಬ ಅಜ್ಜಿಯ ನಿರೀಕ್ಷೆಯು ಇಲ್ಲಿ ಹುಸಿಯಾಗಿದೆ. ಅದಕ್ಕಾಗಿಯೇ ಜಾತಿಸ್ಥಳಾಗಿದ್ದುಕೊಂಡು ಭೈರಪ್ಪ ಅವರ ತಾಯಿ ಮಾಡಿದ ಸಹಾಯವನ್ನು ನೆನಪಿಟ್ಟುಕೊಳ್ಳದ ಸಂಪಮ್ಮನ ಹೃದಯಹೀನ ಮನಸ್ಥಿತಿಗೆ 'ಮಾರಮ್ಮ ತಿಂದ್ಕಂಡು ಹೋಗಲಿ' ಎಂದು ಅಜ್ಜಿ ಶಾಪ ಹಾಕುತ್ತಾಳೆ. ಅಜ್ಜಿಯ ಈ ಶಾಪವು ತಾನು ಏನು ಮಾಡಲು ಸಾಧ್ಯವಾಗದ ಸ್ಥಿತಿಯಲ್ಲಿ 'ದೈವಿಕ ಶಕ್ತಿಯ' ಮೊರೆ ಹೋಗುವುದರ ಮೂಲಕ ಮಾನಸಿಕ ಆಕ್ರೋಶದಿಂದ ಮುಕ್ತವಾಗುವ; ಆ ಮೂಲಕ ಶೋಷಿತರಲ್ಲಿ(ಸಂಪಮ್ಮ) ಭಯವನ್ನುಂಟು ಮಾಡುವ ಎರಡೂ ಕೆಲಸಗಳು ನಡೆದಿರುವುದರ ಸಂಕೇತವಾಗಿದೆ.

**೫.೨.೨. ತಳ ಸಮುದಾಯದವರಿಗೆ ವರ್ಗದ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು**

ಅ. ಜಾತಿ ಕನಿಷ್ಠತೆ, ನಿಂದನೆ ಮತ್ತು ಹಲ್ಲೆ: ತಳಸಮುದಾಯದವರು ಬಡತನವನ್ನು ತಮ್ಮ ಕರ್ಮ ಫಲ, ನಮ್ಮ ಹಣೆಬರಹವೆಂದು 'ಒಪ್ಪಿ'ರುತ್ತಾರೆ ಹಾಗೂ ಒಪ್ಪಿಸಲಾಗಿರುತ್ತದೆ. ಎಷ್ಟೋ ಬಾರಿ ಅಸ್ಪೃಶ್ಯರ ಸಾಂಸ್ಕೃತಿಕ ಕನಿಷ್ಠತೆಯೂ ಅವರು ಆರ್ಥಿಕವಾಗಿ ಸಬಲರಾದರೂ ಬೆನ್ನುಬಿಡದೆ ಅವಮಾನಿಸುವುದನ್ನು ಕಾಣಬಹುದು. ಇದರ ಜೊತೆಗೆ ದಲಿತ ಆತ್ಮಕಥೆಗಳಲ್ಲಿ ಅವಮಾನಗಳಿಗೆ ಸಂಬಂಧಿಸಿದಂತೆ ಹೆಚ್ಚು ಕಾಣುವ ಸಂಗತಿಯೆಂದರೆ ದಲಿತರು ಜಾತಿ ನಿಂದನೆ ಮತ್ತು ಹಲ್ಲೆಗೆ ಒಳಗಾಗುವುದಾಗಿದೆ. ಈ ಹಲ್ಲೆಗಳು ಹಸಿವು, ಬಡತನ ಮತ್ತು ಜಾತಿ ಕನಿಷ್ಠತೆಯ ಭಾಗವಾಗಿ ಆಗುತ್ತಿರುತ್ತವೆ. ದಲಿತರಲ್ಲಿ ಬಹುತೇಕರು ಹಸಿವನ್ನು ತಮ್ಮ ಬದುಕಿನ ಸ್ಥಾಯಿಭಾವವನ್ನಾಗಿ ಅನುಭವಕ್ಕೆ ತಂದುಕೊಂಡಿರುವುದಾದರೆ, ಈ ಬಡತನದ ಹಸಿವನ್ನು ನೀಗಿಸಿಕೊಳ್ಳಲು ಹೋಗಿ ದಲಿತರು ಜಾತಿ ನಿಂದನೆಗೂ ಹಾಗೂ ಹಲ್ಲೆಗಳಿಗೂ ಒಳಗಾಗುತ್ತಾರೆ. ಉದಾಹರಣೆಗೆ 'ಸಂಬೋಳಿ'ಯಲ್ಲಿ 'ಕಹಿನೆನ್ಪು' ಪ್ರಸಂಗವನ್ನು ನೋಡಬಹುದು. "ಹುಣಸೆ ಹಣ್ಣನ್ನು ಕೀಳಲು ಹೋದಾಗ, ಯಾ ಮಾಯ್ದಾಗೋ ಒಕ್ಕಲಿಗರ ನಾರಾಯಣಪ್ಪ ಹಸಿರಾವ್ನಂಗೆ ಅಲ್ಲಿಗ್ಬಂದ್ಬುಟ. ನಾವೆಲ್ಲ ದಿಕ್ಕಾಪಾಲಾಗಿ ಓಡ್ತಿದ್ದೋ. ನಾರಾಯಣಪ್ಪ ನನ್ನನ್ನು ಅಟ್ಟಾಡಿಸಿ ಹಿಡ್ಕಂಡ್ಬುಟ್ಟ. 'ನಿಮ್ಮಮ್ಮುನ್ ಗಂಡನ ಜಮೀನ್ನಾಗೆ ಸಿಹಿ ಉಣಿಸೇ ಮರ ಬೆಳ್ದದೆ ಅಂತ ತಿಳ್ಕಂಡಿದ್ದಿರೇನೋ ಬೋಳಿಮಕ್ಳ. ನನ್ನ ಕೆರ್ಗಳ್ನ ಉಡುಕಿ ಕೊಡುಬಾರೋ ಮಾದಿಗ್ನಮ್ಮಗ್ನೆ...... ನಾ ಕೆರ್ಗಳ್ನ ಹುಡುಕ್ತಿದ್ದೆ. ನಾರಾಯಣಿಯ ಕೆರ ಹಸಿ ಹೇಲಿನ್ಮೇಲೆ ಕುಂತದೆ. ಎತ್ಕಂಡೆ, ಅದು ದುರ್ವಾಸ್ನೆ ವಡಿತಿತ್ತು ಕಳ್ನನ್ಮಗ್ನೆ ಕುಡ್ತಾ ಬಿಚ್ಚಿ ಸೀಟು ಎಂದು ಗರ್ಜಿಸಿದ. ಸರಕ್ಕಂಥ ಕುಡ್ತಾ ಬಿಚ್ಚಿ ಆ ಕೆರಾನ ಸೀಟ್ದೆ. ವಾಸ್ನೆಗೀಸ್ನೆ ಅದೇನೋ ಮುಸ್ನೋಡೋ ಅಂದ. ಮುಸ್ನೂಡ್ದೆ. ವಾಸ್ನೆ ರವಷ್ಟು ರವಷ್ಟು ಇತ್ತು. ಇಲ್ಲಾ ಅಂತ ತಲೆ ಆಡಿಸ್ದೆ ಕೆರಾನ ನೆಲದ್ಮೇಲೆ ಮಡುಗ್ದೆ ಕುಡ್ತಾನ ಕುಕ್ಕಿ ಕುಕ್ಕಿ ವಗೆದು ಬಂಡೇ ಮೇಲಾಕಿದ್ದೆ. ಅದು ಒಣಗಿದ ಮೇಲೆ ಇಕ್ಕಂಡು ಮನೆಗೆ ಹೋಗಿದ್ದೆ. ಸಿಹಿ ಹುಣಸೆ ಹಣ್ಗಿಡಾನ ಎಂದೂ, ಯಾರೂ, ಎಲ್ಲೂ ಬೆಳೆಸೋದಿಲ್ಲಾ. ಅದು ಕಾಡ್ಗಿಡ ಎಲ್ಲಂದ್ರಲ್ಲಿ ಬೆಳ್ಕಂಡಿರ್ತದೆ. ಆದರ ಹಣ್ಣನ್ನ ಬ್ಯಾರೆಯವ್ರು ಬಾಯಿ ರುಚಿಗೆ ತಿನ್ತಾರೇ, ನಾವು

ಹೊಟ್ಟೆ ಹಸಿವಿಗೆ ತಿನ್ತೀವಿ. ಅಂಥಾದ್ರಲ್ಲಿ ಆ ನಾರಾಯಣಪ್ಪ ನನ್ಗೆ ಯಾಕೆ ಹೀನಾಮಾನ್ವಾಗಿ ಬೈಯ್ದ! ಯಾಕೆ ವಡೆದಾ! ಅವ್ನ ಕೆರ್‍ಗಾಗಿದ್ದ ಹೇಲ್ನ ನನ್ನ ಕುಡ್ತಾದಾಗೆ ಯಾಕೆ ಸೀಟಿಸದಾ! ಎಂಬ ಯೋಚ್ನೆ ಒಂದೇ ಸಮ್ನೆ ಸುರಿಯುವ ಜಡಿ ಮಳೆಯಂಗೆ ಬರ್‍ತಿತ್ತು....."[೧೮] ಎಂದು ಬರೆದುಕೊಳ್ಳುತ್ತಾರೆ.

ಈ ಮೇಲಿನ ಸನ್ನಿವೇಶದಲ್ಲಿ ವರ್ಗ, ಹಸಿವು, ಹಲ್ಲೆ ಮತ್ತು ಅಸಹಾಯಕತೆ ಮುಖ್ಯವಾಗಿರುವ ಸಂಗತಿಗಳಾಗಿವೆ. ಇದರ ಜೊತೆಗೆ ಪ್ರಮುಖ ಸಂಗತಿಯ ಕುರಿತು ಗಮನಿಸಬೇಕಾಗಿದೆ. ಇಲ್ಲಿ ಸಹಜವಾಗಿ ಹುಟ್ಟುವಂತಹ ಹುಣಸೆಹಣ್ಣು ತಿಂದ್ದದ್ದಕ್ಕಾಗಿ ನಾರಾಯಣಗೌಡ ಲೇಖಕರಿಗೆ ಹೊಡೆದು ತನ್ನ ಚಪ್ಪಲಿಗೆ ಹತ್ತಿದ್ದ ಹೇಲನ್ನು ಸೀಟುವಂತೆ ಹೇಳುವುದು ಅಪಮಾನಗಳ ಅಮಾನವೀಯತೆ ಎನ್ನಬಹುದು. ವರ್ಗ ವ್ಯವಸ್ಥೆಯಲ್ಲಿ ಸಹಜವಾಗಿ ಸೃಷ್ಟಿಯಾಗಿರುವ ಪರಿಸರವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಬಲವಾದ ಸಮುದಾಯಗಳು ತನ್ನ ಸುಪರ್ದಿಗೆ ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡುತ್ತಲೇ ಇರುತ್ತವೆ. ನಾರಾಯಣಗೌಡನನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದಾಗಿದೆ. ಸನ್ನಿವೇಶದ ಕೊನೆಯಲ್ಲಿ ಲೇಖಕರು ವ್ಯಕ್ತಪಡಿಸುವ ಅಭಿಪ್ರಾಯಗಳು ತಳಸಮುದಾಯಗಳ ದಾರುಣ ಬದುಕನ್ನು ಓದುಗರ ಗಹನಕ್ಕೆ ತರುವುದರ ಭಾಗವಾಗಿವೆ. ಜೊತೆಗೆ ಓದುಗರಲ್ಲಿ ಮರುಚಿಂತನೆಯನ್ನು ಕಟ್ಟುವ, ವಾಸ್ತವಗಳನ್ನು ತೆರೆದಿಡುವ ಇರಾದೆಯಿದೆ. ಅಸ್ಪೃಶ್ಯರಿಗೆ ಹಲ್ಲೆ ಜೊತೆಗೆ ಜಾತಿ ನಿಂದನೆಗಳಾಗುವುದನ್ನು ಹಾಗೂ ಚಪ್ಪಲಿಗೆ ಹತ್ತಿದ ಹೇಲನ್ನು ಹೊರೆಸಲು ಹೇಳುವ ಶೋಷಕ ವ್ಯವಸ್ಥೆಯನ್ನು ವಿವರಿಸುವ ಲೇಖಕರ ಧ್ವನಿಯಲ್ಲಿ ವಿಷಾದತೆ ಇದೆ. ಇಂತಹ ಅವಮಾನಗಳು ಅಸ್ಪೃಶ್ಯರಿಗೆ ಮಾತ್ರ ಆಗುವಂತಹದ್ದು, ಈ ಕಾರಣಕ್ಕಾಗಿಯೇ ದಲಿತ ಆತ್ಮಕಥೆಗಳಲ್ಲಿ ಜಾತಿ ನಿಂದನೆಗಳು ಹೆಚ್ಚೆಚ್ಚವಾಗಿ ಕಂಡುಬರುತ್ತವೆ.

ಆ. ಆರ್ಥಿಕ ಸಬಲತೆ ಮತ್ತು ತಾರತಮ್ಯ: ಜಾತಿ ಮತ್ತು ವರ್ಗ ಎಷ್ಟು ಅಂತರ್‌ಸಂಬಂಧ ಹೊಂದಿವೆ ಎಂಬುದನ್ನು ಈ ಕೆಳಗಿನ ಉದಾಹರಣೆಗಳ ಮೂಲಕ ಮತ್ತಷ್ಟು ಸ್ಪಷ್ಟೀಕರಿಸಬಹುದು. ತುಂಬಾಡಿ ರಾಮಯ್ಯನವರ 'ಮಣೆಗಾರ'ದಲ್ಲಿ ಬರುವ ಸನ್ನಿವೇಶ ಹೀಗಿದೆ. "ಅಸ್ಪೃಶ್ಯರ ಮೊದಲ ಮಂತ್ರಿ ಚೆನ್ನಿಗರಾಮಯ್ಯನವರು ಮೈಸೂರು ಚಾಮುಂಡಿ ಬೆಟ್ಟ ದೇವಸ್ಥಾನಕ್ಕೆ ಹೋದಾಗ ಅಲ್ಲಿನ ಜಾತಿವಾದಿಗಳು ಅವರು ಪ್ರವೇಶಿಸಿದಂತೆ ತಡೆದರು"[೧೯] ಎಂಬ ಘಟನೆ ಬರುತ್ತದೆ 'ಗೊಂದಲಿಗ್ಯಾ'ದಲ್ಲಿ ಮದರಿಯವರು ಶಿಕ್ಷಕ ವೃತ್ತಿಯ ಮೂಲಕ ಆರ್ಥಿಕವಾಗಿ ಸಬಲರಾದರೂ ಅವಮಾನ ಅನುಭವಿಸುತ್ತಾರೆ. "ಹೈಸ್ಕೂಲ್‌ನಲ್ಲಿ ಹೆಚ್ಚು ಜನ ಬ್ರಾಹ್ಮಣ ಶಿಕ್ಷಕರಿದ್ದರು. ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿಯ ಬ್ರಾಹ್ಮಣರು ಬಹಳ ಮಡಿವಂತರು. ನಮ್ಮ ಶಾಲೆಯ ಕೆಲವು ಬ್ರಾಹ್ಮಣ ಶಿಕ್ಷಕರು ನಾವು ಮುಟ್ಟಿದ ನೀರನ್ನು ಕುಡಿಯುತ್ತಿರಲಿಲ್ಲ."[೨೦] ಈ ಮೇಲಿನ ಎರಡೂ ಪ್ರಕರಣಗಳಲ್ಲಿ ಬಡತನದೊಂದಿಗೆ ಜಾತಿಯು ತಳಕು ಹಾಕಿಕೊಂಡಿದೆ. ಜಾತಿಯು ವರ್ಗಕ್ಕಿಂತ ಬಲಿಷ್ಠವಾಗಿ ಜನರ ಮನಸ್ಸಿನೊಳಗೆ ಹಾಸುಹೊಕ್ಕಾಗಿದೆ. ಜಾತಿಯಾಧಾರಿತ ಆರ್ಥಿಕ ಸಂರಚನೆಯು ಸೃಷ್ಟಿಯಾಗಿ ಮೇಲಿನ ಮಾದರಿಯಲ್ಲಿ ಅವಮಾನಗಳಾಗಲು

ಕಾರಣವಾಗಿವೆ. ಇಂತಹ ಅವಮಾನಗಳ ಫಲಾನುಭವಿಗಳಾಗಿ ನಾವು ಅಸ್ಪೃಶ್ಯರು ಮತ್ತು ಅಲೆಮಾರಿಗಳನ್ನು ನೋಡಬಹುದಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಅಲೆಮಾರಿ ಮತ್ತು ದಲಿತ ಸಮುದಾಯಗಳು ಆರ್ಥಿಕವಾಗಿ ಸಬಲರಾದರೂ ಪೂರ್ವಾಶ್ರಮದ ಜಾತಿ ವ್ಯವಸ್ಥೆಯ ಪ್ರಭಾವಗಳು ಅವರನ್ನು ಅವಮಾನಗಳಿಂದ ಮುಕ್ತರಾಗಿಸಿಲ್ಲ ಎನ್ನುವ ವಾಸ್ತವ ಸತ್ಯಗಳನ್ನು ಆತ್ಮಕಥೆಗಳು ನಿದರ್ಶಿಸುತ್ತವೆ.

ಇ. ಒಂದೇ ಜಾತಿಯವರಾದರೂ ವರ್ಗದ ಕಾರಣಕ್ಕೆ ಅವಮಾನ: ಎಲ್ಲಾ ಜಾತಿಯೊಳಗಿನ ಬಡವರು ಆಯಾ ಸಮುದಾಯದೊಳಗೆ ದಮನಿತರೇ ಆಗಿರುತ್ತಾರೆ. ಹೀಗೆ ಒಂದೇ ಜಾತಿಯಲ್ಲಿನ ಬಡವರು ಅನುಭವಿಸುವ ಅವಮಾನಗಳನ್ನು ಈ ಕೆಳಗಿನ ಸನ್ನಿವೇಶಗಳಲ್ಲಿ ಕಾಣಬಹುದು. 'ಗೊಂದಲಿಗ್ಯಾ'ದಲ್ಲಿ ಮದರಿಯವರು "ಅವರ ಜಾತಿಯ ಹೆಣ್ಣು ಮಗಳೆ ಅವರ ಮನೆಗೆ ಕೆಲಸಕ್ಕೆ ಬರುತ್ತಿದ್ದರೂ ಅವರ ಅಡುಗೆ ಮನೆಯಲ್ಲಿ ಅವಳಿಗೆ ಪ್ರವೇಶವಿರಲಿಲ್ಲ"[೨೧] ಎಂಬುದನ್ನು ದಾಖಲಿಸುತ್ತಾರೆ. ಈ ಮೇಲಿನ ಸನ್ನಿವೇಶದಲ್ಲಿ ಶಿಕ್ಷಕರು ತಮ್ಮದೇ ಸಮುದಾಯದ ಆದರೆ ಬಡವಳಾಗಿರುವ ಹೆಣ್ಣು ಮಗಳೊಂದಿಗೆ ಅಂತರ ಕಾಯ್ದುಕೊಳ್ಳುವುದನ್ನು ಗುರುತಿಸಬಹುದು.

'ಮಣೆಗಾರ'ದಲ್ಲಿ ಸಚಿವರೂ ಮತ್ತು ದಲಿತರೂ ಆಗಿದ್ದ ಕೆ. ಪ್ರಭಾಕರ್ ಅವರು ಬರುತ್ತಾರೆಂದು, ದಲಿತರು ತಮ್ಮ ಕೇರಿಯಲ್ಲಿ ಸಂಭ್ರಮದಿಂದ ಕಾಯುತ್ತಿದ್ದರು. ಆದರೆ ಅವರು ಬಾರದೆ ಗೈರು ಹಾಜರಿಯಾಗುತ್ತಾರೆ. ಇಲ್ಲಿ ಪ್ರಭಾಕರ್ ಅವರು ದಲಿತ ಕೇರಿಯಿಂದ ಅಧಿಕಾರದ ಹಂತಕ್ಕೆ ಹೋಗಿ, ತಮ್ಮ ಸಮುದಾಯದ ಬಡವರ ಅಗತ್ಯತೆಗಳಿಗೆ ಸ್ಪಂದಿಸದೆ ಅಂತರ ಕಾಯ್ದುಕೊಳ್ಳುವವರ ಪ್ರತಿನಿಧಿಯಾಗಿದ್ದಾರೆ. ಜಾತಿಯು ಹಿನ್ನೆಲೆಗೆ ಹೋಗಿ ಶ್ರೀಮಂತಿಕೆ ಮುನ್ನೆಲೆಗೆ ಬಂದಿದೆ. ಶಿಕ್ಷಣ ಮತ್ತು ಮೀಸಲಾತಿಗಳಿಂದ ಅಧಿಕಾರ ಪಡೆದ ತಳಸಮುದಾಯದ ವ್ಯಕ್ತಿಗಳು ತಮ್ಮ ಸಮುದಾಯಗಳ ಅಸಹಾಯಕರಿಂದ ಅಂತರ ಕಾಯ್ದುಕೊಳ್ಳುವುದು ಸಾಮಾಜಿಕ ವಾಸ್ತವವಾಗಿದ್ದು, ದಮನಿತ ಸಮುದಾಯಗಳೊಳಗೂ ಇಂತಹ ಶೋಷಕ ಮನಸ್ಥಿತಿಗಳಿರುವ ವಿಚಿತ್ರವನ್ನು ಆತ್ಮಕಥೆಗಳು ಕಾಣಿಸುತ್ತವೆ.

ಈ. ಅಸಹಾಯಕತೆ ಮತ್ತು ಮಾಟಮಂತ್ರದ ಮೊರೆ ಹೋಗುವುದು: ಬಡತನದ ಅಸಹಾಯಕತೆ ಮತ್ತು ಸಂಘಟನೆಯ ಕೊರತೆಯು ಮತ್ತು ದಮನಿತರು ಪರ್ಯಾಯಗಳ ಮೂಲಕ ಪ್ರತಿರೋಧ ತೋರುವುದಕ್ಕೆ ಕಾರಣವಾಗುತ್ತವೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಅರವಿಂದ ಮಾಲಗತ್ತಿಯವರು "ನನ್ನಜ್ಜಿ, ನನ್ನ ಅವತಾರವನ್ನು ನೋಡಲಾಗದೆ ದುಃಖದಿಂದ ರೋಸಿ ಹೋದಳು. ಮಣ್ಣಿನ ಹೊಸ ಮಡಿಕೆ ತಂದು ಹಾಳೆ ಹಾಗೂ ಗೆರಟೆಯ ಕೆಲ ಚದುರುಗಳನ್ನು ಹಾಕಿ ಬೆಂಕಿ ಮಾಡಿದಳು. ಅದರಲ್ಲಿ ನೀರು ತುಂಬಿ, ಅರಿಸಿಣ, ಕುಂಕುಮ ಹಾಕಿ ನೆದರು ಮಾಡಿದಳು. ಲಿಂಬೆ ಹಣ್ಣು ಕೊಯ್ದು, ಮೂರು ತುಂಡು ಮಾಡಿ ಸೂಜಿ ಚುಚ್ಚಿ ಗಡಿಗೆಗೆ ಹಾಕಿದಳು. ಜೋಗಪ್ಪನ ಹತ್ತಿರ ಹೋಗಿ ಅಲ್ಲಿಂದ ಏನೊ ತಂದು ಆ ಮಡಿಕೆಗೆ ಹಾಕಿ, ನನ್ನ ತಲೆಯ ಸ್ವಲ್ಪ ಕೂದಲು

ಕತ್ತರಿಸಿಕೊಂಡಳು. ನಾನೆಷ್ಟು ಮಾತನಾಡಿಸಿದರೂ ಮಾತನಾಡದೆ ಮೂಕಿಯ ಹಾಗೆ ವರ್ತನೆ ಮಾಡುತ್ತ ಮತ್ತೆ ಪುನಃ ಆ ಮಡಿಕೆಯನ್ನು ಒಯ್ದು ಜೋಗಪ್ಪನಿಗೆ ಕೊಟ್ಟು ಬಂದು ನನಗೆ ಧೈರ್ಯ ಹೇಳಿದಳು. ಈಗ ಆ ಗಡಗಿ ಹೋಗಿ ಅವ್ನ ಹಿತ್ತಲದಾಗ ಬೀಳತೈತಿ ನಿನಗ ಆಗಿದ್ದರ ಎರಡ ಪಟ್ಟಿ ಆವ್ಗ ಆಕೈತಿ, ಸುಮ್ಮನಿರು. ಎಂದು ನನ್ನನ್ನು ಎದೆಗವಚಿಕೊಂಡಳು"[೨೨] ಎಂದು ಬರೆದುಕೊಳ್ಳುತ್ತಾರೆ.

ಮೇಲೆ ಉಲ್ಲೇಖಿಸಿದ ಪ್ರಸಂಗದಲ್ಲಿ ಅಸಹಾಯಕತೆ ಹಾಗೂ ಪ್ರತಿರೋಧಗಳೆರಡೂ ಇವೆ. ಈ ಅಸಹಾಯಕತೆ ಇರುವ ಕಾರಣಕ್ಕಾಗಿಯೇ ಪ್ರತಿರೋಧವು ನೇರವಾಗಿಲ್ಲದೆ ಅದು ಪರೋಕ್ಷ ವಿಧಾನವನ್ನು ಆಯ್ದುಕೊಂಡಿದೆ. ಇಲ್ಲಿ ಅರವಿಂದ ಮಾಲಗತ್ತಿಯವರು ಹಸಿವನ್ನು ನೀಗಿಸಿಕೊಳ್ಳಲು ಹತ್ತಿಯನ್ನು ಮುಟ್ಟಿದ್ದಕ್ಕಾಗಿ ಮಾಲಿಕನಿಂದ ಅವಮಾನಕ್ಕೆ ಒಳಗಾಗಿ ರೋದಿಸುತ್ತಿರುವಾಗ ಮಾಲಗತ್ತಿಯವರ ಅಜ್ಜಿಯು 'ಅಗೋಚರ ಶಕ್ತಿಯ' ಮೂಲಕ ಅಪಮಾನವನ್ನು ತೀರಿಸಿಕೊಳ್ಳುವ ಪ್ರತಿರೋಧ ತೋರಿಸುತ್ತಾರೆ. ಇಲ್ಲಿ ಶೋಷಕರನ್ನು ನೇರವಾಗಿ ಎದುರಿಸಲು ಏಕೆ ಸಾಧ್ಯವಾಗುತ್ತಿಲ್ಲವೆಂಬ ಪ್ರಶ್ನೆ ಸಹಜವಾಗಿ ಉದ್ಭವವಾಗುತ್ತದೆ. ಮೇಲಿನ ಸನ್ನಿವೇಶದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ ಇರುವುದು ಸ್ಪಷ್ಟವಾಗಿದೆ. ಮಾಲಗತ್ತಿಯವರು ವರ್ಗದಿಂದ ಬಡವರು ಮತ್ತು ಸಾಮಾಜಿಕವಾಗಿ ದಲಿತರಾಗಿದ್ದು, ಇವೆರಡೂ ಹಿನ್ನೆಲೆಯಲ್ಲಿ ಪ್ರಬಲರಾದ ಊರ ಗೌಡರ ಸಂಬಂಧಿಕನ ವಿರುದ್ಧ ಹೋರಾಟ ಮಾಡುವ ಯಾವ ಅವಕಾಶಗಳೂ ಇಲ್ಲಿ ಸಾಧ್ಯವಾಗಿಲ್ಲ. ಆದರೂ ಪ್ರತಿರೋಧವನ್ನು ತೋರಿಸಬೇಕು ಹಾಗೂ ತನ್ನ ಮೊಮ್ಮಗನನ್ನು ಸಮಾಧಾನ ಮಾಡಬೇಕು ಎಂದು ಮುದುಕಿ 'ಮಾಂತ್ರಿಕ ಶಕ್ತಿಯ' ಮೊರೆ ಹೋಗುವುದನ್ನು ಕಾಣಬಹುದಾಗಿದೆ. ಈ ಬಗೆಯ ಪ್ರತಿರೋಧಗಳು ಶೋಷಕರಿಗೆ ಯಾವ ಪರಿಣಾಮಗಳನ್ನು ಉಂಟುಮಾಡದಿದ್ದರೂ ದಮನಿತರಲ್ಲಿ ಒಂದು ರೀತಿಯ ಮಾನಸಿಕ ವೇದನೆಯಿಂದ ಮುಕ್ತವಾಗಿಸುತ್ತವೆ. ಇದು ಕೂಡ ಪ್ರತಿರೋಧದ ಪರ್ಯಾಯ ವಿಧಾನವಾಗಿದ್ದು, ಇಂತಹ ಪ್ರತಿರೋಧದ ಪರ್ಯಾಯ ಮಾದರಿಗಳು ಆತ್ಮಕಥೆಗಳಲ್ಲಿ ದಾಖಲಾಗಿವೆ.

**೫.೩.ವರ್ಗದ ಇತರೆ ಅವಮಾನ ಮತ್ತು ಪ್ರತಿರೋಧಗಳು**

**೫.೩.೧.** ವರ್ಗ, ಚುನಾವಣೆ ಮತ್ತು ಅವಮಾನ: ಬಡತನ ಎನ್ನುವುದು ಸಾಮಾಜಿಕ ವ್ಯವಸ್ಥೆಯಲ್ಲಿರುವ ಶಾಪವಾಗಿದ್ದು, ಹಲವು ಸಂಘರ್ಷಗಳನ್ನುಂಟು ಮಾಡುತ್ತದೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿನ ಈ ಸನ್ನಿವೇಶವನ್ನು ಗಮನಿಸಿದಾಗ ಚುನಾವಣೆ ಎನ್ನುವುದು ಉಳ್ಳವರು ಮತ್ತು ಉಳ್ಳದವರ ನಡುವೆ ನಡೆಯುವ ಸಂಘರ್ಷದಂತೆ ಕಾಣುತ್ತದೆ. ಕಾಲೇಜಿನ ಚುನಾವಣೆಗೆ ಸ್ಪರ್ಧಿಸಿದ ಮಾಲಗತ್ತಿಯವರನ್ನು ಕಂಡು "ಕಾಲಾಗ ಹಾಕ್ಕೊಳ್ಳಾಕ ಸರಿಯಾಗಿ ಚಪ್ಲಿ ಇಲ್ಲ. ಜನರಲ್ ಸೆಕ್ರೇಟ್ರೀ ಆಗ್ತಾನಂತೆ"[೨೩] ಎಂದು ನಿಂದಿಸಲಾಗುತ್ತದೆ. ಚುನಾವಣೆ ನಿಲ್ಲಲ್ಲು ಹಣವಿರಬೇಕು. ಶ್ರೀಮಂತಿಕೆ ಇರಬೇಕು ಎಂಬರ್ಥದ ಮೇಲಿನ ಸಾಲುಗಳು ಮಾಲಗತ್ತಿಯವರ ಬಡತನ ಮತ್ತು ಸ್ವಾಭಿಮಾನಕ್ಕೆ ಅವಮಾನ ಮಾಡಿವೆ.

ಈ ಸನ್ನಿವೇಶದಲ್ಲಿ ಪ್ರಭುತ್ವದ ಎರಡು ಹಿತಾಸಕ್ತಿಗಳಿವೆ. ಚುನಾವಣೆಗೆ ಆರ್ಥಿಕ ಆಯಾಮವನ್ನು ಕೊಡುವುದು ಒಂದನೆಯದು. ಈ ಮೂಲಕ ಮಾಲಗತ್ತಿ ಅವರ ಆತ್ಮವಿಶ್ವಾಸವನ್ನು ಕುಗ್ಗಿಸುವುದು ಎರಡನೆಯದಾಗಿದೆ. ಇವು ವರ್ಗ ತಾರತಮ್ಯವನ್ನು ಉಳಿಸಿಕೊಳ್ಳುವುದರ ಭಾಗವಾಗಿಯೇ ಇವೆ.

೫.೩.೨. ಬೇಲಿಯೇ ಹೊಲ ಮೇಯುವುದು: 'ಉಚಲ್ಯಾ'ದಲ್ಲಿ ಪೊಲೀಸರೇ ಅವಮಾನಿಸುವ ಮತ್ತು ಬಡವರಿಗೆ ಮತ್ತಷ್ಟು ಹಣ ಕೇಳುವಂತಹ ಸಂಗತಿಯೊಂದಿದೆ. ಉಚಲ್ಯಾರ ಮೇಲೆ ಸುಮ್ಮನೆ ಆರೋಪ ಹೊರಿಸಿ, ಮನೆ ಮಂದಿಗೆಲ್ಲ ಹೊಡೆದು ಪೊಲೀಸ್ ಸ್ಟೇಶನ್‌ಗೆ ಹಾಕಿದ ಸಂದರ್ಭದಲ್ಲಿ ಲೇಖಕರ ಕುಟುಂಬದವರು ತಮ್ಮವರನ್ನು ಬಿಡುಗಡೆಗೊಳಿಸಿ ಎಂದು ಕೇಳಿದಾಗ "೫೦೦ ರೂ ಕೊಟ್ಟರೆ ಮಾತ್ರ ಬಿಡುವುದು ಅಂದರು ಕೊನೆಗೆ ಹೆಚ್ಚು ಬಡ್ಡಿಯಂತೆ ಸಾಲ ತಂದು ಕೊಟ್ಟಾಗ, ಬಿಟ್ಟರು"[೨೪] ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಪ್ರಭುತ್ವವೇ ದಮನಿತರನ್ನು ಶೋಷಿಸುವ ಅನೇಕ ಘಟನೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಮೇಲಿನ ಸನ್ನಿವೇಶವು ಅಂತಹ ಒಂದು ಘಟನೆಯಾಗಿದೆ. ಅಸಹಾಯಕರು ಹಿಂದಿನ ಕಾಲದಿಂದಲೂ ಪ್ರಭುತ್ವದ ಸ್ವಾರ್ಥಕ್ಕೆ ಬಲಿಯಾಗಿದ್ದಾರೆ. ಪೊಲೀಸರೇ 'ಉಚಲ್ಯಾ' ಜನರಿಂದ ಹಣ ವಸೂಲಿ ಮಾಡುತ್ತಿದ್ದ ಕಾರಣಕ್ಕೆ ಮತ್ತೆ ಮತ್ತೆ ಸಾಲ ಮಾಡುವ, ಬಡತನದಲ್ಲಿಯೇ ಬದುಕುವ ಪರಿಸ್ಥಿತಿ 'ಉಚಲ್ಯಾ' ಸಮುದಾಯದ್ದಾಗಿದೆ. ಆತ್ಮಕಥೆಯಲ್ಲಿನ ಇಂತಹ ಸನ್ನಿವೇಶಗಳು ತಮ್ಮ ಅಸಹಾಯಕ ಬದುಕನ್ನೂ, ಪ್ರಭುತ್ವದೊಳಗಿನ ಅಮಾನವೀಯತೆಯನ್ನು ಧ್ವನಿಸುತ್ತಿವೆ.

೫.೩.೩. ವೃತ್ತಿ ಮತ್ತು ವರ್ಗ ಕನಿಷ್ಠತೆ: ವೃತ್ತಿಯಾಧಾರಿತ ಆರ್ಥಿಕ ಸಂಗತಿಯೂ ವೃತ್ತಿಯೊಳಗಡೆಯೇ ಹಲವು ಶ್ರೇಣಿಗಳನ್ನುಂಟು ಮಾಡಿ ಅವಮಾನಗಳಿಗೆ ಕಾರಣವಾಗುವುದನ್ನು 'ಸಂಬೋಳಿ'ಯಲ್ಲಿನ 'ಮದುವೆ ಊಟ ಸರ್ಕಾರಿ ಕೆಲ್ಸ ಕಿತ್ಕಂತ್ತು' ಎಂಬ ಸನ್ನಿವೇಶದಲ್ಲಿ ಕಾಣಬಹುದಾಗಿದೆ. ಲಕ್ಷ್ಮಣ್ ಅವರು ಸಮಾರಂಭಕ್ಕೆ ಹೋದಾಗ ಅವರನ್ನು ಅವಮಾನಿಸುವ ಸನ್ನಿವೇಶ ಹೀಗಿದೆ. "ಸಂಸ್ಥೆಯ ಕಾರ್ಯದರ್ಶಿಗಳ ಮಗನ ಮದ್ವೆ ನಡೆದಿತ್ತು. ಕಾರ್ಯದರ್ಶಿಗಳ ಮನೆ ಒಳ್ಗೆ ಎಲ್ರ ಜೊತೆ ನಾನೂ ಊಟ ಮಾಡ್ತಿದ್ದೆ. ಕಾರ್ಯದರ್ಶಿಯವ್ರು ಎಲ್ರನ್ನೂ ವಿಚಾರಿಸಿಕೊಂಡು ಬರುತಿದ್ರು. ನನ್ನತ್ರಿಕೆ ಬಂದ್ರು, 'ನಮಸ್ಕಾರ ಸರ್' ಅಂದೆ. ತಕ್ಷಣ ಅವ್ರು ಹಾವ್ನ ತುಳ್ದು ಯದರ್ಕಂಡವ್ರಂಥಾದ್ರು. ಅವ್ರು ಕುತಕುತ ಕುದಿಯುತ್ತಿದ್ರು. 'ನಿನ್ಕೆಲ್ಸ ಇರೋದು ರಾತ್ರೆ, ಇವತ್ತು ಬೆಳಿಗ್ಗೆ ಸಾಲೆಗೆ ಯಾಕ್ ಬಂದಿದ್ದೆ ಅಂದರು'. ಮುಖ್ಯೋಪಾಧ್ಯಾಯರು ಹೇಳಿದ್ರು ಸರ್, ಅವ್ರೆ ನಿಮ್ಮನೇ ಊಟ್ಕೆ ಕರ್ಕಂಡ್ಬಂದಿದ್ರು ಸಾರ್. ಮುಖನ ಗಡ್ಗೆ ಗಾತ್ರ ಊದಿಸ್ಕಂಡು 'ಕೊರ್' ಅಂತ ನೆಲಕುಗ್ದು ಹೋದರು"[೨೫] ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಈ ಸನ್ನಿವೇಶದಲ್ಲಿ ಕೊನೆಗೆ ಲಕ್ಷ್ಮಣ್‌ರವರು ತಮ್ಮ ಸರ್ಕಾರಿ ನೌಕರಿಯನ್ನೇ ಕಳೆದುಕೊಳ್ಳುತ್ತಾರೆ. ಕೇವಲ ಶಾಲೆ ಕಾಯುವ ಒಬ್ಬ ಅಟೆಂಡರ್ ಆರ್ಥಿಕವಾಗಿ ಸಬಲರಿರುವ, ಮೇಲಾಧಿಕಾರಿಗಳ ಜೊತೆ ಹಾಗೂ ಸಾಮಾಜಿಕವಾಗಿ 'ಉಚ್ಚ' ಸ್ಥಾನದಲ್ಲಿರುವವರ

ಜೊತೆ ಊಟ ಮಾಡಿದ್ದೇ ಇಲ್ಲಿ ತಪ್ಪಾಗಿ ಕಂಡಿದೆ. ವೃತ್ತಿ ಮತ್ತು ವರ್ಗಗಳೆರಡೂ ಇಲ್ಲಿ ಪ್ರಧಾನವಾಗಿ, ಮಾನವೀಯತೆಯು ಮರೆಯಾಗಿ ಲಕ್ಷ್ಮಣ್‌ರವರು ಅವಮಾನಕ್ಕೆ ಒಳಗಾಗಿದ್ದಾರೆ. ವೃತ್ತಿ ಮತ್ತು ವರ್ಗಗಳೆರಡು ಅಂತರ್‌ಸಂಬಂಧಗಳನ್ನು ಒಳಗೊಂಡಿವೆ. ಹೆಚ್ಚು ಸಂಬಳ ಬರುವ ವೃತ್ತಿ ಹೊಂದಿರುವವರಿಗೆ ಇರುವ ಆದ್ಯತೆ, ಕಡಿಮೆ ಸಂಬಳ ಬರುವ ವೃತ್ತಿಯವರಿಗೆ ಇರುವುದಿಲ್ಲ. ಇಲ್ಲಿ ವೃತ್ತಿ ಜೊತೆಗೆ ಜಾತಿಯು ಅವಮಾನಕ್ಕೆ ಕಾರಣವಾಗಿದೆ. ಹೀಗಾಗಿ ವೃತ್ತಿ, ವರ್ಗ, ಜಾತಿ ತರತಮಗಳು ಅವಿಭಜಿತಗೊಂಡು ಅವಮಾನಗಳಿಗೆ ಕಾರಣವಾಗುವುದನ್ನು ಆತ್ಮಕಥೆಯು ನೋವು ತುಂಬಿದ ಧ್ವನಿಯಲ್ಲಿ ಚಿತ್ರಿಸಿದೆ.

**೫.೩.೪.** ಪ್ರತಿರೋಧ ಛಲ: ಬಡತನವು ತಿರಸ್ಕಾರಕ್ಕೆ ಒಳಗಾಗುವಂತೆ, ಬಡವರು ತಿರಸ್ಕಾರಕ್ಕೆ ಒಳಗಾಗುತ್ತಾರೆ. ಆದರೆ ವ್ಯಕ್ತಿಗಳಲ್ಲಿರುವ ಛಲ ಇಂತಹ ಅಪಮಾನಗಳಿಂದ ಮುಕ್ತವಾಗಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ 'ಬಿಚ್ಚಿದ ಜೋಳಿಗೆ'ಯ ಸನ್ನಿವೇಶವನ್ನು ನಿದರ್ಶಿಸಬಹುದಾಗಿದೆ. ತಂದೆಯ ಅಕಾಲಿಕ ಮರಣದ ಕಾರಣದಿಂದ ಸಂಪೂರ್ಣ ಸಾಲವು ಲೇಖಕರ ಮೇಲೆ ಹೊರೆಯಾಗಿ, ಶಿಕ್ಷಣ ಮುಂದುವರೆಸಲು ಸಹಾಯ ಕೇಳಿದಾಗ "ಈಗ ನೀನು ದಿವಾಳಿಕೋರ. ಒಂದ ದಮಡಿ ಆಸ್ತಿ ಇಲ್ಲ. ಹುಚ್ಚಪ್ಪ ಸುಮ್ಮಕ ಅಡ್ಡಾಡಬೇಡ. ಮನೀಗ ಹೋಗಿ ಎಲ್ಲಿಯಾದರು ದುಡಿ. ಕಾಲೇಜು ಮರೆತುಬಿಡು"[೨೬] ಎನ್ನುತ್ತಾರೆ. ಇಲ್ಲಿ ಬಡತನವು ಅಪಮಾನಕ್ಕೆ ಕಾರಣವಾಗಿದೆ. ಆದರೆ ಲೇಖಕರು ಇಂತಹ ಅಪಮಾನಗಳನ್ನು ಮೀರಿ, ಅತ್ಯುತ್ತಮ ವೈದ್ಯನಾಗಿ ಬಡತನದಿಂದ ಹೊರಬರುವುದು ಅಪಮಾನಿಸುವ ವ್ಯವಸ್ಥೆಗೆ ತೋರಿದ ಪ್ರತಿರೋಧವೇ ಆಗಿದೆ. ಮೇಲೆ ಉಲ್ಲೇಖಿಸಿರುವ ದೀವಾಳಿಕೋರ, ಹುಚ್ಚಪ್ಪ ಎನ್ನುವುದು ಆರ್ಥಿಕ ಸಬಲರಿಗೆ ಹೆಣ್ಣು ಕೊಟ್ಟು ಮದುವೆ ಮಾಡುವ ಆಲೋಚನೆಯ ಫಲವಾಗಿವೆ. ಆದರೆ ತಮ್ಮ ಬದುಕಿನಲ್ಲಿ ಹೆಣ್ಣು ಕೊಡಲು ತಕರಾರು ಮಾಡಿದವರೇ ಆಶ್ಚರ್ಯ ಪಡುವಂತೆ ಬೆಳೆದಿದ್ದು ನಾಗಲೋಟಿಮಠ ಅವರು ತೋರಿದ ಪ್ರತಿರೋಧವಾಗಿದೆ. ಹೀಗೆ ಕೆಲವು ಲೇಖಕರ ಇಡೀ ಬದುಕೇ ಪ್ರತಿರೋಧದ ಸಂಕೇತವಾಗಿರುವುದನ್ನು ಆತ್ಮಕಥೆಗಳಲ್ಲಿ ಗುರುತಿಸಬಹುದಾಗಿದೆ.

**೫.೪. ವರ್ಗ ಮತ್ತು ಮಹಿಳೆ : ಅವಮಾನ ಮತ್ತು ಪ್ರತಿರೋಧಗಳು**

**೫.೪.೧.** ಕೆಲವು ಕುಟುಂಬಗಳಲ್ಲಿ ಪತಿಯು ಮಾಲಿಕ ವರ್ಗ, ಪತ್ನಿಯರು ದುಡಿಯುವ ವರ್ಗದ ಪ್ರತಿನಿಧಿಯಾಗಿದ್ದಾರೆ. ಹೆಣ್ಣು ದುಡಿಯುತ್ತಿದ್ದರೂ ಅವಳು ತನ್ನ ಶ್ರಮವನ್ನು ಬಂಡವಾಳವಾಗಿ ಹಾಕುವ ಒಂದು ಯಂತ್ರವಿದ್ದಂತೆ. ಶ್ರಮದ ಬಂಡವಾಳದಿಂದ ಬರುವ ಎಲ್ಲಾ ಆದಾಯವನ್ನು ಗಂಡ ಎಂಬ ಮಾಲಿಕ ವರ್ಗ ತನ್ನ ಸುಪರ್ದಿಗೆ ತೆಗೆದುಕೊಳ್ಳುತ್ತಾ ಹಾಗೂ ತನ್ನ ದುಡಿಮೆಯಿಂದ ಬಂದ ಆದಾಯದ ಮೇಲಿನ ಹಕ್ಕನ್ನು ಹೆಂಡತಿ ತಾನಾಗಿಯೇ ಬಿಟ್ಟುಕೊಡುವಂತೆ ಮಾಡಲಾಗುತ್ತದೆ. ಇಂತಹ ಮಹಿಳೆಯರನ್ನು ಮಾತ್ರ ಸಾಮಾಜಿಕ ವ್ಯವಸ್ಥೆ ಆದರ್ಶದ ವ್ಯಾಪ್ತಿಗೆ ತಂದಿಟ್ಟು ನೋಡುತ್ತದೆ. ಇದಕ್ಕೆ ಸ್ವಲ್ಪ ಪ್ರತಿರೋಧ ತೋರಿದರೂ ಮಹಿಳೆಯನ್ನು ಗಯ್ಯಾಳಿ, ಮಾರಿ ಇನ್ನೂ ಮುಂತಾದ

ಪದಗಳಿಂದ ಅವಮಾನ ಮಾಡಲಾಗುತ್ತದೆ. ಇನ್ನು ದುಡಿಮೆ ಮಾಡದಿರುವ ಹೆಂಡತಿಯರ ಪರಿಸ್ಥಿತಿ ಬಹುತೇಕ ಸ್ವಾತಂತ್ರ್ಯ ರಹಿತ ಬದುಕಾಗಿರುತ್ತದೆ. ಅವಮಾನ ಎನ್ನುವುದು ಅವರ ಸಹಜ ಕ್ರಿಯೆ ಆಗಿರುತ್ತದೆ. ದುಡಿಯುವ ಮಹಿಳೆ ತನ್ನ ಆದಾಯವನ್ನು ಬಳಸುವ ಹಕ್ಕಿಲ್ಲವೆಂದರೆ ಅದು ಕೂಡ ಬಡತನವೇ ಆಗುತ್ತದೆ. ಉದಾಹರಣೆಗೆ 'ಅನುದಿನದ ಅಂತರಗಂಗೆ' ಆತ್ಮಕಥೆಯಲ್ಲಿ ಪ್ರತಿಭಾ ಅವರ ಗಂಡ ದುಡಿಯಲು ಹೋಗದಿದ್ದರೂ, ಪ್ರತಿಭಾ ಅವರ ಆದಾಯದ ಮೇಲೆ ಹಕ್ಕನ್ನು ಹೊಂದಿರುತ್ತಾನೆ. ಪ್ರತಿಭಾ ಎಲ್ಲಿಗೆ ಹೋಗಬೇಕಾದರೂ ಗಂಡನ ಮುಂದೆ ಅನುಮತಿಗೆ ಮತ್ತು ಆರ್ಥಿಕ ಸಹಾಯಕ್ಕೆ ಅಪೇಕ್ಷೆಪಡಬೇಕಾದ ಅನಿವಾರ್ಯತೆಗಳಿವೆ.

'ಗೊಂದಲಿಗ್ಯಾ'ದಲ್ಲಿ "ಹೆಂಡಂದಿರೆಂದರೆ ದುಡಿಯಲು ತಂದ ದನಗಳೆಂದು ನಮ್ಮ ಜಾತಿಯ ಗಂಡಸರು ಎಲ್ಲರ ಮುಂದೆ ಹೇಳುತ್ತಿದ್ದರು. ಹೆಣ್ಣು ಮಕ್ಕಳೇ ಈ ಮಾತನ್ನು ಒಪ್ಪಿಕೊಳ್ಳುತ್ತಿದ್ದರು. ಮುಂಡರಗಿ, ಸಿಂದೋಗಿ ಗೊಂದಲಿಗರಂತೂ ಹೆಣ್ಣು ದುಡಿಯಬೇಕು, ಗಂಡು ಹೆಣ್ಣಿನ ಮೇಲೆ ಬದುಕಬೇಕು ಎಂದೇ ಬೇರೆಯವರಿಗೂ ಉಪದೇಶ ಮಾಡುತ್ತಿದ್ದರು. ಹೆಣ್ಣು ಹೆರಿಗೆಯಾದ ಆರೇಳು ದಿನಕ್ಕೆ ದುಡಿಯಲು ಕಳುಹಿಸುತ್ತಾರೆ"[೨೭] ಎಂಬ ಉಲ್ಲೇಖವಿದೆ. ಮೇಲಿನ ಎರಡೂ ಸನ್ನಿವೇಶಗಳು ಕೌಟುಂಬಿಕ ಸನ್ನಿವೇಶದಲ್ಲಿ ಮಹಿಳೆಯರ ದುಸ್ಥಿತಿಯನ್ನು ತಿಳಿಸುತ್ತವೆ. ಇಲ್ಲಿ ಮಹಿಳೆಯರು ಕೇವಲ ಆದಾಯ ತರುವ ವಸ್ತುವಾಗಿದ್ದಾರೆ. "ಹೆಣ್ಣು ಮಕ್ಕಳೇ ಈ ಮಾತನ್ನು ಒಪ್ಪಿಕೊಳ್ಳುತ್ತಿದ್ದರು"[೨೮] ಎಂಬ ಸಾಲುಗಳು ಪುರುಷ ಪ್ರಧಾನ ಮನಸ್ಥಿತಿಯು ತರತಮಗಳನ್ನು ಮಹಿಳೆಯರೇ ಒಪ್ಪಿಕೊಳ್ಳುವಂತೆ ಮಾಡಿರುವುದರ ಫಲಿತವಾಗಿವೆ. ಮೇಲಿನ ಸನ್ನಿವೇಶಗಳಲ್ಲಿ ಉಲ್ಲೇಖವಾಗಿರುವ ಲೇಖಕರ ಸಾಮಾಜಿಕ ಹಿನ್ನೆಲೆಗಳು ಬೇರೆ ಬೇರೆ ಆದರೂ ಅವರ ಅಪಮಾನಿತ ಸ್ಥಿತಿಗಳಲ್ಲಿ ಅಲ್ಪಮಟ್ಟಿಗೆ ಸಾಮ್ಯತೆಗಳಿರುವುದನ್ನು ಗುರುತಿಸಬಹುದಾಗಿದೆ. ಇದರ ಜೊತೆಗೆ 'ಗೊಂದಲಿಗ್ಯಾ'ದ 'ದುಡಿಯಲು ತಂದ ದನಗಳು' ಎಂಬ ಸಾಲು ಶೋಷಿತ ಸಮುದಾಯದೊಳಗೂ ಮಹಿಳೆಯು ಅತ್ಯಂತ ಶೋಷಿತಳು ಎಂಬ ವಾಸ್ತವತೆಯನ್ನು ಉದಾಹರಿಸುತ್ತದೆ. ಹೀಗೆ ಲಿಂಗ ಮತ್ತು ವರ್ಗಾಧಾರಿತ ತರತಮಗಳು ಮಹಿಳೆಯರನ್ನು ಅವಮಾನಿಸುವ ಸಂಗತಿಗಳನ್ನು ಆತ್ಮಕಥೆಗಳು ಕಾಣಿಸುತ್ತವೆ.

**೫.೪.೨.** ಬದುಕು ಕಟ್ಟಿಕೊಳ್ಳುವ ಪ್ರತಿರೋಧಗಳು: 'ಮಾತಂಗಿ ದೀವಟಿಗೆ'ಯಲ್ಲಿನ "ಇಷ್ಟಾದರೂ ನಾವ್ಯಾರು ಬಡತನಕ್ಕೆ ಹೆದರುತ್ತಿರಲಿಲ್ಲ"[೨೯] ಎಂಬ ಸಾಲುಗಳು ದಮನಿತರು ಬಡತನ, ಹಸಿವು, ಅವಮಾನ ತುಂಬಿದ ಬದುಕನ್ನು ಮೀರಿ ಬೆಳೆಯುವ ಚೈತನ್ಯಾತ್ಮಕತೆ ಹೊಂದಿರುವುದನ್ನು ಸಾಕ್ಷೀಕರಿಸುತ್ತವೆ. ಈ ಚೈತನ್ಯಾತ್ಮಕತೆಯಲ್ಲಿ ಪ್ರತಿರೋಧದ ಛಲವಿದೆ. ಅಸ್ಪೃಶ್ಯತೆ, ಬಡತನ, ಲಿಂಗ ಭೇದದ ಕಾರಣಕ್ಕಾಗಿ ಅನುಭವಿಸಿದ ಎಲ್ಲಾ ಅವಮಾನಗಳನ್ನು ಮೀರಿ ಬದುಕಿದ ಸಮತಾ ದೇಶಮಾನೆಯವರ ಬದುಕೇ ಪ್ರತಿರೋಧದ ಸಂಕೇತವಾಗಿದೆ. ಬಡತನವನ್ನು ನೀಗಿಸಿಕೊಳ್ಳಲು ಲೇಖಕರ ಕುಟುಂಬವು ಹಾಕುತ್ತಿದ್ದ ಶ್ರಮ ಮತ್ತು ದುಡಿಮೆಗೆ ಇದ್ದ ಪರ್ಯಾಯ ಅವಕಾಶಗಳು

ಲೇಖಕರಿಂದ ಹೀಗೆ ಹೇಳಿಸಿವೆ ಮತ್ತು ಬಡತನದ ಅವಮಾನಗಳನ್ನೇದುರಿಸುವ ಆತ್ಮಸ್ಥೈರ್ಯವನ್ನು ತುಂಬಿವೆ. ಹೀಗೆ ದಮನಿತರ ಬದುಕು ಕೇವಲ ಅಪಮಾನದ ಸರಕಾಗದೆ, ಭರವಸೆಯ ಬೆಳಕೂ ಆಗಿರುವುದನ್ನು ಆತ್ಮಕಥೆಯಲ್ಲಿ ಕಾಣಬಹುದಾಗಿದೆ.

**೫.೫. ಅಭಿವ್ಯಕ್ತಿ ಸ್ವರೂಪ**

ಆತ್ಮಕಥೆಯು ವ್ಯಕ್ತಿಯ ಬದುಕಿನ ನೇರ ನಿರೂಪಣೆ ಅಲ್ಲ. ಅಲ್ಲಿ ಕಲಾತ್ಮಕತೆಯ ಕುಸುರಿ ಇರುತ್ತದೆ. ವ್ಯಕ್ತಿಯಿಂದ ವ್ಯಕ್ತಿಗೆ ಅದು ಭಿನ್ನವು, ವಿಶಿಷ್ಟವೂ ಆಗಿರುತ್ತದೆ. ಹೀಗಾಗಿ ಆತ್ಮಕಥೆಗಳಲ್ಲಿ ನಿರೂಪಣೆಗೊಂಡಿರುವ ಈ ಅಭಿವ್ಯಕ್ತಿಯ ವಿಶಿಷ್ಟತೆಯನ್ನು ಅರಿಯುವ ಪ್ರಯತ್ನವನ್ನು ಕೊನೆಯ ಅಧ್ಯಾಯದಲ್ಲಿ ಮಾಡಲಾಗುತ್ತದೆಯಾದರೂ ಪ್ರಸ್ತುತ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಣೆ ಮಾಡಲಾಗುವುದು.

ರೂಪಕಗಳ ಮೂಲಕ ಅಭಿವ್ಯಕ್ತಿ: ಆತ್ಮಕಥನಕಾರರು ತಮ್ಮ ಅಸಹಾಯಕ ಬದುಕನ್ನು ಚಿತ್ರಿಸಲು ಕೆಲವೆಡೆ ರೂಪಕಗಳನ್ನು ಬಳಸುವುದರ ಜೊತೆಗೆ ತಮ್ಮ ಅಸಹಾಯಕತೆಯನ್ನು ಓದುಗರಿಗೆ ಹೆಚ್ಚು ಆಪ್ತವಾಗಿ ಕಟ್ಟಿಕೊಡುತ್ತಾರೆ. ಲಕ್ಷ್ಮಣ ಗಾಯಕವಾಡರು ತಮ್ಮ ಉಚಲ್ಯಾ ಸಮುದಾಯದ ದಾರುಣ ಬದುಕನ್ನು ಈ ಕೆಳಗಿನ ರೂಪಕದ ಮೂಲಕ ಚಿತ್ರಿಸುತ್ತಾರೆ. "ಯಾವುದೇ ಸಾಕು ಪ್ರಾಣಿಗೆ ಮೇವನ್ನು ಹಾಕದಿದ್ದರೆ ಕೂಗುತ್ತದೆ. ರಾತ್ರಿ ಹಸಿವಾದರೆ ಕಟ್ಟಿದ ಹಗ್ಗ ಕಿತ್ತೊಗೆದು ಹೊಲದಲ್ಲಿ ಬೆಳೆದ ಹಸಿರು ಫಸಲಿನ ಮೇಲೆ ದಾಳಿ ಮಾಡುತ್ತದೆ. ಇದನ್ನ ಕಂಡ ಮಾಲಿಕ ಬಡಿದು ಕಟ್ಟಾಕಿದಾಗ ಅನಂತರ ದಂಡ ತುಂಬಿ ದನಕರು ಬಿಡಿಸಿಕೊಳ್ಳುತ್ತಾರೆ. ನಮ್ಮ ಬದುಕು ಹೀಗೆಯೇ ಆಗಿದೆ."[೩೦] ಇಲ್ಲಿ ತಳ ಸಮುದಾಯದವರ ಬಡತನದ ಬದುಕನ್ನು ಆತ್ಮಕಥನಕಾರರು ಸಾಕು ಪ್ರಾಣಿಯ ರೂಪಕದ ಮೂಲಕ ಸ್ಪಷ್ಟಪಡಿಸಿದ್ದಾರೆ. ಎಲ್ಲೋ ನಡೆದ ಕಳ್ಳತನಕ್ಕೆ ಉಚಲ್ಯಾ ಜನರನ್ನು ಹಿಡಿದುಕೊಂಡು ಹೋಗಿ, ದುಡ್ಡು ಕೊಟ್ಟರೆ ಮಾತ್ರ ಬಿಡುಗಡೆ ಮಾಡುವ ಪೋಲೀಸರು ಇಲ್ಲಿ ಮಾಲೀಕರನ್ನು ಸೂಚಿಸಿದರೆ, ಹಸಿವಿಗಾಗಿ ಹಂಬಲಿಸುವ ಸಾಕುಪ್ರಾಣಿಗಳಾಗಿ ಮತ್ತು ದಂಡ ತುಂಬುವ ಅಮಾಯಕರಾಗಿ ಉಚಲ್ಯಾ ಸಮುದಾಯವನ್ನು ಕಾಣಬಹುದಾಗಿದೆ. ಎಲ್ಲಾ ಬಗೆಯ ಆತ್ಮಕಥೆಗಳಲ್ಲಿ ಬಡತನ ಮತ್ತು ಹಸಿವು ಸ್ಥಾಯಿಭಾವಗಳಾಗಿದ್ದು, ಅವಮಾನಗಳುಂಟಾಗಲು ಕಾರಣಗಳೂ ಆಗಿವೆ.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಾಯದಲ್ಲಿ ಆತ್ಮಕಥನಕಾರರು ವರ್ಗ ತಾರತಮ್ಯಗಳಿಂದ ಅನುಭವಿಸಿರುವ ಅವಮಾನಗಳನ್ನು ಮತ್ತು ಆ ಅವಮಾನಗಳಿಗೆ ನೀಡಿರುವ ಪ್ರತಿರೋಧಗಳ ಹಲವು ಸ್ವರೂಪಗಳನ್ನು ವಿವಿಧ ನೆಲೆಯಲ್ಲಿ ಚರ್ಚಿಸಲಾಗಿದ್ದು, ಈ ವಿವಿಧ ನೆಲೆಗಳು ಆಕರಗಳೊಳಗಿನ ವಿವರಗಳ ಫಲವಾಗಿವೆ. ಇವು ಸಾಮಾಜಿಕ ವ್ಯವಸ್ಥೆಯ ಹಲವು ಒಳನೋಟಗಳನ್ನು ಸಹಜವಾದ ಭಾಷೆಯಲ್ಲಿ ಅಭಿವ್ಯಕ್ತಿಸಿವೆ.

**ಕೊನೆ ಟಿಪ್ಪಣಿ**

೧. ಹಿರೇಮಠ ಆರ್.ಸಿ, ಉರಿ ಬರಲಿ ಸಿರಿ ಬರಲಿ, ಪು. ೩,೪

೨. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪು. ೪೮

೩. ಲಕ್ಷ್ಮಣ್. ಎಂ,ಸಂಬೋಳಿ, ಪು. ೬೬

೪. ತುಂಬಾಡಿ ರಾಮಯ್ಯ, ಮಣೆಗಾರ, ಪು. ೫೫

೫. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೩೧

೬ ಅದೇ, ಪು. ೩೧

೭ ಅದೇ, ಪು. ೩೧

೮. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪು. ೧೯

೯. ಅದೇ, ಪು. ೮೫-೮೮

೧೦. ಭೈರಪ್ಪ ಎಸ್.ಎಲ್, ಭಿತ್ತಿ, ಪು. ೬೬

೧೧. ಅದೇ, ಪು. ೬೬

೧೨. ಅದೇ, ಪು. ೬೬

೧೩. ಅದೇ, ಪು. ೭೦

೧೪. ನಾಗಲೋಟಿ ಮಠ ಸ.ಜ. ಬಿಚ್ಚಿದ ಜೋಳಿಗೆ, ಪು . ೬೯

೧೫. ಅದೇ, ಪು. ೬೯

೧೬. ಅದೇ, ಪು. ೬೯

೧೭. ಭೈರಪ್ಪ ಎಸ್.ಎಲ್, ಭಿತ್ತಿ, ಪು. ೧೫೫

೧೮. ಲಕ್ಷ್ಮಣ್. ಎಂ, ಸಂಬೋಳಿ, ಪು. ೪೨

೧೯. ತುಂಬಾಡಿ ರಾಮಯ್ಯ, ಮಣೆಗಾರ, ಪು. ೯೬

೨೦. ಮದರಿ ಎ.ಎಂ, ಗೊಂದಲಿಗ್ಯಾ, ಪು. ೨೦೪

೨೧. ಅದೇ, ಪು. ೧೪೩

೨೨. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೩೩

೨೩. ಅದೇ, ಪು. ೧೦

೨೪. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪುಟ. ೪೧

೨೫. ಲಕ್ಷ್ಮಣ್. ಎಂ, ಸಂಬೋಳಿ, ಪು. ೪೨

೨೬. ನಾಗಲೋಟಿ ಮಠ ಸ.ಜ, ಬಿಚ್ಚಿದ ಜೋಳಿಗೆ, ಪು. ೬೯

೨೭. ಮದರಿ ಎ.ಎಂ. ಗೊಂದಲಿಗ್ಯಾ, ಪು. ೧೯೨

೨೮. ಅದೇ, ಪು. ೨೩೧

೨೯. ಸಮತಾ ಬಿ. ದೇಶಮಾನೆ, ಮಾತಂಗಿ ದೀವಟಿಗೆ, ಪು. ೧೩೫

೩೦. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪುಟ. ೪೧,೪೨

ಅಧ್ಯಾಯ : ಆರು

# ಲಿಂಗದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

೬.೧. ವೈವಾಹಿಕ ಮತ್ತು ಕೌಟುಂಬಿಕ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೬.೨. ಸಾಂಸ್ಕೃತಿಕ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೬.೩. ತೃತೀಯ ಲಿಂಗಿಗಳಿಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೬.೪. ಅಭಿವ್ಯಕ್ತಿ ಸ್ವರೂಪ

ಅಧ್ಯಾಯ : ಆರು

# ಲಿಂಗದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

## ಪ್ರಸ್ತಾವನೆ

ಹಿಂದಿನ ಅಧ್ಯಾಯಗಳಲ್ಲಿ ಜಾತಿ, ವರ್ಗದ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ಎಂಬ ವಿಷಯದ ಕುರಿತು ಅಧ್ಯಯನ ಮಾಡಲಾಗಿದ್ದೂ, ಪ್ರಸ್ತುತ ಅಧ್ಯಾಯದಲ್ಲಿ ಲಿಂಗದ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳ ಕುರಿತು ಚರ್ಚಿಸಲಾಗುತ್ತದೆ. ಮೊದಲಿಗೆ 'ಲಿಂಗ' ಎಂಬ ಪರಿಭಾಷೆಯನ್ನು ಭಾಷಿಕವಾಗಿ ಗಮನಿಸಬೇಕಿದೆ. ಲಿಂಗ ಎಂಬುದು ಚಿಹ್ನೆ, ಜನನೇಂದ್ರಿಯ ಎಂಬರ್ಥಗಳನ್ನು ಹೊಂದಿದ್ದು, ವ್ಯಾಕರಣದಲ್ಲಿ ಇದು ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕಲಿಂಗ ಎಂಬ ಸಂಬೋಧನ ಸೂಚಕಗಳಾಗುತ್ತದೆ. ಲಿಂಗವು ಗಂಡು, ಹೆಣ್ಣುಗಳ ಜೈವಿಕ ಭೇದಗಳನ್ನು ಸೂಚಿಸುತ್ತಿದ್ದರೂ ಪುರುಷ ಪ್ರಧಾನ ವ್ಯವಸ್ಥೆಗೆ ಹೆಚ್ಚು ಆದ್ಯತೆ ನೀಡಿದೆ. ವರ್ಗ, ಜಾತಿಗೆ ಹೇಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಹಿನ್ನೆಲೆಗಳು ಇವೆಯೋ ಹಾಗೆಯೇ ಲಿಂಗವೂ ಸಹ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಹಿನ್ನೆಲೆಗಳನ್ನು ಹೊಂದಿದೆ. ಇದು ಜಾತಿ, ವರ್ಗದಂತೆ ಶ್ರೇಣೀಕರಣ ವ್ಯವಸ್ಥೆಯನ್ನು ಹೊಂದಿದ್ದು, ಈ ಶ್ರೇಣೀಕರಣ ವ್ಯವಸ್ಥೆ ಎಲ್ಲಿರುತ್ತದೆಯೋ ಅಲ್ಲಿ ಅವಮಾನಗಳಿರುತ್ತವೆ. ಈ ಅವಮಾನಗಳಿಗೆ ಕೆಲವೊಮ್ಮೆ ಪ್ರತಿಕ್ರಿಯೆ, ಮತ್ತೆ ಕೆಲವೊಮ್ಮೆ ಪ್ರತಿರೋಧಗಳು ವ್ಯಕ್ತವಾಗಿವೆ. ಹೀಗಾಗಿ ಲಿಂಗದ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳೆಂಬ ಅಧ್ಯಾಯ ಮಾಡಿಕೊಂಡು ಚರ್ಚಿಸಲು ಯತ್ನಿಸಲಾಗುವುದು.

ಪುರುಷ ಪ್ರಧಾನ ಸಮಾಜವು ಪ್ರಾಚೀನ ಕಾಲದಿಂದಲೂ ಮಹಿಳೆಯನ್ನು ತಮ್ಮ ಅಧೀನ ಅಥವಾ ತನಗೆ ಪೂರಕ ಎಂದು ಭಾವಿಸಿ ಅದರಂತೆ ನಡೆಸಿಕೊಂಡು ಬರುತ್ತಲಿದೆ. ಲಿಂಗ ವ್ಯವಸ್ಥೆಯಲ್ಲಿ ಪುರುಷರು ಪ್ರಥಮ ಆದ್ಯತೆಯಾದರೆ, ಮಹಿಳೆಯರು ದ್ವಿತೀಯ ದರ್ಜೆ ಎನಿಸಿಕೊಂಡಿದ್ದಾರೆ. ಈ ಕಾರಣಕ್ಕಾಗಿಯೇ 'ದ್ವಿತೀಯ ಲಿಂಗ' (ಸೆಕೆಂಡ್ ಸೆಕ್ಸ್) ಎಂಬ ಕೃತಿಯನ್ನು ಸ್ತ್ರೀವಾದಿ ಚಿಂತಕಿ ಸಿಮೋನ್ ದಿ ಬೋವಾ ಬರೆದರು. ಇದರಂತೆ ಮಹಿಳೆಯರನ್ನು ಕೆಲವೆಡೆಗಳಲ್ಲಿ ಭೋಗದ ವಸ್ತುವಾಗಿಯೂ ಮತ್ತೆ ಕೆಲವೆಡೆ ಮಾರುವ ವಸ್ತುವಾಗಿಯೂ ನೋಡಲಾಗಿದೆ. ಇದಕ್ಕೆ ಪೂರಕವಾದ ಉದಾಹರಣೆಗಳನ್ನು ಆತ್ಮಕಥೆಗಳ ಮೂಲಕ ಉದಾಹರಿಸುತ್ತಾ ಚರ್ಚಿಸಲು ಯತ್ನಿಸಲಾಗುವುದು.

'ಮನುಸ್ಮೃತಿ'ಯಲ್ಲಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಹೇಳಲಾಗಿದೆ. ಇದರ ಪ್ರಕಾರ ಬಾಲ್ಯದಲ್ಲಿ ತಂದೆ, ತಾಯಿಗಳೊಂದಿಗೆ, ಯೌವ್ವನದಲ್ಲಿ ಗಂಡನೊಂದಿಗೆ, ಮುಪ್ಪಿನಲ್ಲಿ ಮಕ್ಕಳೊಂದಿಗೆ ಆಶ್ರಯ ಪಡೆದಿರುತ್ತಾಳೆ. ಅದಕ್ಕಾಗಿಯೇ ಅವಳು ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬ ಅಭಿಪ್ರಾಯವನ್ನು ಮನು ವ್ಯಕ್ತಪಡಿಸುತ್ತಾನೆ. ಬಾಲ್ಯ ವಿವಾಹ, ವಿಧವಾ ವಿವಾಹ, ಸತಿ ಸಹಗಮನ ಪದ್ಧತಿ ಹಾಗೂ ಆತ್ಮಕಥೆಗಳಲ್ಲಿ ದಾಖಲಾಗಿರುವ 'ಬಿದರಕುಂದಿಯ ಪ್ರಸಂಗ', ದೇವದಾಸಿ ಪದ್ಧತಿ ಮುಂತಾದ 'ಸಾಂಪ್ರದಾಯಿಕ' ಆಚರಣೆಗಳ ಮೂಲಕ ಮಹಿಳೆಯರನ್ನು ಶೋಷಿಸುತ್ತಲೇ ಬರಲಾಗಿದೆ, ಹೀಗೆ ಎಲ್ಲಾ ರೀತಿಯಿಂದಲೂ ಮಹಿಳೆಯನ್ನು ದ್ವಿತೀಯ ಲಿಂಗಿ ಎಂದು ಆರೋಪಿಸುತ್ತ ನಂಬಿಸಲಾಗಿದೆ.

ಗಂಡು ಮತ್ತು ಹೆಣ್ಣಿಗೆ ಇರುವ ಜೈವಿಕ ಭಿನ್ನತೆಯನ್ನು ದುರುಪಯೋಗ ಪಡಿಸಿಕೊಂಡು ಅವುಗಳ ನಡುವೆಯೇ ಶ್ರೇಣೀಕರಣವನ್ನು ನಿರ್ಮಿಸಲಾಗಿದೆ. ತಾಯಿ, ದೇವಿ, ಭಾರತಾಂಬೆ, ಭುವನೇಶ್ವರಿ ಎಂಬ ಆದರ್ಶಗಳನ್ನು ಆರೋಪಿಸಿ ವಾಸ್ತವದಲ್ಲಿ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ. ವೇದಗಳ ಕಾಲದಿಂದಲೂ ಇಲ್ಲಿಯವರೆಗೂ ಒಂದು ಬಗೆಯ ಇಕ್ಕಟ್ಟಿನ ವಾತಾವರಣದಲ್ಲಿಯೇ ಮಹಿಳೆಯರು ಬದುಕುತ್ತ ಬಂದಿದ್ದಾರೆ. ಅಲ್ಲಲ್ಲಿ ದಿಟ್ಟತನದಿಂದ ಬದುಕಿದ ಮಹಿಳೆಯರಿದ್ದರೂ ಅವರ ಪ್ರಮಾಣ ಬಹಳ ಕಡಿಮೆ. ಬಹಳ ಧೈರ್ಯ, ಮಾತುಗಾರಿಕೆ ಇರುವ ಮಹಿಳೆಯರನ್ನು ಬಜಾರಿ, ಬಾಯಿ ಬಡುಕಿ ಮುಂತಾದ ಹೆಸರುಗಳಿಂದ ಮೂದಲಿಸುವ ಪರಿಪಾಠವು ಸಮಾಜದಲ್ಲಿದೆ. ಹೆಣ್ಣು, ಹೊನ್ನು, ಮಣ್ಣು ಈ ಮೂರರಲ್ಲಿ ಮೊದಲನೇ ಸ್ಥಾನದಲ್ಲಿ ಹೆಣ್ಣನ್ನು ಕೂರಿಸಿ ಅವಳಿಗೆ ಮಾಯೆ, ಚಂಚಲೆ ಎಂದು ಆರೋಪಿಸಲಾಗಿದೆ, ಆದರೆ ಇಂತಹ ಪೂರ್ವಗ್ರಹಿಕೆಗಳನ್ನು ವೈಚಾರಿಕವಾಗಿ ಮುರಿದು ಕಟ್ಟುವ ಪ್ರಯತ್ನಗಳು ಸಹ ನಡೆದಿವೆ. ಅಲ್ಲಮಪ್ರಭುವಿನ 'ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ' ಎಂಬ ವಚನವನ್ನು ಇದಕ್ಕೆ ಉದಾಹರಣೆಯಾಗಿ ಕಾಣಬಹುದಾಗಿದೆ. ಸಾಂಪ್ರದಾಯಿಕ ಸಮಾಜದಲ್ಲಿ ಮಹಿಳೆಯರಿಗೆ ಶಿಕ್ಷಣ ಪಡೆಯಲು ಅವಕಾಶ ನೀಡದೆ ಅಕ್ಷರ ಜ್ಞಾನದಿಂದಲೇ ವಂಚಿಸಲಾಗಿತ್ತು. ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ, ಅಂಬೇಡ್ಕರ್ ಅವರ ಹೋರಾಟದ ಫಲ ಇಂದು ಮಹಿಳೆಯರು ಶಿಕ್ಷಣ ಪಡೆದು ಅನೇಕ ಕ್ಷೇತ್ರದಲ್ಲಿ ಪ್ರವೇಶ ಪಡೆದು ಸಾಧನೆ ತೋರುತ್ತಿದ್ದಾರೆ. ಇಷ್ಟಾದರೂ ಮಹಿಳೆಯರನ್ನು ನೋಡುವ ದೃಷ್ಟಿಕೋನ ಸಮಾಜದಲ್ಲಿ ಪೂರ್ಣವಾಗಿ ಬದಲಾಗಿಲ್ಲ. ಪುರುಷರು ಸಾರ್ವಜನಿಕ ಕ್ಷೇತ್ರಗಳಿಗೆ ಪ್ರವೇಶ ಪಡೆದಷ್ಟು ಸುಲಭವಾಗಿ ಮಹಿಳೆಯರಿಗೆ ಪ್ರವೇಶ ಸಿಗುವುದು ಕಡಿಮೆ. ಹಿಂದೆ ಸಿನಿಮಾ ಮತ್ತು ರಂಗಭೂಮಿಯಲ್ಲಿ ನಟನೆ ಮಾಡುವ ಕಲಾವಿದೆಯರನ್ನು 'ಸೂಳೆ'ಯರಂತೆ ಕಾಣಲಾಗುತ್ತಿತ್ತು. ಉಮಾಶ್ರೀ ಮುಂತಾದ ನಟಿಯರೆಲ್ಲ ಇಂತಹ ಅವಮಾನಗಳಿಗೆ ಒಳಗಾಗಿರುವ ಉಲ್ಲೇಖಗಳು ಆತ್ಮಕಥೆಗಳಲ್ಲಿವೆ. ಇದರ ಜೊತೆಗೆ ಅತ್ಯಾಚಾರ ಕೂಡ ಲಿಂಗ ಸಮಾನತೆಗೆ ತೊಡಕಾಗಿದೆ. ದುಡಿಯುವ ಮಹಿಳೆ ತಾನು ದುಡಿದ ಹಣವನ್ನು ಗಂಡನಿಗೆ ಕೊಡಲೇಬೇಕಾದ ಅನಿವಾರ್ಯತೆ ಇದೆ. ಈ ಸಮಸ್ಯೆಗಳು ಮಹಿಳೆಯಾದ ಕಾರಣಕ್ಕೆ ಅನುಭವಿಸುವಂತಹ ಸಂಗತಿಗಳಾಗಿವೆ.

ರಾಜಕೀಯ ಮೀಸಲಾತಿಗಾಗಿ ಮನೆಯ ಮಹಿಳೆಯರನ್ನು ಚುನಾವಣೆಯಲ್ಲಿ ಗೆಲ್ಲಿಸಿ, ಪುರುಷರು ಅಧಿಕಾರ ನಡೆಸುವ ವರದಿಗಳನ್ನು ನಾವು ಗಮನಿಸಬಹುದು. ಲಿಂಗ ವ್ಯವಸ್ಥೆಯಲ್ಲಿ ಕೇವಲ ಪುರುಷರು, ಮಹಿಳೆಯರಷ್ಟೇ ಅಲ್ಲದೆ ತೃತೀಯ ಲಿಂಗಿಗಳೂ ಇದ್ದಾರೆ. 'ನಾನು ಅವನಲ್ಲ ಅವಳು', 'ಬದುಕು ಬಯಲು' ಇನ್ನೂ ಮುಂತಾದ ಆತ್ಮಕಥೆಗಳು ಮಂಗಳಮುಖಿಯರ ದಾರುಣಕರ ಹಾಗೂ ಪ್ರತಿರೋಧದ ಬದುಕನ್ನು ಕಟ್ಟಿಕೊಡುತ್ತವೆ. ಇವರ ಬದುಕೇ ಅವಮಾನಗಳಿಂದ ಕೂಡಿದ್ದು, ಹಿಜಡಾ ಮತ್ತು ನಂಬರ್ ನೈನ್ ಎಂದು ಕರೆಸಿಕೊಳ್ಳುವುದರಿಂದಲೇ ಇವರ ಅವಮಾನಿತ ಬದುಕು ಆರಂಭವಾಗುತ್ತದೆ. ಮಹಿಳೆಯರು ಮತ್ತು ತೃತೀಯ ಲಿಂಗಿಗಳು ಇಷ್ಟೆಲ್ಲಾ ಅವಮಾನಗಳಿಗೆ ತುತ್ತಾದರೂ ತಾವುಂಡ ಅವಮಾನಗಳಿಗೆ ಅಲ್ಲಲ್ಲಿ ಪ್ರತಿರೋಧ ತೋರಿರುವ ಹಲವು ಸಂಗತಿಗಳು ಆತ್ಮಕಥೆಗಳಲ್ಲಿವೆ. ಸಾಹಿತ್ಯ ಲೋಕದಲ್ಲಿ ಪುರುಷರ ಆತ್ಮಕಥೆಗಳು ಇರುವಷ್ಟು ಮಹಿಳಾ ಆತ್ಮಕಥೆಗಳಿಲ್ಲ. ತಲೆತಲಾಂತರದಿಂದ ಮಹಿಳೆಗೆ ನೋವು, ಅವಮಾನಗಳನ್ನು ನುಂಗಿಕೊಳ್ಳುವುದೇ ಸಹಜ ಗುಣವೆಂಬಂತೆ ಹೇರಲಾಗಿದೆ. 'ಕಾರ್ಯೇಶು ಧಾಸಿ ಕರುಣೇಶು ಮಂತ್ರಿ ಭೂಜ್ಯೆಶು ಮಾತಾ ಕ್ಷಮಯಾ ಧರಿತ್ರಿ' ಎಂಬ ಶ್ಲೋಕ ಪ್ರಸಿದ್ಧವಾಗಿದೆ. ಇದು ಹೆಣ್ಣನ್ನು ಭೂಮಿ ತಾಯಿ, ಸಹನೆ ಉಳ್ಳವಳು, ಕ್ಷಮಿಸುವವಳು ಎಂಬ ಮನಸ್ಥಿತಿಯನ್ನು ಪ್ರತಿನಿಧಿಸುತ್ತದೆ. ಹೆಣ್ಣು ತನ್ನ ಕಷ್ಟ, ಸುಖವನ್ನು ಯಾರಲ್ಲಿಯೂ ಹೇಳಿಕೊಳ್ಳಬಾರದು ಎಂಬ ಆಲೋಚನೆಗಳ ಮೂಲಕ ಅವಳ ಅಭಿವ್ಯಕ್ತಿ ಸಾಮರ್ಥ್ಯವನ್ನೇ ಬಹಳಷ್ಟು ಮಟ್ಟಿಗೆ ಕುಗ್ಗಿಸಲಾಗಿದೆ.

ಅಮೃತಾ ಪ್ರೀತಂ ಅವರು ಆತ್ಮಕಥೆ ಬರೆಯುವುದರ ಕುರಿತು ಖುಷ್ವಂತ್ ಸಿಂಗ್ ಅವರ ಜೊತೆ ಚರ್ಚಿಸಿದಾಗ, "ನಿನ್ನ ಬದುಕೇನು ಮಹಾ ರಸೀದಿ ತಿಕೀಟಿನ ಬೆನ್ನ ಮೇಲೆ ಬರೆಯಬಹುದು ಅಂದಿದ್ದರು."[೧] ಇದು ಮಹಿಳೆಯರ ಸಾಹಿತ್ಯ ಮತ್ತು ಬದುಕನ್ನು ಅವಮಾನಿಸುವುದರ ಜೊತೆಗೆ ಅವರ ಅಭಿವ್ಯಕ್ತಿಯನ್ನು ಕೇವಲವಾಗಿ ನೋಡುವ ಪ್ರವೃತ್ತಿಯ ಭಾಗವಾಗಿದೆ. ಈ ನಿಂದನೆ ನಡುವೆಯೂ ಅಮೃತಾ ಅವರು ಆತ್ಮಕಥೆ ಬರೆದರು. ಲೇಖಕಿಯರು ತಮ್ಮ 'ಮೇಲಾಗುವ' ಅಥವಾ ಸಮಾಜದಲ್ಲಿರುವ ಶೋಷಣೆಗಳನ್ನು ಬೇರೆ ಬೇರೆ ಪಾತ್ರಗಳ ಮೂಲಕ ಕಥೆ, ಕಾದಂಬರಿಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಬಹುಶಃ ಇಲ್ಲಿ ಅಭಿವ್ಯಕ್ತಿ ಪಡಿಸಿದ್ದಕ್ಕಾಗಿಯೇ ಆತ್ಮಕಥೆಗಳಲ್ಲಿ ಬರೆಯುವುದೇನೂ ಇಲ್ಲವಾಗಿರಬಹುದು. ಕಥೆ, ಕಾದಂಬರಿಗಳಲ್ಲಿ ಅವರ ವೈಯಕ್ತಿಕ ಬದುಕಿನ ಚರ್ಚೆ ಬರುವುದಿಲ್ಲ. ಆದರೆ ಆತ್ಮಕಥೆಯಲ್ಲಿ ತಮ್ಮ ಮೇಲಿನ ಹಿಂಸೆಯನ್ನು ಹೇಳಿಕೊಂಡರೆ ಅದರ ಸಾಮಾಜಿಕ ಆಯಾಮಗಳನ್ನು ಎದುರಿಸುವುದು ಕಷ್ಟವಾಗುತ್ತದೆ. ಇವೆಲ್ಲಾ ಮಿತಿಗಳು ಮಹಿಳೆಗೆ ಮಾತ್ರ ಇರುವಂತಹವು. ಇದಕ್ಕೆ ಅಪವಾದ ಎಂಬಂತೆ 'ಅನುದಿನದ ಅಂತರಗಂಗೆ' ಆತ್ಮಕಥೆಯು ರಚನೆಯಾಗಿದೆ. ಮಹಿಳಾ ಸಾಹಿತ್ಯವು ಆರಂಭದ ಹಂತದಲ್ಲೆ ಅವಮಾನಕ್ಕೆ ಒಳಗಾಗಿದೆ. 'ಅಡುಗೆ ಮನೆ ಸಾಹಿತ್ಯ' ಎಂಬ ಮೂದಲಿಕೆಯನ್ನು 'ಪ್ರಜ್ಞಾವಂತ' ಸಾಹಿತಿಗಳಿಂದಲೇ ದೂಷಿಸಿಕೊಂಡಿದೆ. ಇಂತಹ ಮೂದಲಿಕೆಗಳ ನಡುವೆಯೇ ಮಹಿಳಾ ಸಂವೇದನೆಯ ಸಾಹಿತ್ಯ ರಚನೆಯಾಗುತ್ತಿದೆ. ಸ್ತ್ರೀಗೆ ಶಿಕ್ಷಣವು ಎಷ್ಟು

ತಡವಾಗಿ ದೊರೆಯಿತೋ ಅಷ್ಟೇ ವಿಳಂಬವಾಗಿ ಆತ್ಮಕಥೆಗಳು ರಚನೆಯಾಗತೊಡಗಿವೆ. ಸಾಹಿತ್ಯ ಕ್ಷೇತ್ರವು ಮಹಿಳಾ ಸಾಹಿತ್ಯವನ್ನು ಅಷ್ಟೇ ಉಪೇಕ್ಷೆಯಿಂದ ನೋಡಿರುವುದು ಕೂಡ ಇದಕ್ಕೆ ಕಾರಣವಾಗಿದ್ದರೆ, ಮಹಿಳೆ ತನ್ನ ಅಂತರಂಗದ ಮತ್ತು ಬಹಿರಂಗದ ಬದುಕನ್ನು ಅಭಿವ್ಯಕ್ತಿಸಲು ಮುಕ್ತ ಅವಕಾಶ ಇಲ್ಲದಿರುವುದು ಮತ್ತೊಂದು ಕಾರಣವಾಗಿದೆ. ಆರಂಭದಲ್ಲಿ ವಿಮರ್ಶಾ ಕ್ಷೇತ್ರವೂ ಸಹ ಮಹಿಳಾ ಸಾಹಿತ್ಯವನ್ನು ಕಡೆಗಣಿಸಿದೆ. ವಿಶೇಷವಾಗಿ ಮಹಿಳೆಯರು ಮುಕ್ತವಾಗಿ ಆತ್ಮಕಥೆ ಬರೆದಾಗ ಏನೆಲ್ಲಾ ಪ್ರಶ್ನೆಗಳು ಉದ್ಭವವಾಗುತ್ತವೆ ಎಂಬುದಕ್ಕೆ 'ಅನುದಿನದ ಅಂತರಗಂಗೆ' ಆತ್ಮಕಥೆಯು ಉದಾಹರಣೆಯಾಗಿದ್ದರೂ, ಇತರೆ ಆತ್ಮಕಥೆಗಳ ರಚನೆಗೆ ಇದು ಸ್ಫೂರ್ತಿಯಾಗಿದೆ.

ಪುರುಷ ಪ್ರಧಾನ ಮನೋಧೋರಣೆಯು ಕೇವಲ 'ಪುರುಷ'ರಲ್ಲಿ ಮಾತ್ರ ಇರುವುದಿಲ್ಲ. ಮಹಿಳೆಯರಿಗೆ ಆಗುವ ಅವಮಾನಗಳು ಕೇವಲ ಪುರುಷರಿಂದ ಮಾತ್ರವಾಗದೆ ಮಹಿಳೆಯರಿಂದಲೂ ಆಗಿವೆ. ಮಹಿಳೆಯರಿಗೆ ಮಹಿಳೆಯರಿಂದಲೇ ಅವಮಾನಗಳುಂಟಾದರೂ ಅವಮಾನಿಸಿದ ಮಹಿಳೆಯರಲ್ಲಿ ಇರುವುದು ಪುರುಷ ಪ್ರಧಾನ ಸಮಾಜದ ಮನೋಧೋರಣೆಯೇ ಆಗಿದೆ. ಆದರೂ ಸಾಮಾಜಿಕ ವ್ಯವಸ್ಥೆಯಲ್ಲಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂದು ಆರೋಪಿಸುತ್ತ ತನ್ನನ್ನು ಮರೆ ಮಾಚಿಕೊಳ್ಳುವ ಪ್ರಯತ್ನವನ್ನು ಆ ಸಮಾಜ ಮಾಡುತ್ತಿರುತ್ತದೆ. ಪ್ರತಿಯೊಂದು ತಪ್ಪಿಗೂ ಮಹಿಳೆಯೇ ಕಾರಣವೆಂದು ದೂರುತ್ತಿದೆ. ಮಕ್ಕಳಾಗದಿರುವುದಕ್ಕೆ ಕೆಲವೊಮ್ಮೆ ಗಂಡನು ಕಾರಣವಾಗಿದ್ದರೂ ಹೆಂಡತಿಯನ್ನೇ ಬಂಜೆ, ಗೊಡ್ಡೆಮ್ಮೆ ಎಂದು ಅವಮಾನಿಸಲಾಗುತ್ತಿದೆ. ಇಂತಹ ಅವಮಾನಗಳಿಗೆ ಸುದೀರ್ಘ ಪರಂಪರೆ ಇದ್ದರೂ ಮಹಿಳೆಯರು ಅದನ್ನು ಕೆಲವೊಂದು ವೇಳೆ ಸಹಿಸುತ್ತಾ, ಮತ್ತೆ ಕೆಲವು ಬಾರಿ ಪ್ರತಿರೋಧಿಸುತ್ತ ಬಂದಿರುವುದನ್ನು ಗಮನಿಸಬಹುದು. ಈ ಅವಮಾನ ಮತ್ತು ಪ್ರತಿರೋಧಗಳು ಒಂದು ಧರ್ಮಕ್ಕೆ ಸೀಮಿತವಲ್ಲ ಎಲ್ಲಾ ಧರ್ಮಗಳಲ್ಲೂ ಮಹಿಳೆ ದ್ವಿತೀಯ ಲಿಂಗಿಯಾಗಿಯೇ ಸಾಕಷ್ಟು ಅವಮಾನಗಳಿಗೆ ಒಳಗಾಗಿದ್ದಾಳೆ. ಸಾರಾ ಅಬೂಬಕ್ಕರ್ ಅವರ 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರೆಹದಲ್ಲಿ ಧಾರ್ಮಿಕ ಮೂಲಭೂತವಾದವು ಮತ್ತು ಪುರುಷ ಪ್ರಧಾನ ಮನೋಧೋರಣೆಯು ಮಹಿಳೆಯರಿಗೆ ಉಂಟು ಮಾಡಿರುವ ಸಂಕಷ್ಟಗಳ ವಿವರಗಳಿವೆ. ಪರದಾ ಮತ್ತು ತಲಾಖ್ ಪದ್ಧತಿಗಳು ಸಾಂಸ್ಕೃತಿಕವಾಗಿ ಹೆಣ್ಣನ್ನು ಧರ್ಮದ ಹೆಸರಲ್ಲಿ ಅವಮಾನಗೊಳಿಸುತ್ತಲೇ ಬಂದಿವೆ. ಇಂತಹ ದಮನಕಾರಿ ಪದ್ಧತಿಗಳನ್ನು ಸಾರಾ ಅವರು ಕುರುಡಾಗಿ ಒಪ್ಪದೇ, ಪ್ರಶ್ನಿಸುತ್ತಾರೆ. ಅವುಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಎಲ್ಲಾ ಜಾತಿ, ಎಲ್ಲಾ ಧರ್ಮದಲ್ಲಿರುವ ಮಹಿಳೆಯರು ಒಂದಲ್ಲ ಒಂದು ಕಾರಣಕ್ಕೆ ಅವಮಾನ ಮತ್ತು ಪ್ರತಿರೋಧಗಳನ್ನು ಅನುಭವಿಸುತ್ತಿದ್ದರೂ, ಅದು ಮಹಿಳೆಯ ಸಾಂಸ್ಕೃತಿಕ ಹಿನ್ನೆಲೆ, ಶಿಕ್ಷಣ, ಸಾಮಾಜಿಕ ಪ್ರಜ್ಞೆಯ ಆಧಾರದ ಮೇಲೆ ಭಿನ್ನ ಭಿನ್ನವಾಗಿರುತ್ತವೆ. ದಲಿತ ಮಹಿಳೆಯು ಜಾತಿ ಮತ್ತು ಲಿಂಗ ಹಾಗೂ ವರ್ಗ, ವರ್ಣದ ಕಾರಣಕ್ಕೆ ಅವಮಾನ ಅನುಭವಿಸುವ

ಅವಕಾಶಗಳಿರುತ್ತವೆ. ಅಂದರೆ ಇತರ ಮಹಿಳೆರಿಗಿಲ್ಲದ ಅಸ್ಪೃಶ್ಯತೆಯು ಇವರನ್ನು ಕಾಡುತ್ತದೆ. ಕೆಲವೊಮ್ಮೆ ಬಣ್ಣವೂ ಸಹ ಅವಮಾನಗಳಾಗುವುದಕ್ಕೆ ಕಾರಣವಾಗುತ್ತದೆ. ಅವಮಾನದ ಪ್ರಜ್ಞೆ ಇಲ್ಲದಿರುವ ಮಹಿಳೆ ತನಗಾಗುವ ಶೋಷಣೆಯನ್ನು ಸಹಜವೆಂಬಂತೆ ಭಾವಿಸಿದರೆ; ಇರುವ ಮಹಿಳೆ ಅದನ್ನು ಪ್ರತಿರೋಧಿಸುವ ಸಾಧ್ಯತೆ ಇರುತ್ತದೆ. ಕೆಲವೊಮ್ಮೆ ಈ ಪ್ರಜ್ಞೆ ಇದ್ದರೂ ಅಸಹಾಯಕವಾಗಿ ಉಳಿಯುವ ಸಾಧ್ಯತೆಯೇ ಹೆಚ್ಚಿರುತ್ತದೆ. ಪ್ರತಿರೋಧವೂ ಸಹ ಹಲವು ಬಗೆಗಳಲ್ಲಿ ಅಭಿವ್ಯಕ್ತಿಗೊಂಡಿರುವ ಸಾಧ್ಯತೆಗಳಿವೆ. ಅನುಪಮಾ ನಿರಂಜನ ಅವರ ಅಭಿಪ್ರಾಯದಂತೆ ಬರಹ ಕೂಡ ಒಂದು ಬಗೆಯ ಪ್ರತಿರೋಧವಾಗಿದೆ. ಈ ಬಗೆಯ ಪ್ರತಿರೋಧವು ಅಕ್ಕಮಹಾದೇವಿಯಿಂದಲೇ ಆರಂಭವಾಗಿದೆ. ಎಷ್ಟೇ ಮಹಿಳೆಯರನ್ನು ಹತ್ತಿಕ್ಕುವ ಪ್ರಯತ್ನಗಳು ನಡೆದರೂ ಅದರಿಂದ ಹೊರಗೆ ಬರುವ ಪ್ರಯತ್ನವು ಇತಿಹಾಸದಲ್ಲಿ ಸಾಕಷ್ಟು ನಡೆದಿವೆ. ವೈವಾಹಿಕ ಜೀವನದ ಕಟ್ಟುಪಾಡುಗಳನ್ನು ಮುರಿದು ಹೊರಬಂದ ಅಕ್ಕಮಹಾದೇವಿ, ದಿಟ್ಟತನದಿಂದ ಬರೆದ ಅನುಪಮಾ ನಿರಂಜನ, ಸಾರಾ ಅಬೂಬಕ್ಕರ್ ಮುಂತಾದವರೆಲ್ಲ ಪ್ರತಿರೋಧದ ಸಂಕೇತವಾಗಿದ್ದಾರೆ. ಹೀಗೆ ಹಲವು ಮಜಲುಗಳಲ್ಲಿರುವ ಲಿಂಗ ಪರಿಕಲ್ಪನೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಲಿಂಗದ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳನ್ನು ಈ ಕೆಳಗಿನಂತೆ ಉಪ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

**ಅ. ವೈವಾಹಿಕ ಅಥವಾ ಕೌಟುಂಬಿಕ ನೆಲೆಯಲ್ಲಿ ಮಹಿಳೆಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:** ವಿವಾಹವೆಂಬುದು ಸಮಾಜದ ಪ್ರಮುಖ ಸಂಸ್ಥೆಯಾಗಿದ್ದೂ, ಕೆಲವೊಂದಕ್ಕೆ ವಿವಾಹದ ಮುದ್ರೆ ಬೇಕಾಗಿರುತ್ತದೆ. ಕೆಲವು ಹಬ್ಬ, ಸಂಭ್ರಮದ ದಿನಗಳಲ್ಲಿ ವಿವಾಹವಾದ ಹಾಗೂ ತಾಯಿಯಾದ ಮಹಿಳೆಯರನ್ನು ಮಾತ್ರ ಕರೆಯಲಾಗುತ್ತದೆ. ಅವರೇ ಶ್ರೇಷ್ಠ ಎಂದು ನಂಬಿಸಲಾಗಿರುತ್ತದೆ. ಈ ಮೂಲಕ ಕೌಟುಂಬಿಕತೆ ಸೃಷ್ಟಿಸಲಾಗಿದೆ. ಪುರುಷರಿಗೆ ಮತ್ತು ಮಹಿಳೆಯರಿಗೆ ಕೌಟುಂಬಿಕತೆ ಎಂಬುದು ಏಕರೂಪವಾಗಿರುವುದಿಲ್ಲ. ಮಹಿಳೆಯರು ಪುರುಷರಿಗಿಂತ ತಮ್ಮ ಬಹುತೇಕ ಸಮಯವನ್ನು ಕೌಟುಂಬಿಕ ವಾತಾವರಣದಲ್ಲಿಯೇ ಕಳೆಯುತ್ತಾರೆ. ಬಹುತೇಕ ಆತ್ಮಕಥೆಗಳಲ್ಲಿ ಗಂಡಂದಿರು ಹೆಂಡತಿಯರ ಮೇಲೆ ದಬ್ಬಾಳಿಕೆ ಮಾಡುವುದೇ ಹೆಚ್ಚು. ಮನೆಯ 'ಯಜಮಾನಿ' ಎನ್ನುವುದು ಒಂದು ರೂಪಕವಾಗಿದ್ದು, ಮನೆಯೇ ಅವರ ಪ್ರಪಂಚವಾಗಿರುತ್ತದೆ. ತಮ್ಮ ಕುಟುಂಬದ ಎಲ್ಲಾ ಸದಸ್ಯರ ಅಗತ್ಯತೆಗಳನ್ನು ಈಡೇರಿಸುವುದು ಮಹಿಳೆಯರ ಕೆಲಸವಾಗಿದ್ದು, ಪತಿಯ ಅಂಕೆಯಲ್ಲಿಯೇ ಅದು ನಡೆಯಬೇಕಾಗುತ್ತದೆ. ಎಷ್ಟೋ ಕುಟುಂಬಗಳಲ್ಲಿ ಹೆಂಡತಿ ತಾನು ದುಡಿದ ದುಡ್ಡನ್ನು ಗಂಡನಿಗೆ ವರ್ಗಾಯಿಸಬೇಕಿರುತ್ತದೆ. ಮಹಿಳೆ ಕೆಲವೊಮ್ಮೆ ತನ್ನ ಅಂಕೆಯಂತೆ ನಡೆದುಕೊಳ್ಳದಿದ್ದರೆ ಶೀಲದ ಹೆಸರಲ್ಲಿ ಅವಮಾನ ಮಾಡಲಾಗುತ್ತದೆ. ಕುಟುಂಬ ಕೂಡ ಮಹಿಳೆಗೆ ಅವಮಾನಗಳನ್ನುಂಟು ಮಾಡುವ ಒಂದು ವ್ಯವಸ್ಥೆಯಾಗಿದ್ದು, ಕೆಲವೊಮ್ಮೆ ಇಂತಹ ಅವಮಾನಗಳಿಗೆ ಪರ್ಯಾಯ ವಿಧಾನಗಳ ಮೂಲಕ ಪ್ರತಿರೋಧ ತೋರುವ ಸಂಗತಿಗಳು ಆತ್ಮಕಥೆಗಳಲ್ಲಿವೆ.

**ಆ. ಸಾಂಸ್ಕೃತಿಕ ನೆಲೆಯಲ್ಲಿ ಮಹಿಳೆಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:** ಸಾಂಸ್ಕೃತಿಕತೆ ಎಂಬುದು ಹಲವು ಅರ್ಥಗಳನ್ನು ಒಳಗೊಂಡಿರುವ ಪರಿಕಲ್ಪನೆಯಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಸಾಂಸ್ಕೃತಿಕತೆಯನ್ನು ಆಚರಣೆ ಮತ್ತು ಸಂಪ್ರದಾಯದ ಹೆಸರಲ್ಲಿ ಮಹಿಳೆಯರ ಮೇಲೆ ಮಾಡಲಾಗುವ ಶೋಷಣೆಗಳಿಗೆ ಸೀಮಿತಗೊಳಿಸಲಾಗಿದೆ. ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಗಂಡಿಗೊಂದು ಸಂಸ್ಕೃತಿ ಚಹರೆಗಳಿದ್ದರೆ, ಮಹಿಳೆಗೊಂದು ಸಂಸ್ಕೃತಿ ಚಹರೆಗಳಿವೆ. ಪುರುಷ ಪ್ರಧಾನ ಸಮಾಜವು ಸಂಸ್ಕೃತಿ ಹೆಸರಲ್ಲಿ ಈ ಹಿಂದೆ ಹೇಳಿದಂತೆ ದೇವದಾಸಿ, ಪರದಾ ಪದ್ಧತಿಗಳ ಮೂಲಕ ಅವಮಾನಗಳನ್ನುಂಟು ಮಾಡುತ್ತಿದೆ. ಈ ಚಹರೆಗಳಿಂದ ಆಗುವ ಅವಮಾನ ಮತ್ತು ಪ್ರತಿರೋಧಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

**ಇ. ತೃತೀಯ ಲಿಂಗಿಗಳಿಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:** ಲಿಂಗ ಶ್ರೇಣೀಕರಣದ ಅತ್ಯಂತ ಕೊನೆಯ ಘಟ್ಟದಲ್ಲಿ ತೃತೀಯ ಲಿಂಗಿಗಳಿದ್ದಾರೆ. ಹಾರ್ಮೋನ್ಸ್‌ಗಳ ಬದಲಾವಣೆಯ ಕಾರಣಕ್ಕಾಗಿ, ಗಂಡು ಹೆಣ್ಣಾಗುವ ಪ್ರಕ್ರಿಯೆಯೇ ಅವಮಾನಗಳಿಂದ ಆರಂಭವಾಗುತ್ತದೆ. ಹೀಗೆ ಬದಲಾದವರನ್ನು ನಂಬರ್ ನೈನ್, ಹಿಜಡಾ, ಚಕ್ಕ ಎಂದು ಗುರುತಿಸಲಾಗುತ್ತದೆ. ಈ ಗುರುತಿಸುವ ಪದಗಳೇ ಎಷ್ಟೋ ಬಾರಿ ಅವಮಾನಗಳನ್ನುಂಟು ಮಾಡಿವೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಇವರಿಗೆ ಗೌರವ ಕೊಡಲಾಗುತ್ತದೆ. ಇನ್ನುಳಿದ ಸಂದರ್ಭಗಳಲ್ಲಿ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. ಕನ್ನಡದಲ್ಲಿ ನೇರವಾಗಿ ತೃತೀಯ ಲಿಂಗಿಗಳು ಬರೆದ ಆತ್ಮಕಥೆಗಳಿಲ್ಲ, ಅನುವಾದಿತ ಆತ್ಮಕಥೆಗಳಿವೆ. ಇವರಿಗೆ ಎಲ್ಲರಂತೆ ಬದುಕುವ ಹಂಬಲವಿದ್ದರೂ ಅದು ಇನ್ನೂ ಸಂಪೂರ್ಣವಾಗಿ ಸಾಧ್ಯವಾಗಿಲ್ಲ. ಬದುಕಲಿಕ್ಕಾಗಿ ಅನಿವಾರ್ಯವಾಗಿ ವೇಶ್ಯಾವೃತ್ತಿ ಹಾಗೂ ಇತರೆ ವೃತ್ತಿಗಳನ್ನು ಮಾಡಬೇಕಾದ ಅನಿವಾರ್ಯತೆ ಇದೆ. ಹೀಗೆ ದಾರುಣ ಬದುಕನ್ನು ಬದುಕುತ್ತಿರುವ ತೃತೀಯ ಲಿಂಗಿಗಳ ಅವಮಾನಿತ ಮತ್ತು ಪ್ರತಿರೋಧದ ಸಂಗತಿಗಳ ಬಗ್ಗೆ ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗುತ್ತದೆ.

**ಈ. ಅಭಿವ್ಯಕ್ತಿ ಸ್ವರೂಪ:** ಮಹಿಳಾ ಆತ್ಮಕಥೆಗಳಲ್ಲಿ ಕೌಟುಂಬಿಕ ಚಿತ್ರಣಗಳು ಹೆಚ್ಚಾಗಿ ಕಂಡುಬಂದರೆ, ಲೇಖಕರ ಆತ್ಮಕಥೆಗಳಲ್ಲಿ ಕೌಟುಂಬಿಕತೆಯನ್ನು ಅಲ್ಪಮಟ್ಟಿಗೆ ಕಾಣುತ್ತೇವೆ. ಆತ್ಮಕಥೆಗಳ ಶೀರ್ಷಿಕೆಗಳು ಕೂಡ ಆತ್ಮಕಥನಕಾರರ ಬದುಕನ್ನು ಭಿನ್ನವಾಗಿ ಅಭಿವ್ಯಕ್ತಿಸುತ್ತವೆ. ಲೇಖಕಿಯರು ಅನುಭವಿಸಿದ ಅಪಮಾನಗಳನ್ನೇ ಆತ್ಮಕಥೆಗಳ ಶೀರ್ಷಿಕೆಯನ್ನಾಗಿ ಇಡಲಾಗಿದೆ. ಮುಸ್ಲಿಂ ಮಹಿಳೆಯರು ಅನುಭವಿಸಿದ ಅವಮಾನಗಳನ್ನು ಧರ್ಮಾಧಾರಿತ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು ಎಂಬ ಅಧ್ಯಾಯದಲ್ಲಿ ಚರ್ಚಿಸಿರುವುದರಿಂದ ಇಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ.

## ೬.೧. ವೈವಾಹಿಕ ಅಥವಾ ಕೌಟುಂಬಿಕ ನೆಲೆಯಲ್ಲಿ ಲಿಂಗದ ಕಾರಣಕ್ಕಾಗಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:

ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವು ಬಹಳ ಮುಖ್ಯವಾದ ಮತ್ತು ಪ್ರಾಥಮಿಕ ಅಗತ್ಯಗಳನ್ನು ಪೂರೈಸುವಂತಹ ಸಂಸ್ಥೆಯಾಗಿದ್ದು, ಇದು ಕೂಡ ಪ್ರಧಾನ ಮತ್ತು ಅಧೀನ ಎಂಬ ಸಾಂಸ್ಕೃತಿಕ ಶ್ರೇಣೀಕೃತ ವ್ಯವಸ್ಥೆಯನ್ನು ಹೊಂದಿದೆ. ಪಿತೃ ಪ್ರಧಾನ ಕುಟುಂಬ, ಮಾತೃ ಪ್ರಧಾನ ಕುಟುಂಬ ಎಂಬ ಎರಡು ಬಗೆಯ ಪ್ರಕಾರಗಳಿವೆ. ಭಾರತದಲ್ಲಿ ಪಿತೃ ಪ್ರಧಾನ ಕುಟುಂಬಗಳ ಸಂಖ್ಯೆಯೇ ಹೆಚ್ಚಾಗಿದೆ. ಹೆಣ್ಣು ಮದುವೆಯಾಗುವುದೇ ಆಕೆಯ ಮೂಲಭೂತ ಕರ್ತವ್ಯವೆಂದು ನಂಬಿಸಲಾಗಿದೆ. ಇಲ್ಲೆಲ್ಲಾ ಹೆಂಡತಿ ಗಂಡನ ಅಣತಿಯಂತೆಯೇ ನಡೆಯಬೇಕಾದ ಅನಿವಾರ್ಯತೆಗಳಿವೆ. ವಿವಾಹ ಪೂರ್ವದಲ್ಲಿ ತಂದೆ, ತಾಯಂದಿರ, ಸಹೋದರ, ಸಹೋದರಿಯರ, ಅಕ್ಕ ಪಕ್ಕದವರ ಮರ್ಜಿಗೆ ಒಳಗಾದರೆ, ವಿವಾಹದ ನಂತರ ಎಷ್ಟೋ ಬಾರಿ ಪತಿಯ ಅಧೀನಕ್ಕೆ ಒಳಗಾಗಿ ಕೌಟುಂಬಿಕ ವ್ಯವಸ್ಥೆಯಲ್ಲಿ ಬದುಕಬೇಕಾಗಿರುವುದು ಮಹಿಳೆಗೆ ಅನಿವಾರ್ಯವಾದ ಸಂಗತಿಯಾಗಿರುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹಿತ ಹೆಣ್ಣಿಗೆ 'ಪತಿವ್ರತೆ' ಪರಿಕಲ್ಪನೆಯನ್ನು ಆರೋಪಿಸಿದ್ದು, ಗಂಡನಿಗೆ ವಿಧೇಯಳಾಗಿ ನಡೆದುಕೊಳ್ಳುವವಳೇ ನಿಜವಾದ ಸತಿ ಎಂಬ ನಂಬಿಕೆಯನ್ನು ಸೃಷ್ಟಿ ಮಾಡಲಾಗಿದೆ. ಇಂತಹ ಸೃಷ್ಟಿಕೃತ ಪರಿಕಲ್ಪನೆಗಳೇ ಭಾರತೀಯ ಸಮಾಜದಲ್ಲಿ ಹಲವು ಅಸಮಾನತೆಗಳಿಗೆ ಕಾರಣಗಳಾಗಿವೆ. ಹೀಗೆ ವಿಧೇಯರಾಗಿರುವವರನ್ನು ಮಾತ್ರ ಸಾಮಾಜಿಕ ವ್ಯವಸ್ಥೆಯು ಪತಿವ್ರತೆಯೆಂದು ಕರೆಯುತ್ತದೆ. ಕುಟುಂಬವು ಪ್ರೀತಿ, ಮಮತೆ ಮುಂತಾದ ಹಲವು ಭಾವನೆಗಳಿಂದ ನಿರ್ಮಾಣಗೊಂಡಿದ್ದರೂ ಅಲ್ಲಿ ಅಸಮಾನತೆಗಳಿವೆ. ಗಂಡ ಉದ್ಯೋಗಸ್ಥನಲ್ಲದಿದ್ದರೂ ಹೆಂಡತಿಯ ದುಡ್ಡಿನ ಮೇಲೆ ಆಕೆ ಹೊಂದಿಲ್ಲದಿರುವ ಆಸ್ಥೆಯನ್ನು ಹೊಂದಿರುತ್ತಾನೆ. ಕನ್ನಡದ ಬಹುತೇಕ ಆತ್ಮಕಥೆಗಳಲ್ಲಿ ಇಂತಹ ಹಲವು ಸಂಗತಿಗಳಿವೆ. ವ್ಯಕ್ತಿ ತಾನು ದುಡಿದ ಹಣವನ್ನು ತಾನೇ ಅನುಭೋಗಿಸಲು ಸಾಧ್ಯವಾಗಲಿಲ್ಲ ಎಂದರೆ ಅದು ಅವಮಾನದ ಭಾಗವೇ ಆಗಿರುತ್ತದೆ. ಇಂತಹ ಹಲವು ಬಗೆಯ ಅವಮಾನಗಳು ಆತ್ಮಕಥೆಗಳಲ್ಲಿವೆ.

ಕುಟುಂಬ ಎನ್ನುವುದು ಒಂದೇ ರೀತಿಯಾಗಿರುವುದಿಲ್ಲ. ಗ್ರಾಮಗಳಲ್ಲಿರುವ ಕುಟುಂಬ, ನಗರ ಕುಟುಂಬ, ಅಕ್ಷರಸ್ಥ ಕುಟುಂಬ, ಅನಕ್ಷರಸ್ಥ ಕುಟುಂಬ ಹೀಗೆ ಇನ್ನೂ ಹಲವು ಬಗೆಯ ಕುಟುಂಬಗಳನ್ನು ನಾವು ಕಾಣಬಹುದಾಗಿದೆ. ಅನಕ್ಷರಸ್ಥ ಕುಟುಂಬಗಳಲ್ಲಿ ಪ್ರಶ್ನಿಸುವ ಪ್ರಮಾಣ ಕಡಿಮೆ. ಇಲ್ಲಿ ಪುರುಷ ಪ್ರಧಾನ ಮೌಲ್ಯಗಳು ಹೆಚ್ಚು ಅನುಸರಿಸುವ ರೀತಿಯಲ್ಲಿದ್ದು, 'ಪತಿಯೇ ಪರದೈವ' ಎಂಬ ಮೌಲ್ಯವನ್ನು ಶಿರಸಾವಹಿಸಿ ನಡೆಸಿಕೊಂಡು ಹೋಗಲಾಗಿರುತ್ತದೆ. ಇದಕ್ಕೆ ಕೇವಲ ಅನಕ್ಷರಸ್ಥರು ಎಂಬುದಷ್ಟೇ ಕಾರಣವಲ್ಲ. ಗಂಡ ಹೆಂಡತಿಯ ನಡುವೆ ಸಮಾನ ಮನೋಭಾವ ಇಲ್ಲದಿರುವುದು ಅಥವಾ ಅದು ಅವರ ಅರಿವಿಗೆ ಬಂದಿಲ್ಲದಿರಬಹುದು. ಗಂಡನಿಗೆ ಪ್ರತಿರೋಧ

ತೋರದಿರುವ ಸ್ಥಿತಿಯನ್ನು ಅಲ್ಲಿನ ಪರಿಸರ ಉಂಟು ಮಾಡಿರಬಹುದು. ಹೀಗೆ ಹಲವು ಕಾರಣಗಳು ಸೃಷ್ಟಿ ಕ್ರಿಯೆಯ ಹಿಂದಿವೆ. 'ಗೊಂದಲಿಗ್ಯಾ'ದಲ್ಲಿನ ಮಹಿಳೆಯರ ಸ್ಥಿತಿಗತಿಯೂ ಹಾಗೆಯೇ ಇದೆ. ಇವರಲ್ಲಿ ಸಮಾನತೆ ಪರಿಕಲ್ಪನೆಯ ಅರಿವು ಇಲ್ಲದ ಕಾರಣ ತಮ್ಮನ್ನು ತಾವು ಗಂಡನ ಸೇವಕರಂತೆಯೇ ಭಾವಿಸುತ್ತಾರೆ. ನಗರಗಳಲ್ಲಿಯೂ ಕುಟುಂಬಕ್ಕೆ ಸಂಬಂಧಿಸಿದಂತೆ ಸಮಾಜದ ಏಕಮುಖ ಸ್ಥಾಪಿತ ಮೌಲ್ಯಗಳು ಅವರನ್ನು ಪ್ರಭಾವಿಸಿರುತ್ತವೆ. ಇಲ್ಲಿ ಗ್ರಾಮಗಳಲ್ಲಿರುವಷ್ಟು ಬಿಗಿಯಾದ ವಾತಾವರಣ ಸೃಷ್ಟಿಯಾಗಿರುವುದಿಲ್ಲ. ಮೇಲಾಗಿ ಇಲ್ಲಿನ ಜನರು ಬಹುತೇಕ ಅಕ್ಷರಸ್ಥರಾಗಿರುವುದರಿಂದ ಅಲ್ಪಮಟ್ಟಿಗೆ ಪ್ರಶ್ನಿಸುತ್ತಾರೆ. ಪ್ರಸ್ತುತ ಅಧ್ಯಾಯದ ಮುಂದಿನ ಭಾಗದಲ್ಲಿ ಪುರುಷ ಪ್ರಧಾನ ವೈವಾಹಿಕ ಸ್ಥಿತಿ ಹೇಗೆ ಮಹಿಳೆಯರಿಗೆ ಅವಮಾನಗಳನ್ನುಂಟು ಮಾಡುತ್ತದೆ ಎಂಬುದನ್ನು ಚರ್ಚಿಸಲಾಗುತ್ತದೆ.

**೬.೧.೧. ಹೆಂಡತಿಯನ್ನೇ ಹಣಕ್ಕಾಗಿ ಮಾರುವುದು:** 'ಸ್ತ್ರೀ–ಪುರುಷ ತುಲನ' ಕೃತಿಯಲ್ಲಿನ "ವಸ್ತು ಎಂದರೆ ಆಸೆ, ಆಕಾಂಕ್ಷೆಗಳಿಲ್ಲದ, ವ್ಯಕ್ತಿತ್ವರಹಿತ ಮಾನವ ಶರೀರಗಳು"[೨] ಎಂಬ ಛಾಯಾ ದಾತಾರ್ ಅವರ ಅಭಿಪ್ರಾಯದಂತೆ ಪುರುಷ ಪ್ರಧಾನ ಸಮಾಜವು ಸ್ತ್ರೀಯನ್ನು ವಸ್ತುವೆಂದೇ ಬಗೆಯುತ್ತದೆ. ಇದಕ್ಕೆ ಪೂರಕವಾಗಿ ಲಕ್ಷ್ಮಣ ಗಾಯಕವಾಡರ 'ಉಚಲ್ಯಾ'ದಲ್ಲಿ ಹೆಂಡತಿಯನ್ನು ಹಣಕ್ಕಾಗಿ ಮಾರುವ ಸಂದರ್ಭವೊಂದು ಹೀಗಿದೆ. "ದಾದಾ ಕೆಲದಿನ ಅಲ್ಲಿ ಇಲ್ಲಿ ಸುತ್ತಾಡಿದ. ಕೊನೆಗೆ ನೀಲಮ ಎಂಬೂರಿನ ವ್ಯಕ್ತಿಯನ್ನು ಭೆಟ್ಟಿಯಾಗಿ, ಅಲ್ಲಿ ಹೊಸ ಭಾಭಿಯನ್ನು ಕರೆದೊಯ್ದು... ದಾದಾ ತಿರುಗಿ ಬಂದ ಬಳಿಕ ಪದ್ಮಿನಿಯನ್ನು ಎರಡೂವರೆ ನೂರಿಗೆ ಮಾರಿದ ಸುದ್ದಿ ಗೊತ್ತಾಯಿತು"[೩] ಎಂದು ಬರೆಯುತ್ತಾರೆ. ಪುರುಷ ಪ್ರಧಾನ ಮನಸ್ಥಿತಿಗೆ ಜಾತಿಯ ಹಂಗಿಲ್ಲ, ಅದು ಎಲ್ಲಾ ಸಮುದಾಯಗಳಲ್ಲೂ ಕಾಣುವಂತಹ ಸಂಗತಿಯಾಗಿದೆ. ಮೇಲಿನ ಪ್ರಸಂಗದಲ್ಲಿನ ಹೊಸ ಭಾಭೀಯ ಪರಿಸ್ಥಿತಿಯಾಗಲಿ, ಮಾರಾಟಕ್ಕೆ ಒಳಗಾದ ಪದ್ಮಿನಿಯಾಗಲಿ ಇವರಿಬ್ಬರೂ ಪುರುಷ ಪ್ರಧಾನ ಮನಸ್ಥಿತಿಗೆ ವಸ್ತುವಂತೆ ಕಾಣಲ್ಪಟ್ಟಿದ್ದಾರೆ. ದಾದಾ ಹೊಸ ಭಾಭೀ ಸಂಗ ಮಾಡಿದ್ದು ಪದ್ಮಿನಿಯನ್ನು ಮಾರಿದ್ದು ಅಂದಿನ ಸಾಮಾಜಿಕ ಸನ್ನಿವೇಶದಲ್ಲಿ ಅತ್ಯಂತ ಸಹಜವಾದ ಸಂಗತಿಯಂತೆ ಕಂಡರೂ, ಆತ್ಮಕಥೆ ಬರೆಯುವ ಕಾಲಕ್ಕೆ ಲಿಂಗ ತರತಮದ ಬಾಗವಾಗಿರುವುದು ಲೇಖಕರ ಧ್ವನಿಯಲ್ಲಿ ಅಡಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಮಾರಾಟಕ್ಕೆ ಒಳಗಾದ ಮಹಿಳೆಯ ಪ್ರತಿಕ್ರಿಯೆಯು ಗೌಣವಾಗಿದ್ದೂ, ಬಹುಶಃ ಇದರ ಕರ್ತೃ ಲೇಖಕರಾಗಿರುವುದು ಅಥವಾ ಮಹಿಳೆಯ ಅನಕ್ಷರತೆಯು ಹಾಗೂ ಅಸಹಾಯಕತೆಯೂ ಇದಕ್ಕೆ ಕಾರಣವಾಗಿರಬಹುದು. ಹೀಗೆ ಮಹಿಳೆಯನ್ನು ವಸ್ತುವಿನಂತೆ ನಡೆಸಿಕೊಳ್ಳುವ, ಮಾರುವ ಸಾಂಪ್ರದಾಯಿಕ ಮನಸ್ಥಿತಿಗಳನ್ನು ಆತ್ಮಕಥೆಯು ಧ್ವನಿಸುತ್ತಿದೆ.

**೬.೧.೨. ಸ್ವಾತಂತ್ರ್ಯವಿಲ್ಲದಿರುವ ಸ್ಥಿತಿ:** ಸಾಮಾನ್ಯವಾಗಿ ಮಹಿಳಾ ಆತ್ಮಕಥೆಗಳನ್ನು ಗಮನಿಸಿದಾಗ ಆತ್ಮಕಥನಕಾರರಿಗೆ ವಿವಾಹದ ಮುಂಚೆ ಇದ್ದ ಸ್ವಾತಂತ್ರ್ಯ ವಿವಾಹದ ನಂತರ ಇಲ್ಲವಾಗಿದೆ. ಇದು ಪತಿಗೆ ಕಡಿಮೆ ಪ್ರಮಾಣದಲ್ಲಿ ಅನ್ವಯಿಸಿದರೆ ಪತ್ನಿಗೆ ಬಹುಪಾಲು ಅನ್ವಯಿಸುತ್ತದೆ. ಬಹಳಷ್ಟು

ಕೆಲಸಗಳಿಗೆ ಗಂಡನಿಂದ ಅನುಮತಿಯನ್ನು ಪಡೆದುಕೊಳ್ಳಬೇಕಾಗಿರುತ್ತದೆ. ಎಷ್ಟೋ ಬಾರಿ ವಿವಾಹವು ಹೆಣ್ಣಿನ ಸ್ವಾತಂತ್ರ್ಯವನ್ನು ಪರೀಕ್ಷಿಸುತ್ತದೆ ಎಂಬ ಅಭಿಪ್ರಾಯ 'ಅನುದಿನದ ಅಂತರಗಂಗೆ', 'ಬೆಂಕಿ ಬೆಡಗು,' 'ಗೊಂದಲಿಗ್ಯಾ' ಇನ್ನೂ ಮುಂತಾದ ಆತ್ಮಕಥೆಗಳಲ್ಲಿ ವ್ಯಕ್ತವಾಗಿವೆ. ಉದಾಹರಣೆಗೆ 'ಅನುದಿನದ ಅಂತರಗಂಗೆ' ಆತ್ಮಕಥೆಯಲ್ಲಿ ಬರುವ ಕೆಳಗಿನ ಉಲ್ಲೇಖಗಳನ್ನು ಗಮನಿಸಬೇಕಾಗಿದೆ. "ಬಾಪ, ನಾನು ಹಿಮಾಲಯಕ್ಕೆ ಹೋಗುತ್ತೀನಿ ಎಂದರೆ ಓಹೋ ಧಾರಳವಾಗಿ ಯಾವಾಗ ಹೋಗ್ತೀಯಾ? ಎನ್ನುತ್ತಿದ್ದರು. ಹಾಗಿರುವಾಗ ಮದುವೆಯಾಗಿ, ಮಕ್ಕಳಾಗಿ ನಡು ವಯಸ್ಸಿಗೆ ಬಂದ ಮೇಲೆ ಹಠಾತ್ತಾಗಿ ಹದಿನಾರರ ಹರೆಯದಲ್ಲೂ ಇಲ್ಲದ ಕಟ್ಟುಪಾಡುಗಳನ್ನು ವಿಧಿಸಲು ಹೊರಟರೆ? ನನಗಿನ್ನೂ ನೆನಪಿದೆ ಮೊದಲ ದೊಡ್ಡ ಜಗಳ ಮಲ್ಲಾಡಿಹಳ್ಳಿ ಸ್ವಾಮಿಗಳ ಶತಮಾನೋತ್ಸವಕ್ಕೆ ಆಹ್ವಾನ ಬಂದಿತ್ತು. ಕವಿಗೋಷ್ಠಿಯಲ್ಲಿ ಕವನ ಓದಬೇಕಿತ್ತು. ಪತ್ರಿಕೆಯಲ್ಲಿ ಹೆಸರು ಪ್ರಕಟವಾಗಿತ್ತು."[೪] ಎಂದು ಕವಿಗೋಷ್ಠಿಗೆ ಹೊರಟಿದ್ದ ಪ್ರತಿಭಾ ಅವರಿಗೆ ಅವರ ಗಂಡ "ಮಲ್ಲಾಡಿಹಳ್ಳಿಗೆ ಯಾಕೆ ಹೋಗಬೇಕು? ಅಗತ್ಯವಿಲ್ಲ, ಸುಮ್ಮನೆ ಮನೆಯಲ್ಲಿರು.......ನಾನು ಹೇಳುತ್ತಿದ್ದೇನೆ, ಹೋಗಬೇಡಾ"[೫] ಎಂದು ನಿರ್ಬಂಧ ಹೇರುವ ಸನ್ನಿವೇಶವಿದೆ. ಲೇಖಕಿಯು ಇಲ್ಲಿ ವಿವಾಹಪೂರ್ವ ಹಾಗೂ ವಿವಾಹದ ನಂತರದ ಮಹಿಳಾ ಬದುಕಿನ ಎರಡೂ ಮಾದರಿಗಳನ್ನು ಓದುಗರೆದುರಲ್ಲಿ ತೆರೆದಿಟ್ಟಿದ್ದಾರೆ. ತಂದೆಯಲ್ಲಿಲ್ಲದ ಶೋಷಕ ಮನಸ್ಥಿತಿಯು ಪತಿಯಲ್ಲಿರುವುದನ್ನು ವ್ಯಕ್ತಪಡಿಸುತ್ತಾರೆ. ಪತಿಯು ಹೇಳುವ 'ನಾನು ಹೇಳುತ್ತಿದ್ದೇನೆ ಹೋಗಬೇಡ' ಎನ್ನುವ ಮಾತು ಗಂಡನ ಮಾತೇ ವೇದವಾಕ್ಯ ಎಂಬ ಸಾಮಾಜಿಕ ಬದುಕಿನ ನಂಬಿಕೆಯ ರೂಪಕವಾಗಿದೆ. ಇಂತಹ ಅಭಿಪ್ರಾಯಗಳು ಹೆಂಡತಿಯನ್ನು ತನ್ನ ಅಧೀನದಲ್ಲಿಯೇ ಇಟ್ಟುಕೊಳ್ಳುವ ಪ್ರಯತ್ನದ ಗುರುತುಗಳಾಗಿವೆ. ಜೊತೆಗೆ ಹೆಂಡತಿಯ ಏಳಿಗೆಯನ್ನು ಸಹಿಸದ ಸಂಕುಚಿತತೆಯೂ ಇಲ್ಲಿದೆ. ಈ ಬಗೆಯ ಸಂಕುಚಿತತೆ ಕೇವಲ ಸಾಮಾನ್ಯರಲ್ಲಷ್ಟೇ ಅಲ್ಲ 'ಪ್ರಜ್ಞಾ'ವಂತರೆಂದು ಕರೆಯುವವರ ಬಳಿಯೂ ಕಂಡುಬರುತ್ತದೆ.

'ಕುಣಿಯೇ ಘುಮಾ' ಆತ್ಮಕಥೆಯಲ್ಲಿನ ಸನ್ನಿವೇಶವನ್ನು ಗಮನಿಸಬಹುದು. ಪದ್ಮಶ್ರೀ ಪ್ರಶಸ್ತಿ ಪಡೆದ ಲೇಖಕ ರಣಜಿತ್ ದೇಸಾಯಿಯ ಮಾತುಗಳಿಗೆ ಮರುಳಾಗಿ ಮದುವೆಯಾದ ಮಾಧವಿಯವರು, ವಿವಾಹದ ನಂತರ ರಣಜಿತ್‌ರ ವ್ಯಕ್ತಿತ್ವಕ್ಕೆ ದುಃಖಿಸುತ್ತಾರೆ. ಪುಸ್ತಕ ಬಿಡುಗಡೆಯ ಸಮಾರಂಭವೊಂದರಲ್ಲಿ ರಣಜಿತ ದೇಸಾಯಿಯ ಭಾಷಣದ ನಂತರ ಮಾಧವಿಯೂ ಸಭೆಯನ್ನುದ್ದೇಶಿಸಿ ಮಾತಾನಾಡುತ್ತಾರೆ. ಕಾರ್ಯಕ್ರಮ ಮುಗಿದ ನಂತರ ಮಹಿಳೆಯೊಬ್ಬಳು "ನಿಮಗಿಂತ ಮಾಧವಿಯವರ ಭಾಷಣ ಚೆನ್ನಾಗಿತ್ತು."[೬] ಎಂದಾಗ ಆ ಹೊಗಳಿಕೆಯ ಮಾತುಗಳನ್ನು ಆಲಿಸಿದ ಮಾಧವಿ, ಈ ಮಾತುಗಳು ತನ್ನ ಗಂಡನಿಗೆ ಹಿಡಿಸದ್ದನ್ನು ಆತನ ವರ್ತನೆಯಿಂದ ಗಮನಿಸಿ ಸಂಪೂರ್ಣವಾಗಿ ಕುಸಿದು ಹೋಗುತ್ತಾಳೆ. ಹೀಗೆ ಪತಿ ಮತ್ತು ಪತ್ನಿಯರ ನಡುವಿನ ಅಸಹಿಷ್ಣುತೆಯು ಬಹುತೇಕ ಕುಟುಂಬಗಳ ಸಹಜವಾದ ಸಂಗತಿಯಾಗಿದೆ. ಪುರುಷ ಅಹಮಿಕೆಯ ಗುಣ ಸಾಮಾನ್ಯ ಜನರಲ್ಲಷ್ಟೇ ಕಾಣದೇ, ಪ್ರಧಾನ ಎಂದು ಕರೆಯಲಾಗುವ ಕೆಲವು ಲೇಖಕರಲ್ಲಿಯೂ ಇರುತ್ತದೆ ಎಂಬುದನ್ನು ಆತ್ಮಕಥೆಯೂ ಕಾಣಿಸುತ್ತದೆ.

**೬.೧.೩.** ದೈಹಿಕ ಮತ್ತು ಮಾನಸಿಕ ಹಲ್ಲೆ : ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲರೂ ಸರಿಸಮಾನರು ಎನ್ನುವುದು ಆದರ್ಶವಾದರು, ಆತ್ಮಕಥೆಗಳಲ್ಲಿ ಗಂಡ ಹೆಂಡತಿಗೆ ಹಲ್ಲೆ ಮಾಡುವ ಘಟನೆಗಳು ಇಂತಹ ಆದರ್ಶಗಳಿಗೆ ಅಪವಾದಗಳಾಗುವುದನ್ನು ಕಾಣಬಹುದಾಗಿದೆ. 'ಅನುದಿನದ ಅಂತರಗಂಗೆ'ಯಲ್ಲಿ ಪ್ರತಿಭಾ ಅವರು ತಮ್ಮ ಪತಿಗೆ "ನೆನಪಿದೆಯೇ ಅವತ್ತು ಕೋಪದಲ್ಲಿ ನನ್ನ ಕೆನ್ನೆಗೆ ಹೊಡೆದದ್ದು?"[೭] ಎಂದು ಕೇಳಿದಾಗ ಅವರ ಪತಿಯು "ಹೆಣ್ಣು ಗಂಡಿನ ಸಂಬಂಧದಲ್ಲಿ ಅದು ಸಹಜ"[೮]......ಎನ್ನುತ್ತಾರೆ. ಇನ್ನೂ ಮುಂದುವರಿದು ಹೆಂಡತಿ ಮೇಲಿನ ಹಲ್ಲೆಯ ಕುರಿತು ಪ್ರತಿಭಾ ಅವರು "ಹಠಾತ್ತಾಗಿ ಇವನು ಹೊಡೆದಾಗ ನನಗೆ ಇಡೀ ಜಗತ್ತೇ ಬದಲಾಗಿ ಬಿಟ್ಟ ಹಾಗಾಯಿತು. ಒಂದು ಆವರಣ ಕಳಚಿ ಬಿದ್ದು ಇನ್ನೊಂದು ಮಾಧ್ಯಮಕ್ಕೆ ಪ್ರವೇಶಿಸಿದ ಹಾಗೆ. ನೋವಿಗೆ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು"[೯] ಎಂದು ಬರೆದುಕೊಳ್ಳುತ್ತಾರೆ. ಪ್ರತಿಭಾ ಅವರ ಪತಿ ಹೆಂಡತಿ ಮೇಲಿನ ಹಲ್ಲೆಯನ್ನು ದಾಂಪತ್ಯದಲ್ಲಿ ಇವೆಲ್ಲಾ ಸಹಜವೆಂದು ಸಮರ್ಥಿಸಿಕೊಳ್ಳುವುದು, ಪತಿಯ ಶೋಷಣೆಯನ್ನು ಮತ್ತು ಸಂಸಾರವನ್ನು ಹೆಂತಿಯು ಸರಿದೂಗಿಸಿಕೊಂಡು ಹೋಗಬೇಕೆಂಬ ಹೇರಲ್ಪಟ್ಟ ನಂಬಿಕೆಯ ಉತ್ಪನ್ನವಾಗಿದೆ. ಪತ್ನಿಯ ಮೇಲೆ ಹಲ್ಲೆ ಮಾಡುವವರಿಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಅನೌಪಚಾರಿಕ 'ಮಾನ್ಯತೆ' ಇದೆ. ಈ ಮಾನ್ಯತೆಯೇ ಪ್ರತಿಭಾ ಅವರು ಕಣ್ಣೀರು ಹಾಕುವ ಸನ್ನಿವೇಶವನ್ನು ಸೃಷ್ಟಿಸಿದೆ. ಇಲ್ಲಿ ಪುರುಷ ಪ್ರಧಾನ ಸಮಾಜದ ಧೋರಣೆಯು ಸ್ಪಷ್ಟವಾಗಿದ್ದು, ಆರ್ಥಿಕ ಸಮಸ್ಯೆ, ಅನಕ್ಷರತೆ, ಹೆಂಡತಿಯೂ ಸಮಾನವಾದವಳು ಎಂದು ಭಾವಿಸದಿರುವುದು, ಕುಡಿತ ಇನ್ನೂ ಮುಂತಾದ ಕಾರಣಗಳಿಗಾಗಿ ಹಲ್ಲೆ ನಡೆಯುತ್ತವೆ. ಯಾವುದೇ ಮಾದರಿಯ ಕುಟುಂಬಗಳು ಇದ್ದರೂ ಅಲ್ಲೆಲ್ಲ ದೈಹಿಕ ಮತ್ತು ಮಾನಸಿಕ ಅವಮಾನಗಳನ್ನು ಅನುಭವಿಸುವುದು ಹೆಂಡತಿ ಮಾತ್ರ ಎನ್ನುವುದನ್ನು ಆತ್ಮಕಥೆಗಳು ಸ್ಪಷ್ಟಪಡಿಸುತ್ತವೆ.

**೬.೧.೪.** ಮಹಿಳೆಯಿಂದ ಮಹಿಳೆಗೆ ಅವಮಾನಗಳು : ಈ ಹಿಂದೆ ಹೇಳಿದಂತೆ ಪುರುಷ ಪ್ರಧಾನ ಮನೋಭಾವವು ಕೇವಲ ಪುರುಷರಿಗಷ್ಟೇ ಸೀಮಿತವಾಗದೆ ಅದು ಮಹಿಳೆಯರಲ್ಲೂ ಸಹಜವಾಗಿ ಅಂತರ್ಗತವಾಗಿದೆ. ಹೀಗಾಗಿ ಮಹಿಳೆಗೆ ಕೇವಲ ಪುರುಷನಿಂದಷ್ಟೇ ಅವಮಾನವಾಗಿದೆ ಎಂದು ಹೇಳಲು ಬರುವುದಿಲ್ಲ, ಮಹಿಳೆಯರಿಂದ ಮಹಿಳೆಯರು ಸಾಕಷ್ಟು ಅವಮಾನಕ್ಕೆ ಒಳಗಾಗಿದ್ದು, ಅವಮಾನಿಸುವ ಹೆಣ್ಣಿನ ಆಂತರ್ಯದಲ್ಲಿ ಇರುವುದು ಪಿತೃ ಸಂಸ್ಕೃತಿಯ ಮೂಲಭೂತವಾದದ ಧೋರಣೆಯೆಂಬುದನ್ನು ಅಲ್ಲಗಳೆಯುವಂತಿಲ್ಲ. 'ಬೆಂಕಿ ಬೆಡಗು' ಆತ್ಮಕಥೆಯಲ್ಲಿ ಲಿಂಗ ಸಂಬಂಧಿಯಾಗಿ ಪದೇ ಪದೇ ಬರುವ ಪದವೆಂದರೆ "ಹೆಣ್ಣಿಗೆ ಹೆಣ್ಣೇ ಶತ್ರು"[೧೦] ಎಂಬುದು. ಇದರ ಸಮರ್ಥನೆಗಾಗಿ ಉಮಾಶ್ರೀಯವರು ಉದಾಹರಣೆಯಾಗಿ ಕೊಡುವ ಘಟನೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ. "ಅಮ್ಮನ ಕಿರಿಕಿರಿ, ಮೂದಲಿಕೆ. ಅತಿ ಹೆಚ್ಚು ಅವಾಚ್ಯ ಶಬ್ದ ಬಳಕೆ........... ಒಂದು ಹೆಣ್ಣು ಇನ್ನೊಂದು ಹೆಣ್ಣಿನ ನೋವನ್ನು, ವಸ್ತು ಸ್ಥಿತಿಯನ್ನು ಅರ್ಥೈಸಿಕೊಳ್ಳದ ದುರಂತ ನೋಡಿ."[೧೧]

ಗಂಡನನ್ನು ತೊರೆದದ್ದಕ್ಕಾಗಿ ತನ್ನ ತಾಯಿಯೇ ಚಿತ್ರಹಿಂಸೆ ಕೊಡುವುದನ್ನು ಉಮಾಶ್ರೀಯವರು ಹೀಗೆ ವ್ಯಕ್ತಪಡಿಸುತ್ತಾರೆ. "ನೋಡಮ್ಮಾ ನನಗೆ ರಾತ್ರಿಯಿಂದ ನೀರು ಹೋಗ್ತಾ ಇದೆ. ಸೊಂಟವಂತೂ ಪಟಪಟಾಂತ ಸಿಡಿತಾ ಇದೆ. ಬಟ್ಟೆ ನನ್ನಿಂದ ಒಗೆಯಲಾಗ್ತಾ ಇಲ್ಲ ಎಂದಾಗ ಸಿಕ್ಕಾಪಟ್ಟೆ ಜಗಳ ಮಾಡಿದಳು."[೧೨] ಹೆರಿಗೆ ಮುಗಿದ ನಂತರ "ಆಸ್ಪತ್ರೆ ಹೊರಗೆ ಬಂದ್ರೆ ಈ ಮಹಾತಾಯಿ ಒಂದು ಆಟೋ ಕೂಡ ಮಾಡ್ಲಿಲ್ಲ. ಅಲ್ಲಿಂದ ಎರಡು, ಮೂರು ಕಿಲೋ ಮೀಟರ್ ಮಗುವನ್ನೆತ್ತಿಕೊಂಡು ಐದು ದಿನಗಳ ಬಾಣಂತಿಯನ್ನು ಬಿಸಿಲಿನಲ್ಲಿ ನಡೆಸಿಕೊಂಡು ಬಂದ್ಲು..!"[೧೩] ಎಂದು ಬರೆದುಕೊಳ್ಳುತ್ತಾರೆ. ಮೇಲಿನ ಘಟನೆಗಳು ಮಹಿಳೆಗೆ ಮಹಿಳೆಯಿಂದಲೂ ಅವಮಾನಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿ ಲೇಖಕಿಯ ತಾಯಿಯು ಬಳಸುವ ಆವಾಚ್ಯ ಶಬ್ಧಗಳು, ಮೂದಲಿಕೆಗಳು ತನ್ನ ಮಗಳು ಪತಿಯನ್ನು ತೊರೆದಿದ್ದರ ಕುರಿತಾದ ಅಸಹಿಷ್ಣುತೆಯ ಫಲವಾಗಿವೆ. ಗಂಡನೇ ಹೆಂಡತಿಗೆ ಸರ್ವಸ್ವ ಎನ್ನುವ ಸಾಂಪ್ರದಾಯಿಕ ಮೌಲ್ಯವು ಲೇಖಕಿಯ ತಾಯಿಯಲ್ಲಿ ಅಂತಸ್ಥವಾಗಿರುವುದು ಈ ಪರಿಯ ಶೋಷಣೆಗೆ ಕಾರಣವಾಗಿದೆ. ಮಹಿಳೆಯಿಂದ ಮಹಿಳೆ ಅವಮಾನ ಅನುಭವಿಸಿದರೂ ಮಹಿಳೆಯರ ಒಳಗಡೆ ಇರುವುದು ಪುರುಷ ಪ್ರಧಾನ ಸಮಾಜದ ಧೋರಣೆಯೇ ಆಗಿದ್ದು, ಇಂತಹ ಅಮಾನವೀಯ ಶೋಷಣೆಗಳನ್ನು ಆತ್ಮಕಥೆಯೂ ವಿಷಾದದ ಧ್ವನಿಯಲ್ಲಿ ಅಭಿವ್ಯಕ್ತಿಸಿದೆ.

೬.೧.೫. ಸ್ತ್ರೀ ಅಸ್ಮಿತೆಗೆ ಮಾಡಿದ ಅವಮಾನ: ಪುರುಷನ ನೆರವಿಲ್ಲದೆ ಮಹಿಳೆ ಬದುಕುವುದೇ ಅಸಾಧ್ಯವೆಂಬ ನಂಬಿಕೆಯು ಸಮಾಜದಲ್ಲಿದೆ. ಈ ಕಾರಣಕ್ಕಾಗಿ ಪತಿಯ ಹಿಂಸೆಯನ್ನು ತೊರೆದು ಒಂಟಿಯಾಗಿ ಬದುಕುವ ಮಹಿಳೆಯನ್ನು 'ಗಂಡ ಬಿಟ್ಟವಳೆಂದು' ತುಚ್ಛವಾಗಿ ಕಾಣಲಾಗುತ್ತದೆ. ಉಮಾಶ್ರೀಯವರ 'ಬೆಂಕಿ ಬೆಡಗು' ಆತ್ಮಕಥೆಯಲ್ಲಿ ಗಂಡನ ಹಿಂಸೆ ತಾಳಲಾರದೆ ತವರಿಗೆ ಬಂದ ಮಗಳನ್ನು, ಗರ್ಭಿಣಿಯೆಂದು ಸಹ ನೋಡದೆ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. "ನೀನು ಮದುವೇನೆ ಮಾಡಿಕೊಳ್ಳದೇ ಇದ್ರೂ ಉಳೀತಿತ್ತು. ಗಂಡನ ಬಿಟ್ಟವಳನ್ನ ಮನೇಲಿ ಇಟ್ಕಂಡಿದಾಳೆ ಎಂಬ ದೂರು. ನನ್ನ ಮಾನ ಮರ್ಯಾದೆಯನ್ನೆಲ್ಲ ಹರಾಜು ಹಾಕ್ದೆ ಮುಂತಾಗಿ ಅಮ್ಮನ ಕಿರಿಕಿರಿ, ಮೂದಲಿಕೆ. ಅತಿ ಹೆಚ್ಚು ಅವಾಚ್ಯ ಶಬ್ದ ಬಳಕೆ......"[೧೪] ಎಂಬ ಚಿತ್ರಣ ಇಲ್ಲಿದೆ. ಈ ಚಿತ್ರಣದಲ್ಲಿ ಗಂಡನ ಆಶ್ರಯವಿಲ್ಲದ ಮಹಿಳೆಯರು ಸಮಾಜದಲ್ಲಿ, ಅಷ್ಟೇ ಅಲ್ಲದೆ ಕುಟುಂಬದ ಒಳಗೂ ಹೇಗೆ ಮೂದಲಿಕೆಗಳಿಗೆ ಒಳಗಾಗುತ್ತಾರೆ ಎಂಬುದು ನಮ್ಮ ಅರಿವಿಗೆ ಬರುತ್ತದೆ. 'ನೀನು ಮದುವೇನೆ ಮಾಡಿಕೊಳ್ಳದಿದ್ದರೂ ಉಳಿತಿತ್ತು' ಎನ್ನುವ ಪದವು ನಮ್ಮ ಸಮಾಜದಲ್ಲಿ ಮಹಿಳೆಯು ಕನ್ಯೆಯಾಗಿ ಉಳಿದರೂ ಪರವಾಗಿಲ್ಲ ಗಂಡ ಬಿಡಬಾರದು ಎಂಬ ಹೇರಲ್ಪಟ್ಟ ನಂಬಿಕೆಯ ಫಲವಾಗಿದೆ. ಈ ರೀತಿ ಆರೋಪ ಮಾಡುತ್ತಿರುವುದು ಲೇಖಕಿಯ ತಾಯಿಯಾದರೂ, ಅದು ತಾಯಿ ನಂಬಿಕೊಂಡಿರುವ ಪುರುಷ ಪ್ರಧಾನ ನೈತಿಕತೆಯ ಪಡಿಯಚ್ಚಾಗಿದೆ. ಜೊತೆಗೆ 'ಮಾನ ಮರ್ಯಾದೆಯನ್ನೆಲ್ಲ ಹರಾಜು ಹಾಕಿದೆ' ಎಂಬುದು ಸಾಮಾಜಿಕ ಭಯದ ಉತ್ಪನ್ನವಾಗಿದೆ. ಈ

ಎಲ್ಲಾ ಸಂಗತಿಗಳು ಲೇಖಕಿಗೆ ತಾಯಿಯಿಂದ ಹಲವು ಸಂಕಷ್ಟಗಳನ್ನುಂಟು ಮಾಡಿವೆ. ಮನುಸ್ಮೃತಿಯ ಆಶಯಗಳು ಸಾಮಾಜಿಕ ಜೀವನದ ಭಾಗವಾಗಿ ಪ್ರಭಾವ ಬೀರಿರುವ ಕಾರಣಗಳಿಗಾಗಿಯೇ ಉಮಾಶ್ರೀ ಅವರು ಗಂಡನನ್ನು ತೊರೆದು ಬದುಕುವ ನಿರ್ಧಾರವನ್ನು ತಿರಸ್ಕರಿಸಿದೆ. ಆತ್ಮಕಥನಕಾರರ ತಾಯಿಯು ತನ್ನ ಅಸಹಾಯಕತೆಯನ್ನು ಅವಾಚ್ಯ ಶಬ್ದಗಳ ಮೂಲಕ ನಿಂದಿಸುವುದರಿಂದ ತೀರಿಸಿಕೊಳ್ಳುವುದನ್ನು ಗುರುತಿಸಬಹುದಾಗಿದೆ. ಹೀಗೆ ಸಾಮಾಜಿಕ ವ್ಯವಸ್ಥೆಯ ಹೇರಲ್ಪಟ್ಟ ನಂಬಿಕೆಗಳು ಕೌಟುಂಬಿಕ ನಿಂದನೆಗಳಿಗೆ ಕಾರಣವಾಗುವುದನ್ನು ಆತ್ಮಕಥೆಯು ಧ್ವನಿಸುತ್ತಿದೆ.

**೬.೧.೬.** ತಲಾಕ್ ಮತ್ತು ಅವಮಾನ: ಪಿತೃ ಸಂಸ್ಕೃತಿಯು ತನ್ನ ಮೂಲಭೂತವಾದ ಧೋರಣೆಯಿಂದ ಮಹಿಳೆಯನ್ನು ಶೋಷಿಸುತ್ತಲೇ ಬರುತ್ತಿದೆ. ತಲಾಕ್ ಕೂಡ ಇಂತಹದ್ದೇ ಬಗೆಯ ಸ್ತ್ರೀ ಶೋಷಣೆಯ ಪ್ರತೀಕವಾಗಿದೆ. 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಪಠ್ಯದಲ್ಲಿ ಸಾರಾ ಅವರು "ನನ್ನದೇ ಪ್ರಾಯದ ಹುಡುಗಿಯೊಬ್ಬಳಿಗೆ ೧೨ನೇ ವರ್ಷದಲ್ಲಿ ಮದುವೆಯಾಗಿ ೧೩ನೇ ವರ್ಷಕ್ಕೆ ಅವಳ ಗಂಡ ತಲಾಕ್ ನೀಡಿದ. ಈಗ ಮುದುಕನೊಬ್ಬನು ಆಕೆಯನ್ನು ಮದುವೆಯಾಗುವೆನೆಂದು ಮುಂದೆ ಬಂದಾಗ, ತಲಾಕ್ ಕೊಟ್ಟ ಗಂಡ ಮರಳಿ ವರಿಸುವೆನೆಂದನು. ಆಗ ತಾಯಿ, ಮಗಳು ಖಾಜೀ ಸಾಹೇಬರ ಬಳಿ ಹೋಗಿ ಅವರ ಸಲಹೆ ಕೇಳಿದಾಗ. ಮೊದಲ ಗಂಡನನ್ನು ವಿವಾಹವಾಗಬೇಕಾದರೆ ಒಂದು ದಿನಕ್ಕಾದರೂ ಒಬ್ಬನನ್ನು ವರಿಸಬೇಕೆಂದನು. ಆಕೆ ತನ್ನ ಬಳಿ ಕಣ್ಣೀರ ಕತೆಯನ್ನು ಹೇಳಿದಳು. ಒಂದು ದಿನಕ್ಕಲ್ಲವೇ? ಒಪ್ಪಿಕೊ, ಆಮೇಲೆ ನಿನ್ನ ಮೊದಲಿನ ಗಂಡನೊಡನೆ ಸುಖವಾಗಿರಬಹುದಲ್ಲ? ಎಂದೆ 'ಈ ಒಂದು ರಾತ್ರಿ ಏನೆಂದು ನಿನಗೆ ಗೊತ್ತಿದೆಯೇ?'...... ನಿನ್ನ ಮೊದಲಿನ ಗಂಡನ ಜೊತೆಯಲ್ಲಿ ಓಡಿಹೋಗು ಎಂದಾಗ 'ನಮ್ಮ ಈ ಗಂಡಸರು ಒಂದು ಹೆಣ್ಣಿಗಾಗಿ ಅಷ್ಟೆಲ್ಲ ಮಾಡುತ್ತಾರೆಯೇ? ಕಾಡಿನ ಮೃಗವಾದರೂ ನಂಬಬಹುದು. ನಮ್ಮ ಈ ಗಂಡಸರನ್ನು ನಂಬಬೇಡ. ಅವರ ದೃಷ್ಟಿಯಲ್ಲಿ ನಾವು ಪ್ರಾಣಿಗಳೇ ಹೊರೆತು ಮನುಷ್ಯರಲ್ಲ.' ಮುಂದೆ ಅವಳು ಆ ಮುದುಕನನ್ನೆ ಮದುವೆಯಾಗಿ ಪಡಬಾರದ ಪಾಡು ಪಟ್ಟಳು"[೧೫] ಎಂದು ಬರೆಯುತ್ತಾರೆ. ಲೇಖಕರು ಉಲ್ಲೇಖಿಸುವ ಈ ಮೇಲಿನ ಸನ್ನಿವೇಶದಲ್ಲಿ ಹಲವು ಅವಮಾನಗಳಿವೆ. ೧೨ ವರ್ಷದ ಬಾಲಕಿಗೆ ಬಾಲ್ಯ ವಿವಾಹ ಮಾಡಿದ್ದು ಮೊದಲನೇ ಅವಮಾನವಾಗಿದೆ. ಗಂಡ ಮೂರು ಬಾರಿ ತಲಾಕ್ ಹೇಳಿದ್ದು ಎರಡನೆಯ ಅವಮಾನವಾಗಿದೆ, ಮತ್ತೊಮ್ಮೆ ಮುದುಕನು ಬಾಲ್ಯ ವಿವಾಹವಾಗಲು ಬಂದಿದ್ದು ಮೂರನೆಯ ಅವಮಾನ. ನಂತರ ಸಲಹೆಯ (ಸಂಪ್ರದಾಯದ) ಹೆಸರಲ್ಲಿ ಖಾಜೀ ಸಾಹೇಬ, ಮತ್ತೆ ಶೋಷಣೆ ಮಾಡಿದ್ದು ನಾಲ್ಕನೆಯ ಅವಮಾನ. ಕೊನೆಗೆ ಸ್ವತಂತ್ರವಾಗಿ ಬದುಕಲಾಗದೆ ಮುದುಕನನ್ನು ಮದುವೆಯಾಗಿ ಸಂಕಷ್ಟಪಟ್ಟಿದ್ದು ಐದನೆಯ ಅವಮಾನವಾಗಿದೆ. ಈ ಎಲ್ಲಾ ಅವಮಾನಗಳನ್ನು ಅನುಭವಿಸಿದ್ದು ಮಾತ್ರ ಮಹಿಳೆ. ಮೇಲ್ಕಂಡ ಪ್ರಸಂಗದಲ್ಲಿ ಗಂಡಸರನ್ನು ಕಾಡಿನ ಮೃಗಕ್ಕಿಂತಲು ಕ್ರೂರವೆಂದು ಹೇಳಲಾಗಿದ್ದು, ಗಂಡಸರು ತಮ್ಮನ್ನು ಪ್ರಾಣಿಗಳಂತೆ ನೋಡುತ್ತಾರೆ ಎಂದು ಹೇಳುವ ಮಾತುಗಳಿವೆ. ಇವು ಶೋಷಿತ

ವ್ಯವಸ್ಥೆಯ ಕರಾಳ ಮುಖಗಳನ್ನು ಧ್ವನಿಸುವ ಅತ್ಯಂತ ಆತ್ಯಂತಿಕ ಉದಾಹರಣೆಗಳಾಗಿವೆ. ಇಲ್ಲಿ ಧಾರ್ಮಿಕ ಕಟ್ಟುಪಾಡುಗಳ ಕುರಿತ ಅಸಮಾಧಾನ ಲೇಖಕರ ಅಭಿವ್ಯಕ್ತಿಯಲ್ಲಿರುವುದು ಕಾಣುತ್ತದೆ. ೧೨ ವರ್ಷದ ಬಾಲಕಿಯು ಮದುವೆಯಾಗಿ, ಗಂಡನಿಂದ ತಲಾಖ್ ಪಡೆದಿದ್ದಕ್ಕಾಗಿ ಮುದುಕನೊಂದಿಗೆ ಬದುಕಬೇಕಾದ ಅನಿವಾರ್ಯತೆಗಳಿಗೆ ಬಲಿಯಾಗಬೇಕಾದ ಸನ್ನಿವೇಶ ಹೃದಯವಿದ್ರಾವಕವಾಗಿರುವುದನ್ನು ಆತ್ಮಕಥೆಯಲ್ಲಿ ಗಮನಿಸಬಹುದಾಗಿದೆ.

**೬.೧.೭.** ನಿರ್ಬಂಧಗಳ ಮೀರುವಿಕೆ: ಅವಮಾನಗಳನ್ನು ಸಹಿಸಿಕೊಳ್ಳುವುದು ಮತ್ತು ಅವುಗಳನ್ನು ನಿರಾಕರಿಸುವ ಎರಡೂ ಸಾಧ್ಯತೆಗಳು ಕನ್ನಡ ಆತ್ಮಕಥೆಗಳಲ್ಲಿವೆ. 'ಬೆಂಕಿ ಬೆಡಗು'ನಲ್ಲಿ ಹೆಂಡತಿಯನ್ನು ತನ್ನ ಹಿಡಿತದಲ್ಲಿಯೇ ಇಟ್ಟುಕೊಳ್ಳಬೇಕೆಂಬ ನಿರ್ಧಾರವನ್ನು ಮೀರಿ ಆರೋಗ್ಯ ಸರಿ ಇಲ್ಲದ ತಾಯಿಯನ್ನು ನೋಡಲು ಉಮಾಶ್ರೀಯವರು ಹೋಗುವುದು, 'ಗಂಡ ಹಾಕಿದ ಗೆರೆ ದಾಟಬಾರದೆಂಬ' ಅಲಿಖಿತ ನಿಯಮವನ್ನು ಮೀರುವ ಪ್ರಕ್ರಿಯೆಯಾಗಿ ಕಾಣುತ್ತದೆ. ಉಮಾಶ್ರೀಯವರು ತನ್ನ ಗಂಡನಿಗೆ "ಗಂಡು ಮಕ್ಕಳಿಲ್ಲದ ಮನೆ ನನ್ನಮ್ಮನಿಗೆ ಬಾಳ ಹುಶಾರಿಲ್ವಂತೆ. ನಾನು ಹೋಗಬೇಕು, ಕಳಿಸಿ ಕೊಡಿ ಅಂತ. ಕಳಿಸಿ ಕೊಡಲು ಒಪ್ಪಲಿಲ್ಲ. ಇಡೀ ರಾತ್ರಿ ಕಣ್ಣೀರು ಹಾಕಿದರೂ ಕಳಿಸಲಿಲ್ಲ. ಕೊನೆಗೆ ನಾನು ಹೋಗೇ ಹೋಗುತ್ತೇನೆ. ನೀವೇನು ಮಾಡ್ತೀರಿ"[೧೬] ಅಂತ ಕೇಳಿದಾಗ, "ಮನೆಯ ಹೊರಗಡೆ ಕಾಲಿಟ್ಟರೆ ಕಾಲನ್ನು ಕತ್ತರಿಸಿ ಹಾಕ್ತೇನೆ"[೧೭] ಎಂದು ಗಂಡ ಆರ್ಭಟಿಸುತ್ತಾನೆ. ಆಗ ಉಮಾಶ್ರೀಯವರು "ನಾನು ನಾಳೆ ಬೆಳಗ್ಗೆ ಹೋಗೇ ತೀರೋದೆಂದು ತಾಯಿ ಮನೆಗೆ ಹೊರಟೆ"[೧೮] ಎಂದು ಹೋಗಿ ತದನಂತರ ಮರಳಿ ಬಂದ ಉಮಾಶ್ರೀಯವರನ್ನು ಮನೆಯೊಳಗೆ ಸೇರಿಸದಿದ್ದಾಗ "ಏಳಮ್ಮಾ ಮೇಲೆ...... ಎಂದು ಮಗಳನ್ನು ಎತ್ತಿಕೊಂಡು ಹೊರನಡೆದೆ"[೧೯] ಎಂದು ದಾಖಲಿಸುತ್ತಾರೆ.

ಹೆಣ್ಣಿನ ಬದುಕನ್ನು ಪ್ರಭುತ್ವವು ಒಂದು ಬಗೆಯಲ್ಲಿ ನೀರಿನಂತೆ ಮಾಡಿದೆ. ನೀರಿಗೆ ಸ್ವತಂತ್ರವಾದ ಆಕಾರವಿಲ್ಲ. ಪಾತ್ರೆಗೆ ಹಾಕಿದರೆ ಪಾತ್ರೆಯಾಕಾರ, ಲೋಟಕ್ಕೆ ಹಾಕಿದರೆ ಲೋಟದ ಆಕಾರ. ಅದರಂತೆ ಪತ್ನಿಯು ಪತಿಯು ನಿರ್ಧರಿಸಿದ ರೂಪವನ್ನು ಮಾತ್ರ ತಾಳಬೇಕು. ಇಂತಹ ಸ್ಥಾಪಿತ ಅಭಿಪ್ರಾಯಗಳನ್ನು ಮೀರಿ ಪತಿ ಇಲ್ಲದೆಯೂ ಬದುಕ ಬಲ್ಲೆ ಎಂದು ಹೊರನೆಡೆದ ಉಮಾಶ್ರೀಯವರ ನಿರ್ಧಾರ ಪ್ರತಿರೋಧದ ಸಂಕೇತವಾಗಿದೆ. ಇಲ್ಲಿ ಲೇಖಕರು ಮಗುವನ್ನು ಎತ್ತಿಕೊಂಡು ಹೊರನಡೆದಿದ್ದು ಹೊಸ ಬದುಕನ್ನು ಕಟ್ಟಿಕೊಳ್ಳುವುದರ ಭಾಗವಾಗಿದೆ. ಅಷ್ಟೇ ಅಲ್ಲದೆ ದಿಟ್ಟತನದ ಪ್ರತಿರೋಧವೂ ಆಗಿದೆ. ಈ ದಿಟ್ಟತನ ಉಮಾಶ್ರೀಯವರ ಬದುಕನ್ನು ಬದಲಿಸಿದ್ದು ಈಗ ಇತಿಹಾಸ. 'ಅನುದಿನದ ಅಂತರಗಂಗೆ'ಯಲ್ಲಿ ಪತಿಯಾದ ನಂದಕುಮಾರ್ ಇಲ್ಲದೆ ಕೆಲವು ವರ್ಷ ಬದುಕಿದ ಪ್ರತಿಭಾರವರ ಬದುಕಾಗಲಿ ಹಾಗೂ ಗಂಡನಿಲ್ಲದೆ ಹಲವು ಕ್ಷೇತ್ರಗಳಲ್ಲಿ ಸಾಧಿಸಿದ ಉಮಾಶ್ರೀಯವರ ಸ್ವತಂತ್ರ ಅಸ್ತಿತ್ವ ಕಟ್ಟಿಕೊಂಡ ಬದುಕಾಗಲಿ ಸಾಧ್ಯವಾಗಿದ್ದು ಅವರ ಸ್ವಾಭಿಮಾನದಿಂದ. ಇಲ್ಲಿ ಅವಮಾನದ ತೀವ್ರತೆ ಹೆಚ್ಚಿ ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಾಗ ಅದರಿಂದ ಹೊರಬರುವ

ಒತ್ತಡವು ಪ್ರತಿರೋಧವಾಗಿ ಹೊರಹೊಮ್ಮುವುದಕ್ಕೆ ಉಮಾಶ್ರೀಯವರು ತೋರಿದ ಪ್ರತಿರೋಧವೇ ಸಾಕ್ಷಿಯಾಗಿದೆ. ದಬ್ಬಾಳಿಕೆಗೆ ಹೊರತಾದ ಮಹಿಳಾ ಬದುಕಿನ ಹೊಸ ಸಾಧ್ಯತೆಗಳನ್ನು ಆತ್ಮಕಥೆಗಳಲ್ಲಿ ಕಾಣಿಸುತ್ತವೆ.

೬.೧.೮. ಪರ್ಯಾಯಗಳ ಮೂಲಕ ಪ್ರತಿರೋಧ: ಪ್ರತಿರೋಧಗಳು ಏಕರೂಪವಾಗಿರುವುದಿಲ್ಲ. ಈ ಪ್ರತಿರೋಧಗಳು ಸಂದರ್ಭಗಳನ್ನಾಧರಿಸಿ ಭಿನ್ನ ಭಿನ್ನವಾಗಿರುತ್ತವೆ. ಅದರಂತೆ ಸದಾ ಗಂಡನ ಅನುಮಾನಗಳಿಂದ ಅವಮಾನಕ್ಕೆ ಒಳಗಾಗುತ್ತಿದ್ದ ಪ್ರತಿಭಾ ಅವರು ಗೆಳತಿಯರ ಹೆಸರಲ್ಲಿ ಸಿನಿಮಾಕ್ಕೆ ಹೋಗುವುದು ಕೂಡ ಪ್ರತಿರೋಧವಾಗಿದೆ. ಇಲ್ಲಿ ನೇರವಾಗಿ ಸಿನಿಮಾಗೆ ಹೋಗುತ್ತೇನೆ ಎಂದು ಹೇಳದೆ ಪರ್ಯಾಯ ವಿಧಾನದ ಮೂಲಕ ಸಿನಿಮಾ ನೋಡಿದ್ದು ಗಂಡನ ಅನುಮಾನಕ್ಕೆ ತೋರಿದ ಪ್ರತಿರೋಧವೇ ಆಗಿದೆ. ದಮನಿತರು ನಿರ್ಬಂಧಿಸುವ ವ್ಯವಸ್ಥೆಯೊಳಗಡೆಯೇ ಪರ್ಯಾಯ ಬದುಕನ್ನು ಕಟ್ಟಿಕೊಳ್ಳುವುದು ಚೈತನ್ಯಾತ್ಮಕ ಬದುಕಿನ ಮುಂಚಲನೆಯಾಗಿರುವುದನ್ನು ಆತ್ಮಕಥೆಯಲ್ಲಿ ಕಾಣಬಹುದಾಗಿದೆ.

೬.೧.೯. ಹಲ್ಲೆಗೆ ತೋರಿದ ಪ್ರತಿರೋಧ: ಪತಿ, ಮಡದಿಯ ನಡುವೆ ಹಲ್ಲೆ ನಡೆಯಲೇಬೇಕೆಂದಿಲ್ಲ. ಆದರೂ ಗಂಡನಿಂದ ಹಲ್ಲೆಗೆ ಒಳಗಾದ ಮಹಿಳೆಯ ತಾಳ್ಮೆಗೂ ಮಿತಿಯಿರುವಂತೆ, ಅವಮಾನಗಳನ್ನು ಮೆಟ್ಟಿ ನಿಂತ ಸನ್ನಿವೇಶಗಳು 'ಗರಿಗೆದರಿದ ನವಿಲು' ಪಠ್ಯದಲ್ಲಿ ಜಲ್ಲೆ ಸಿದ್ದಮ್ಮನ ಮಾತಿನಲ್ಲಿ ಕಾಣಬಹುದು. "ಎಲ್ಲ ಗಂಡಸರೂ ಹೊಡೆಯುವವರೇ ಕಣಾ. ಆದರೆ ಯಾವ ಹೆಂಗಸರೂ ನನ್ನ ಹಾಗೆ ತಿರುಗಿ ಹೊಡೆದಿಲ್ಲ, ನಾನು ಮಾತ್ರ ನನ್ನ ಗಂಡ ತಿರುಗಿ ಹೊಡೆದರೆ ಸಹಿಸಿಕೊಳ್ಳಲಿಲ್ಲ.....ಅವನು ಈ ಸಿದ್ದಿ, ಹುಚ್ಚಿ ಬುಟ್ಟಾಳ ನನ್ನ ಅಂತ ಮತ್ತೆ ನನಗೆ ಹೊಡೆಯಲಿಲ್ಲ."[೨೦] ಎಂದು ಬರೆದುಕೊಳ್ಳುತ್ತಾರೆ. ಗಂಡನ ದೈಹಿಕ ಹಲ್ಲೆ ಮತ್ತು ಮಾನಸಿಕ ಹಲ್ಲೆಯನ್ನು ಅವಮಾನ ಎಂದು ಪರಿಗಣಿಸುವುದಾದರೆ, ಇಂತಹ ಅವಮಾನವನ್ನು ಸಹಿಸಿಕೊಳ್ಳುವ ಸಾಂಪ್ರದಾಯಿಕ ಕಲ್ಪನೆಗೆ ಪ್ರತಿರೋಧ ತೋರಿದ ಮಹಿಳೆಯಾಗಿ ಸಿದ್ದಮ್ಮ ನಮಗಿಲ್ಲಿ ಕಾಣುತ್ತಾರೆ. ಇಲ್ಲಿ ಗಂಡನಿಗೆ ಪ್ರತಿ ಏಟು ಕೊಟ್ಟಾಗ ಮತ್ತೆ ಗಂಡನು ಹೊಡೆಯಲು ಮನಸ್ಸು ಮಾಡಿಲ್ಲದಿರುವುದರ ಹಿಂದೆ ಸಿದ್ದಮ್ಮನ ದೈಹಿಕ ಮತ್ತು ಮಾನಸಿಕ ಬಲವು ಪತಿಗಿಂತ ಹೆಚ್ಚಿರುವುದೇ ಕಾರಣವಾಗಿರುವುದನ್ನು ಕಾಣಬಹುದಾಗಿದೆ. ಈ ಪ್ರತಿರೋಧವನ್ನು ಸಿದ್ದಮ್ಮ ಅತ್ಯಂತ ಸಹಜವಾದ ಭಾಷೆಯಲ್ಲಿ ಅಭಿವ್ಯಕ್ತಿಸಿದ್ದಾಳೆ. ಹಲ್ಲೆಗೆ ಪ್ರತಿ ಹಲ್ಲೆಯೇ ಉತ್ತರವಾಗುವುದು ಒಂದು ಬಗೆಯ ಮಿತಿಯಾದರೂ, ಸಾಂದರ್ಭಿಕವಾಗಿ ಪ್ರತಿರೋಧದ ಹಿನ್ನೆಲೆಯಲ್ಲಿ ಅಗತ್ಯವಾಗಿರುವುದನ್ನು ಆತ್ಮಕಥನಾತ್ಮಕ ಬರೆಹ ಸ್ಪಷ್ಟಪಡಿಸುತ್ತಿದೆ.

೬.೧.೧೦. ಇಡೀ ಬದುಕೇ ಪ್ರತಿರೋಧ: ಕನ್ನಡ ಆತ್ಮಕಥೆಗಳಲ್ಲಿ ಎರಡು ಮಾದರಿಯ ಪ್ರತಿರೋಧಗಳಿವೆ. ಒಂದನೆಯದು ಅವಮಾನಕ್ಕೆ ಒಳಗಾದ ತಕ್ಷಣ ಪ್ರತಿರೋಧಿಸುವುದು. ಎರಡನೆಯದು ಅವಮಾನಗಳಿಗೆ ತಾವೇ ನೇರವಾಗಿ ಪ್ರತ್ಯುತ್ತರ ಕೊಡದೆ, ಕಾಲವೇ ಉತ್ತರಿಸುವಂತೆ ಬದುಕಿ ತೋರಿಸುವುದು. ಈ

ಕೆಳಗಿನ ಪ್ರತಿರೋಧ ಎರಡನೇ ಸಂಗತಿಗೆ ಸಂಬಂಧಿಸಿದೆ. 'ಬೆಂಕಿ ಬೆಡಗು' ಆತ್ಮಕಥೆಯ "ಸಾವಿರ ಸಿಡಿಲುಗಳು ಸಿಡಿಯಲಿ, ಕೋಟಿ ಮಿಂಚುಗಳು ಮಿಂಚಲಿ, ಅರಳಲೇ ಬೇಕಾಗಿರುವ ಹೂಗಳು ಅರಳಿಯೇ ತೀರುವವು"[೨೧] ಎಂಬ ಮಾತು ಬರುತ್ತದೆ. ಈ ಸಾಲುಗಳಲ್ಲಿನ ಸಿಡಿಲು, ಮಿಂಚು ಎನ್ನುವ ಪದಗಳು ಬಡತನ, ಹಸಿವು, ಲಿಂಗ ತಾರತಮ್ಯದ ಅವಮಾನ ತುಂಬಿದ ಬದುಕನ್ನು ನಿರ್ದೇಶಿಸಿದರೂ, ಅವುಗಳನ್ನು ಮೀರಿ ಬದುಕುವ ಚೈತನ್ಯಶೀಲತೆ ಹೂಗಳು ಅರಳುವುದನ್ನು ಸಾಂಕೇತಿಸುತ್ತವೆ. ಈ ಚೈತನ್ಯಾತ್ಮಕತೆಯಲ್ಲಿ ಪ್ರತಿರೋಧದ ಛಲವಿದೆ. ಎಲ್ಲಾ ಅವಮಾನಗಳನ್ನು ಮೀರಿದ ಉಮಾಶ್ರೀಯವರ ಇಡೀ ಬದುಕೇ ಪ್ರತಿರೋಧದ ರೂಪಕವಾಗಿರುವುದನ್ನು ಆತ್ಮಕಥೆಯು ನಿದರ್ಶಿಸುತ್ತದೆ.

**೬.೨. ಸಾಂಸ್ಕೃತಿಕ ನೆಲೆಯಲ್ಲಿ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು**

ಲಿಂಗ, ವರ್ಗ, ಜಾತಿ, ಧರ್ಮ ಇವೆಲ್ಲವೂ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಪರಿಕಲ್ಪನೆಗಳಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಸಂಸ್ಕೃತಿ ಹೆಸರಲ್ಲಿ ತುಳಿತಕ್ಕೆ ಒಳಗಾದ ಮತ್ತು ಒಳಗಾಗುತ್ತಿರುವ ದಮನಿತ 'ಸಮುದಾಯಗಳ' ಸಂಸ್ಕೃತಿ ಕುರಿತು ಚರ್ಚಿಸಲಾಗುತ್ತದೆ. ಈ ಸಾಂಸ್ಕೃತಿಕ ಹಿನ್ನೆಲೆಯನ್ನು ಪ್ರವೇಶಿಸಿದಾಗ ಲಿಂಗ ವ್ಯವಸ್ಥೆಯಲ್ಲಿಯೂ ಹಲವು ಶ್ರೇಣೀಕರಣಗಳಿರುವುದು ಕಂಡುಬರುತ್ತದೆ. ಹೀಗೆ ಶ್ರೇಣೀಕರಣಗಳಿರುವುದರಿಂದ ಆಗಿರಬಹುದಾದ ಅವಮಾನ ಮತ್ತು ಪ್ರತಿರೋಧಗಳ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ಲಿಂಗ ವ್ಯವಸ್ಥೆಯೊಳಗಡೆ ಹಲವು ಸಾಂಸ್ಕೃತಿಕ ಚಹರೆಗಳಿವೆ. ಪುರುಷನ ಸಾಂಸ್ಕೃತಿಕ ಚಹರೆ, ಮಹಿಳೆಯ ಸಾಂಸ್ಕೃತಿಕ ಚಹರೆ ಮತ್ತು ತೃತೀಯ ಲಿಂಗಿಗಳ ಸಾಂಸ್ಕೃತಿಕ ಚಹರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಸ್ವತಂತ್ರ ಜೀವಿ. ಎಲ್ಲಾ ಸಂಗತಿಗಳಲ್ಲೂ ಆತನಿಗೆ ಮೊದಲ ಆದ್ಯತೆ. ಪತಿಯೇ ಪರದೈವ ಅವರನ್ನು ಬಿಟ್ಟು ಮತ್ಯಾವ ದೇವರಿಲ್ಲ. ಪುರುಷರು ಎಷ್ಟು ಬೇಕಾದರೂ ಮದುವೆಯಾಗಬಹುದು ಎಂಬ ನಂಬಿಕೆಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಸಾಂಸ್ಕೃತಿಕ ಚಹರೆಗಳಿವೆ. ಸ್ತ್ರೀ ಸಾಂಸ್ಕೃತಿಕ ಚಹರೆಯಲ್ಲಿ ಮಹಿಳೆಯರು ದ್ವಿತೀಯ ಲಿಂಗಿಯಾಗಿರುತ್ತಾರೆ. ಬಾಲ್ಯದಿಂದಲೇ ಹೆಣ್ಣಿಗೆ ಹಲವಾರು ನಿರ್ಬಂಧಗಳಿರುತ್ತವೆ. ಮಹಿಳೆಯರನ್ನು ಅಧೀನದಲ್ಲಿಡಲು ಬಾಲ್ಯವಿವಾಹವು ಒಂದು ಪ್ರಮುಖ ಅಸ್ತ್ರವಾಗಿತ್ತು. 'ಮಹಿಳೆ, ಸಮಾಜ, ಸಂಸ್ಕೃತಿ'ಯಲ್ಲಿನ "ಹೆಣ್ಣು ಮಗುವು ಪ್ರಾಪ್ತ ವಯಸ್ಸಿಗೆ ಬರುವ ಮುನ್ನವೇ ಅವರಿಗೆ ವಿವಾಹ ಮಾಡಬೇಕು. ಇಲ್ಲದಿದ್ದರೆ ಆಕೆ ಪ್ರತಿ ಬಾರಿ ಋತುಮತಿಯಾದಾಗ, ಒಂದು ಭ್ರೂಣವನ್ನು ಕೊಂದ ಪಾಪ ಆಕೆಯ ಪೋಷಕರಿಗೆ ತಟ್ಟುತ್ತದೆ"[೨೨] ಎಂಬ ಯಾಜ್ಞವಲ್ಕ್ಯ ಮುನಿಯ ಮಾತುಗಳು ಸ್ಮೃತಿಗಳ ಕಾಲದಲ್ಲಿ ವಿವಾಹದ ವಯಸ್ಸನ್ನು ಕುರಿತಂತೆ ಅಸ್ತಿತ್ವದಲ್ಲಿದ್ದ ಧೋರಣೆಗೆ ಸಾಕ್ಷಿಯಾಗಿದೆ.

ಇಲ್ಲಿ ಹೆಣ್ಣು ಮಗುವನ್ನು ವಿವಾಹ ಮಾಡುವುದೇ ಜೀವನದ ಪರಮ ಗುರಿ ಎಂಬ ಸಂಪ್ರದಾಯವನ್ನು ಸ್ಮೃತಿ ಮೂಲಕ ಒಪ್ಪಿಸಲಾಗಿದೆ. ಬಾಲ್ಯದಿಂದಲೇ ಮಹಿಳೆ ಶೀಲವಂತಳೂ,

ಗೃಹಿಣಿಯೂ, ಪತಿವ್ರತೆಯೂ ಆಗಿರಬೇಕು. ಗಂಡನ ಸಂಕಷ್ಟಗಳನ್ನು ಸಹಿಸಿಕೊಳ್ಳಬೇಕು. ಮಹಿಳೆ ತಗ್ಗಿ ಬಗ್ಗಿ ನಡೆದರೆ ಮಾತ್ರ ಸುಸಂಸ್ಕೃತಳು ಎನ್ನುವ ನಿಲುವುಗಳಿವೆ. ಕಲಾ ಕ್ಷೇತ್ರ ಹಾಗೂ ಇನ್ನಿತರ ಕ್ಷೇತ್ರಗಳಲ್ಲಿ ಮಹಿಳೆಯು ಹಲವು ಸಂಕಷ್ಟಗಳಿಗೆ ಒಳಗಾಗುವ ಸಾಧ್ಯತೆಯು ಹೆಚ್ಚಿರುತ್ತದೆ. ಇವೆಲ್ಲವೂ ಮಹಿಳೆಗೆ ಮಾತ್ರ ಇರಬಹುದಾದ ನಿರ್ಬಂಧಗಳಾಗಿವೆ. ಹೀಗೆ ಪುರುಷರಿಗೊಂದು, ಮಹಿಳೆಯರಿಗೊಂದು ಇರುವ ಸಂಸ್ಕೃತಿ ಚಹರೆಗಳು ಹಲವು ಶ್ರೇಣೀಕರಣಗಳನ್ನು ಸೃಷ್ಟಿಸಿವೆ. ಸಂಸ್ಕೃತಿ ಚಹರೆಯಲ್ಲಿ ಮೊದಲ ಸ್ಥಾನದಲ್ಲಿರುವುದೇ ಸಂಪ್ರದಾಯಗಳು ಮತ್ತು ಆಚರಣೆಗಳು. ಈ ಸಂಪ್ರದಾಯ, ಆಚರಣೆಗಳ ಹೆಸರಲ್ಲೂ ಮಹಿಳೆಯರನ್ನು ಅವಮಾನಿಸುವ ಪರಿ ಆತ್ಮಕಥೆಗಳಲ್ಲಿವೆ. ಇತ್ತೀಚೆಗೆ ಪುರುಷ ಪ್ರಧಾನ ಮತ್ತು ಸ್ತ್ರೀ ಪ್ರಧಾನ ಸಂಸ್ಕೃತಿ ಚಹರೆಗಳು ಬದಲಾಗುತ್ತಿರುವ ಹಾದಿಯಲ್ಲಿವೆ. ಪುರುಷ ಪ್ರಧಾನ ವ್ಯವಸ್ಥೆಯು ತಮ್ಮನ್ನು ಅಲ್ಪಮಟ್ಟಿಗೆ ವಿಮರ್ಶಿಸಿಕೊಳ್ಳುತ್ತಿದ್ದರೆ, ಸ್ತ್ರೀಯರು ನಿಧಾನಗತಿಯಲ್ಲಿ ಪ್ರಧಾನ ನೆಲೆಗೆ ಬರುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಇವೆರಡೂ ಕ್ರಿಯೆಗಳು ನಿಧಾನಗತಿಯಲ್ಲಿ ಅರಳುಗಟ್ಟುತ್ತ, ಕೆಲವು ಪ್ರತಿರೋಧಗಳನ್ನೂ ಉಂಟು ಮಾಡಿವೆ.

೬.೨.೧. ಸಂಪ್ರದಾಯದ ಹೆಸರಲ್ಲಿ ಆಗುವಂತಹ ಅವಮಾನ: 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಬರುವ 'ಓಕುಳಿಯೆಂಬ ಈಸ್ಟಮನ್ ಕಲರ್ ಚಿತ್ರ' ಸನ್ನಿವೇಶದಲ್ಲಿ ಬಿದರಕುಂದಿಯ ದಲಿತ ಹೆಣ್ಣು ಮಕ್ಕಳು ಮಾತ್ರ ಅರೆಬೆತ್ತಲೆಯಾಗಿ ದಲಿತೇತರ ಗಂಡಸರು ತಂದು ಎರಚುವ ಓಕುಳಿ ನೀರಿನಿಂದ ತಪ್ಪಿಸಿಕೊಂಡು, ಓಕುಳಿ ನೀರನ್ನು ತಂದು ಎರಚುವ ಗಂಡಸಿಗೆ ಜಬರಿಯಿಂದ ಹೊಡೆಯುವ ಆಟವಿದೆ. ಜೊತೆಗೆ ತುಣ್ಣಗನೂರಿನಲ್ಲಿಯೂ ದಲಿತ ಮಹಿಳೆಯರು ಪೂರ್ತಿ ಬೆತ್ತಲೆ ಇದ್ದು, ದಲಿತೇತರ ಗಂಡಸರ ಭುಜದ ಮೇಲೆ ಕೂತು ಗಂಡಸರಿಗೆ ಬಾಳೆ ಹಣ್ಣನ್ನು ತಿನ್ನಿಸುವಂತಹ ಆಚರಣೆ ನಡೆಯುವುದರ ಉಲ್ಲೇಖವಿದೆ. ಈ ಎರಡೂ ಘಟನೆಗಳಲ್ಲಿರುವ ಅರೆಬೆತ್ತಲೆ, ಪೂರ್ತಿ ಬೆತ್ತಲೆ, ಓಕುಳಿ ನೀರು, ಬಾಳೆಹಣ್ಣು ಈ ಎಲ್ಲಾ ಪದಗಳು ದಲಿತ ಮಹಿಳೆಯರ, ದಲಿತೇತರ ಗಂಡಸರ ಸುತ್ತಲು ಸುತ್ತುವರಿದಿರುವ ಪದಗಳಷ್ಟೇ ಆಗದೇ ಮೂಢ ಆಚರಣೆಯ ಭಾಗವೂ ಆಗಿವೆ. ಸಂಪ್ರದಾಯದ ಹೆಸರಲ್ಲಿ ಈ ಆಟವನ್ನು ಆಡಿಸಲಾಗುತ್ತಿದ್ದು, ಊರಿನ ಒಳಿತಿಗಾಗಿ ಆಡಬೇಕೆಂಬ ನೆಪವನ್ನು ಮುಂದಿಟ್ಟು ದಲಿತ ಸಮುದಾಯದ ಹೆಣ್ಣುಮಕ್ಕಳನ್ನು ಅವಮಾನಿಸಲಾಗುತ್ತದೆ. ಮೇಲ್ಜಾತಿ ಪುರುಷರ ಲೈಂಗಿಕ ಸ್ವಾರ್ಥತೆ ಕುರಿತ ಆಚರಣೆಗಳ ಭಾಗವಾಗಿ ಈ ಸಂಗತಿಗಳನ್ನು ಗಮನಿಸಬೇಕಾಗಿದೆ. ಇಂತಹ ಅವಮಾನಗಳು ಮೇಲ್ಜಾತಿಯ ಮಹಿಳೆಯರಲ್ಲಿರದೆ, ತಳಸಮುದಾಯದ ಮಹಿಳೆಯರಿಗೆ ಮಾತ್ರ ಸೀಮಿತವಾಗಿರುತ್ತವೆ. ದೇವದಾಸಿ ಪದ್ಧತಿ ಕೂಡ ಇಂತಹದ್ದೇ ಆಚರಣೆಯಾಗಿದೆ. ಸಂಪ್ರದಾಯಗಳನ್ನು ಧನಾತ್ಮಕವಾಗಿ ನೋಡುವ ಸಿದ್ಧ ಮಾದರಿಯ ನೋಟಗಳನ್ನು ಮೇಲೆ ಉಲ್ಲೇಖಿಸಿದ ಆತ್ಮಕಥೆಯಲ್ಲಿನ ವಿವರಗಳು ಮುರಿದು ಕಟ್ಟುವುದರ ಜೊತೆಗೆ ಇಂತಹ ಶೋಷಣೆಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುತ್ತವೆ.

೬.೨.೨. ಕಲಾ ಕ್ಷೇತ್ರ ಮತ್ತು ಅವಮಾನ: ರಂಗಭೂಮಿ ಮತ್ತು ಸಿನಿಮಾ ಕ್ಷೇತ್ರಗಳಲ್ಲಿ ಪುರುಷರು ಪ್ರವೇಶ ಪಡೆದಷ್ಟು ಸುಲಭವಾಗಿ ಮಹಿಳೆ ಪ್ರವೇಶಿಸುವುದು ಕಷ್ಟ. ಏಕೆಂದರೆ ಕಲಾಕ್ಷೇತ್ರದಲ್ಲಿ ದುಡಿಯುವ ಮಹಿಳೆಯನ್ನು ಈ ಸಮಾಜವು 'ಸೂಳೆ', 'ನೀತಿಗೆಟ್ಟವಳು' ಎಂದು ಆರೋಪಿಸುತ್ತದೆ. ಇದರ ಜೊತೆಗೆ ಇಂತಹ ಕ್ಷೇತ್ರಗಳಲ್ಲಿ ಏನೇ ತಪ್ಪು ನಡೆದರೂ ಅದಕ್ಕೆ ಮಹಿಳೆಯನ್ನೇ ಹೊಣೆ ಮಾಡಲಾಗುತ್ತದೆ. ಉದಾಹರಣೆಗೆ ಕೆಳಗಿನ ಸನ್ನಿವೇಶವನ್ನು ಗಮನಿಸಬಹುದು.

ಅ. 'ಬೆಂಕಿ ಬೆಡಗು'ವಿನಲ್ಲಿ ಉಮಾಶ್ರೀಯವರು ತಮ್ಮ ಮೇಲೆ ಸಹನಟನೊಬ್ಬ ದೌರ್ಜನ್ಯ ಮಾಡುವುದನ್ನು "ಸ್ವಲ್ಪ ಅಸಂಬದ್ಧ. ಕಿರಿಕಿರಿ ಮಾಡೋ ಹುಡುಗ. ನಾವು ನಮ್ಮ ಜೊತೆ ಪಾರ್ಟು ಮಾಡೋ ಹುಡುಗರಿಗೆ ಸ್ಕೋಪ್ ಕೊಡಬೇಕಿತ್ತು. ಕೆಲವು ನಟರಿಗೆ ನಟಿಯರ ಮೈಕೈ ತಾಗಿಸಿಕೊಳ್ಳುವುದು, ಎಳೆದಾಡೋದು, ಜಗ್ಗಾಡೋದನೆಲ್ಲಾ ಮಾಡೋ ಚಪಲ. ನನ್ನಲ್ಲೂ ಅದನ್ನೂ ಮಾಡಲು ಪೋರ್ಸ್ ಮಾಡ್ತಿದ್ರು, ನಾನದನ್ನು ವಿರೋಧಿಸಿದ್ದಕ್ಕೆ ನನ್ನ ಮೇಲೆ ಪಿತೂರಿ ಮಾಡಿದ್ದರು"[೨೩] ಎಂದು ಬರೆದುಕೊಳ್ಳುತ್ತಾರೆ. ಇದು ಲೇಖಕಿಯ ವೃತ್ತಿ ಬದುಕಿನ ಪೂರ್ವಾರ್ಧದ ಘಟನೆಯಾದರೆ, "ಚಿತ್ರರಂಗವನ್ನೇ ಕೆಡಿಸಿದ ನಟಿ"[೨೪] ಎಂದು ಉಮಾಶ್ರೀಯವರನ್ನು ದೂರುವುದು ಉತ್ತರಾರ್ಧದ ಘಟನೆಯಾಗಿದೆ. ಇವುಗಳೆಲ್ಲದರ ಜೊತೆಗೆ "ನಾನಿದ್ದ ಏರಿಯಾದಲ್ಲಿ ಉಮಾ ಏನೋ ಬೇರೆ ವ್ಯವಹಾರ ಮಾಡ್ತಿದ್ದಾಳೆ ಎಂಬ ಗುಮಾನಿ ಬಲವಾಗಿ ಹುಟ್ಟಿಕೊಂಡಿತು. ನನ್ನನ್ನು ಸಂಶಯದಿಂದ ನೋಡಿ, ವ್ಯಭಿಚಾರಿ, ಸೂಳೆ ಅನ್ನೋ ಪಟ್ಟ ನೀಡಿದ ನಿಷ್ಕರುಣಿ ಸಮಾಜವಿದು"[೨೫] ಎಂದು ಲೇಖಕರು ವಿವರಿಸುತ್ತಾರೆ. ಮೇಲ್ಕಂಡ ಸನ್ನಿವೇಶಗಳಲ್ಲಿ ಪ್ರಮುಖವಾಗಿ ಮೂರು ಸಂಗತಿಗಳನ್ನು ಕಾಣಬಹುದಾಗಿದೆ. ಮೊದಲನೆಯದು ಸಹ ನಟನಿಂದ ದೌರ್ಜನ್ಯದ ಪ್ರಯತ್ನ. ಎರಡನೆಯದು ಮಹಿಳೆಯನ್ನು ಮತ್ತು ಆಕೆಯ ಬದುಕನ್ನು, ಮುಗ್ಧತೆಯನ್ನು ಬಂಡವಾಳವಾಗಿಸಿ ಅವಳಿಂದ ಬೇಕಾದ ಲಾಭವನ್ನು ಪಡೆದು ಮತ್ತು ಅದರ ಮಿತಿಗೆ ಅವಳನ್ನೇ ಹೊಣೆ ಮಾಡುವ ಹೊಣೆಗೇಡಿ ಗುಣ. ಇನ್ನೂ ಮೂರನೆಯದಾಗಿ ಮಹಿಳಾ ಕಲಾವಿದರ ಬಗ್ಗೆ ಸಾಮಾಜಿಕ ವ್ಯವಸ್ಥೆಯಲ್ಲಿರುವಂತಹ ನಕಾರಾತ್ಮಕ ದೃಷ್ಟಿಕೋನ. 'ದ್ವಂದ್ವಾರ್ಥ ನಟಿ', ಕನ್ನಡ ಸಿನಿಮಾಕ್ಕೆ 'ಇತಿಶ್ರೀ' ಹಾಡಲು ಬಂದವಳು, ಬಜಾರಿ, ಸೆಕ್ಸಿ ಬಾಂಬ್ ಎಂಬ ಆರೋಪಕ್ಕೆ ಒಳಗಾಗಿ, ಕಷ್ಟಗಳ ನಡುವೆಯೂ ಅನ್ಯ ಮಾರ್ಗವಿಡಿಯದೆ ಪ್ರಾಮಾಣಿಕವಾಗಿದ್ದ ಲೇಖಕಿ ಇಷ್ಟೆಲ್ಲ ಅವಮಾನಗಳಿಗೆ ಒಳಗಾಗಬೇಕಾಯಿತು. ಮಕ್ಕಳನ್ನು ಉಳಿಸಿಕೊಳ್ಳುವ ಧಾವಂತದಲ್ಲಿದ್ದ ನಟಿಯನ್ನು, ಹಣಕ್ಕಾಗಿ ದ್ವಂದ್ವಾರ್ಥದ ಸಿನಿಮಾಗಳಿಗೆ ಬಳಸಿಕೊಂಡ ಪುರುಷ ಪ್ರಧಾನ ವ್ಯವಸ್ಥೆಯು; ನಂತರ ಆಕೆಯನ್ನು ಹೀಗಳೆದಿದ್ದು ಒಂದು ವಿಚಿತ್ರ ಸಂಗತಿಯಾಗಿ ಕಾಣುತ್ತದೆ. ಮಹಿಳೆಯರಿಗೆ ಕೇವಲ ಕಲಾಕ್ಷೇತ್ರದಲ್ಲಿ ಮಾತ್ರ ಹೀಗೆ ಅವಮಾನವಾಗುತ್ತಿಲ್ಲ, ಅವರು ಪ್ರತಿನಿಧಿಸುತ್ತಿರುವ ಬಹುತೇಕ ಕ್ಷೇತ್ರಗಳಲ್ಲಿ ಅವಮಾನವನ್ನು ಅನುಭವಿಸುತ್ತಿದ್ದಾರೆ. ಕಲಾಜಗತ್ತು ಏಕಕಾಲದಲ್ಲಿ ಕಲಾವಿದರನ್ನು

ಅವಮಾನಿಸುವ ಮತ್ತು ಅವಮಾನಗಳಿಂದ ಹೊರತರುವ ಎರಡೂ ಚಹರೆಗಳನ್ನು ಹೊಂದಿದೆ. ಒಂದು ಕಾಲದಲ್ಲಿ ನಿಂದನೆಗೊಳಗಾದ ಉಮಾಶ್ರೀ ಅವರು ಕಾಲಾಂತರದಲ್ಲಿ ಗೌರವಾದರಕ್ಕೆ ಒಳಗಾಗಿರುವುದನ್ನು ಆತ್ಮಕಥೆಯಲ್ಲಿ ಗುರುತಿಸಬಹುದಾಗಿದೆ.

ಆ. ಬಿ.ವಿ. ಕಾರಂತರ 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' ಆತ್ಮಕಥೆಯಲ್ಲಿ ಒಂದು ಪ್ರಸ್ತಾವ ಬರುತ್ತದೆ. "ಶೀಲದ ಪ್ರಶ್ನೆ ಬಂದಾಗೆಲ್ಲಾ ವೀರಣ್ಣನವರು ಶಿಕ್ಷೆ ಕೊಟ್ಟದ್ದೂ ಹೆಚ್ಚಾಗಿ ಹೆಂಗಸರಿಗೇ, ಒಮ್ಮೆ ಒಬ್ಬ ವಿಧವೆ ಬಂದಿದ್ದಳು ಕಂಪನಿಗೆ ಸೇರಿಕೊಳ್ಳುವುದಕ್ಕೆ. ಆಗ ಅವಳಿಗಿನ್ನೂ ೨೩-೨೪ ವರ್ಷ. ಕಂಪನಿಯಲ್ಲಿ ಸಿದ್ಧಲಿಂಗಯ್ಯ ಅಂತ ಒಬ್ಬ ಇದ್ದ. ಒಂದು ದಿನ ರಾತ್ರಿ ಎಲ್ಲರೂ ಮಲಗಿದ್ದಾಗ ಆತ ಆ ನಟಿಯ ಹತ್ತಿರ ಹೋದ ಅಂತ ಪಂಚಾತಿಕೆ ಶುರುವಾಯಿತು. ವೀರಣ್ಣನವರು ಆಗ ಕರೆಕಳಿಸಿದ್ದು ನಟಿಗೆ. ಅವಳ ಹತ್ತಿರ 'ಏನಮ್ಮಾ ಕೆಳಗಿಂದ ಬಿಸಿ ತಟ್ಟಾ?' ಅಂತ ಕೇಳಿದರೇ ಹೊರತು ಸಿದ್ಧಲಿಂಗಯ್ಯನವರಿಗೆ ಏನೂ ಹೇಳಲಿಲ್ಲ. ಅವರ ಪ್ರಕಾರ ಕಂಪನಿಯ ಹೆಸರು ಕೆಡೋದು ನಟರಿಂದಲ್ಲ ನಟಿಯರಿಂದ"[೨೬] ಎಂದು ಬಿ.ವಿ. ಕಾರಂತರು ದಾಖಲಿಸುತ್ತಾರೆ. ಸಂಸ್ಕೃತಿ ಚಹರೆಯು ಮುಖ್ಯವಾಗುವುದು ಇಲ್ಲಿಯೆ. ವಿಧವೆಯಾದ ನಟಿಯ ಬಳಿ ಪುರುಷನು ಹೋದಾಗ ಗುಬ್ಬಿ ವೀರಣ್ಣನವರು ಪ್ರಶ್ನಿಸಬೇಕಾಗಿದ್ದು ನಟನನ್ನಾಗಿತ್ತು. ಆದರೆ ಅವರು ನಟಿಗೆ ಹೇಳುವ ಮಾತು ಪುರುಷ ಪ್ರಧಾನ ಆಲೋಚನ ಕ್ರಮವನ್ನು ಪ್ರತಿನಿಧಿಸುತ್ತದೆ. ಗುಬ್ಬಿ ವೀರಣ್ಣನವರು ಬಳಸಿದ ಭಾಷೆ ಶೀಲತ್ವವನ್ನು ಅವಮಾನಿಸುವ ಪ್ರತೀಕವಾಗಿದೆ. ಗಂಡಿನ ನೈತಿಕ ಅವನತಿಗೆ ಹೆಣ್ಣೇ ಕಾರಣವೆಂಬ ಅಭಿಪ್ರಾಯವು ವೀರಣ್ಣನವರ ಕಠೋರ ಮಾತಿನಲ್ಲಿದೆ. ವಿಧವೆಯ ಅಸಹಾಯಕತೆಯನ್ನು ಬಳಸಿಕೊಳ್ಳಲು ಬಂದ ಸಿದ್ಧಲಿಂಗಯ್ಯ ದಬ್ಬಾಳಿಕೆಯ ಪ್ರತಿನಿಧಿಯಾದರೆ, ಪರಾಮರ್ಶಿಸದೆ ನಟಿಗೆ ಅಶ್ಲೀಲವಾಗಿ ಮಾತನಾಡಿದ ಗುಬ್ಬಿ ವೀರಣ್ಣ ಕುರುಡಾಗಿ ಆರೋಪಿಸುವವರಾಗಿದ್ದಾರೆ. ಗುಬ್ಬಿ ವೀರಣ್ಣನಂತಹ ಹೆಸರಾಂತ ಕಲಾವಿದರಲ್ಲೂ ಸಹ ಸಾಂಪ್ರದಾಯಿಕ ತರತಮದ ಪಡಿಯಚ್ಚು ಅಂತರ್ಗತವಾಗಿರುವುದನ್ನು ಆತ್ಮಕಥೆಯೂ ಧ್ವನಿಸುತ್ತದೆ.

**೬.೨.೩.** ಹುಟ್ಟಿನಿಂದಲೇ ಅವಮಾನ: ಸಂಚಿ ಹೊನ್ನಮ್ಮ ಬರೆದ 'ಹದಿಬದೆಯ ಧರ್ಮ'ದ ಕೃತಿಯಲ್ಲಿನ 'ಕಣ್ಣು ಕಾಣದ ಗಾವಿಲರು' ಎಂಬ ಹೇಳಿಕೆಯು ಪಿತೃ ಸಂಸ್ಕೃತಿಯನ್ನು ಪ್ರಶ್ನಿಸುವ ಕೆಲಸ ಮಾಡುತ್ತವೆ, ಮನು ಹೇಳಿರುವಂತೆ ಸ್ತ್ರೀ ಮಾತ್ರ ಪುರುಷನನ್ನು ಅವಲಂಬಿಸಿರುವುದಿಲ್ಲ, ಪುರುಷನೂ ಕೂಡ ಸ್ತ್ರೀಯನ್ನು ಅವಲಂಬಿಸಿರುತ್ತಾನೆ. ಆದರೆ ಇಷ್ಟೆಲ್ಲ ಪೊರೆಯುವ ಹೆಣ್ಣಿಗೆ ಮಾತ್ರ ಭ್ರೂಣ ವ್ಯವಸ್ಥೆಯಿಂದಲೇ ಅವಮಾನವಾಗುತ್ತದೆ, ಈ ಅವಮಾನವನ್ನೇ ಸಂಚಿ ಹೊನ್ನಮ್ಮ ಪ್ರಶ್ನಿಸಿದ್ದಾಳೆ. 'ಟೈಮ್ ಪಾಸ್' ಕೃತಿಯಲ್ಲಿ ಹೆಣ್ಣಿನ ಹುಟ್ಟಿನ ಬಗ್ಗೆ ಪ್ರೊತಿಮಾ ಹೀಗೆ ಹೇಳುತ್ತಾರೆ. "ಅಮ್ಮ ಎರಡನೇ ಮಗುವನ್ನು ಹೆತ್ತಿದ್ದಳು. ಸುದ್ದಿ ತಿಳಿಯುತ್ತಿದ್ದಂತೆಯೇ ಎಲ್ಲರು ಸಿಡಿಲು ಸುರಿದವರಂತೆ ನಿಂತು ಬಿಟ್ಟರು. ಎರಡನೆಯದೂ ಹೆಣ್ಣು ಮಗು! ಅವತ್ತು ಆಕಾಶ ಕಳಚಿ ಬಿದ್ದಿತು. ಅಪ್ಪನ

ಬಾಯಿಂದ ಕೈಯಿಟ್ಟು ತೆಗೆದಂತೆ ನಾನು ಹುಟ್ಟಿಬಿಟ್ಟಿದ್ದೆ. ಇಡೀ ಮನೆತನಕ್ಕೆ ಅದೊಂದು ದೊಡ್ಡ ಆಘಾತ. ಎರಡನೇ ಹೆಣ್ಣು ಮಗುವಾಗಿ ಹುಟ್ಟುವುದು ಭಯಂಕರ. ಅವರೆಲ್ಲರ ಮುಖಗಳಲ್ಲೂ ನನ್ನೆಡೆಗೆ ಅಮ್ಮ ರೇಬಾಳೆಡೆಗೆ ಒಂದು ತಿರಸ್ಕಾರವಿತ್ತು. 'ಬರೀ ಹೆಣ್ಣು ಹಡೆಯುತ್ತದೆ ಶನಿ' ಎಂದು ಮೂದಲಿಸುತ್ತಿದ್ದರು"[೨೭] ಎಂದು ಲೇಖಕಿಯು ಬರೆದುಕೊಳ್ಳುತ್ತಾರೆ.

ಹೆಣ್ಣಿನ ಸಾಂಸ್ಕೃತಿಕ ಚಹರೆಯಲ್ಲಿ ಅವಮಾನ ಎನ್ನುವುದು ಹೆಣ್ಣು ಮಗುವಿನ ಹುಟ್ಟಿನಿಂದಲೇ ಆರಂಭವಾಗುವುದನ್ನು ಆತ್ಮಕಥನಕಾರರು ಇಲ್ಲಿ ತೆರಿದಿಟ್ಟಿದ್ದಾರೆ. ಎರಡನೆಯ ಮಗುವು ಹೆಣ್ಣೇ ಆದರೆ ಕೌಟುಂಬಿಕ ವ್ಯವಸ್ಥೆಯೊಳಗೆ ಯಾವ ಬಗೆಯ ಆತಂಕ, ಅಸಹಿಷ್ಣುತೆಯುಂಟಾಗುತ್ತದೆ ಎಂಬುದನ್ನು ಸಿಡಿಲು ಬಡಿದವರಂತೆ ಮಾಡುವ ಮತ್ತು ತಾಯಿಯನ್ನು ತಿರಸ್ಕರಿಸುವ ಸಂಗತಿಗಳನ್ನು ಲೇಖಕರ ಕೌಟುಂಬಿಕ ವ್ಯವಸ್ಥೆಯಲ್ಲಿ ಕಾಣಬಹುದಾಗಿದೆ. ಗಂಡು ಮಗು ಹುಟ್ಟಿದರೆ ಇರುವ ಗೌರವ, ಪುರಸ್ಕಾರಗಳು ಹೆಣ್ಣು ಮಗು ಹುಟ್ಟಿದರೆ ಇರುವುದಿಲ್ಲ. ಆಶೀರ್ವಾದ ಮಾಡುವಾಗಲೂ 'ಗಂಡು ಮಗುವಿನ ತಾಯಿಯಾಗು' (ಪುತ್ರಮೇವ ಸಂತಾನ ಪ್ರಾಪ್ತಿರಸ್ತು) ಎಂದೇ ಹೇಳುತ್ತಾರೆ. ಗಂಡಿನ ವೀರ್ಯಾಣುವೇ ಹುಟ್ಟುವ ಮಗುವನ್ನು ಗಂಡೋ, ಹೆಣ್ಣೋ ಎಂಬುದನ್ನು ನಿರ್ಧರಿಸುತ್ತದೆ ಎಂಬುದು ಬಹಳಷ್ಟು ಜನಕ್ಕೆ ಗೊತ್ತಿರುವುದಿಲ್ಲ. ಗೊತ್ತಿದ್ದರೂ ಪುರುಷ ಪ್ರಧಾನ ವ್ಯವಸ್ಥೆಯು ಈ ಸತ್ಯವನ್ನು ಮರೆಮಾಚುತ್ತದೆ. ತನ್ನನ್ನು ಮಾತ್ರ ಯಾವಾಗಲೂ ರಕ್ಷಣಾತ್ಮಕವಾಗಿರಿಸಿಕೊಳ್ಳುತ್ತದೆ. ಇಂತಹ ಸಂದರ್ಭಗಳಲ್ಲಿ ಅವಮಾನಕ್ಕೆ ಒಳಗಾಗುವುದು ಮಾತ್ರ ಹೆತ್ತ ತಾಯಿ ಮತ್ತು ಹುಟ್ಟಿದ ಹೆಣ್ಣು ಮಗು. ಅದರಲ್ಲೂ ಎರಡನೇ ಹೆಣ್ಣು ಮಗುವಾಗಿ ಪ್ರೊತಿಮಾ ಅವರು ಹುಟ್ಟಿದಾಗ ಮಾತ್ರ ಅದರ ಪರಿಣಾಮ ಅತ್ಯಂತ ಅಸಹನೀಯವಾಗಿರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ.

**೬.೨.೪.** ಲಿಂಗ ಮತ್ತು ಸೌಂದರ್ಯ: ಮಹಿಳೆಯು ಏಕಕಾಲಕ್ಕೆ ಲಿಂಗದ ಕಾರಣಕ್ಕೂ ಮತ್ತು ಬಣ್ಣದ ಕಾರಣಕ್ಕು ಅವಮಾನ ಅನುಭವಿಸುವ ಸನ್ನಿವೇಶವು 'ನಿರಕ್ಷರಿಯ ಆತ್ಮಕತೆ'ಯಲ್ಲಿ ಕಾಣಬಹುದಾಗಿದೆ. ಇಲ್ಲಿ ಸುಶೀಲಾ ರಾಯ್ ಅವರು ತಾನು ಕಪ್ಪಾಗಿದ್ದಕ್ಕೆ ತಮ್ಮ ಕುಟುಂಬದ ತೊಳಲಾಟ ಕುರಿತು ಹೀಗೆ ಹೇಳುತ್ತಾರೆ: "ನನ್ನ ಬಣ್ಣ ಕಪ್ಪಾಗಿತ್ತು ಹಳ್ಳಿಯಲ್ಲಾಗಲಿ, ನಗರದಲ್ಲಾಗಲಿ ಸೌಂದರ್ಯವನ್ನು ಬಣ್ಣದಿಂದಲೇ ಅಳೆಯಲಾಗುತ್ತದೆ ತಾನೆ? ನಾನು ಹುಟ್ಟುತ್ತಿರುವಂತೆಯೇ ನನ್ನ ವಿವಾಹ ಹೇಗೆ ಆಗುತ್ತದೋ ಎನ್ನುವ ಚಿಂತೆ ನನ್ನ ಅಪ್ಪ ಅವ್ವರನ್ನು ಕಾಡುತ್ತಿತ್ತು"[೨೮] ಎಂದು ಹೇಳಿಕೊಳ್ಳುತ್ತಾರೆ. ಪುರುಷ ಕಪ್ಪು ಬಣ್ಣದಲ್ಲಿದ್ದರೂ ತಂದೆ, ತಾಯಿಗಳಿಗೆ ಹೆಚ್ಚು ಸಮಸ್ಯೆಯಾಗುವುದಿಲ್ಲ. ಆದರೆ ಮಹಿಳೆಗೆ ಲಕ್ಷಣವಂತೆಯಾಗಿರಬೇಕು, ಸುಂದರವಾಗಿರಬೇಕು ಎಂಬಂತಹ ಕೆಲವು ನಿರೀಕ್ಷೆಗಳಿವೆ. ವಿವಾಹದ ಸಂದರ್ಭದಲ್ಲಿ ಇವು ಹೆಚ್ಚು ಮುನ್ನೆಲೆಗೆ ಬರುತ್ತದೆ. ಈ ಕಾರಣಗಳಿಗಾಗಿಯೇ ಸುಶೀಲಾ ರಾಯ್ ಅವರು ಹೆಣ್ಣಾಗಿದ್ದಕ್ಕಾಗಿಯೂ, ಕಪ್ಪು ಬಣ್ಣದವರಾಗಿದ್ದಕ್ಕಾಗಿಯೂ ಅವಮಾನ ಅನುಭವಿಸುತ್ತಾರೆ. ಇಲ್ಲಿ ಬಣ್ಣ ಮತ್ತು ಲಿಂಗದೊಂದಿಗಿನ ಅಂತರ್‌ಸಂಬಂಧವು ಅವಮಾನಗಳಾಗುವುದಕ್ಕೆ

ಕಾರಣವಾಗಿದೆ. ಅವಮಾನ ಎನ್ನುವುದು ಏಕರೂಪವಾಗಿರುವುದಿಲ್ಲ ಬದಲಿಗೆ ಅದು ಹಲವು ರೂಪಗಳಲ್ಲಿರುತ್ತವೆ ಎಂಬುದನ್ನು ಈ ಪ್ರಕರಣವು ಧ್ವನಿಸುತ್ತದೆ.

**೬.೨.೫** ಪತ್ರಿಕೆ ಮತ್ತು ಅವಮಾನ: ಪುರುಷ ಪ್ರಧಾನ ವ್ಯವಸ್ಥೆಯ ಅತ್ಯಂತ ಉತ್ಕಟ ಶೋಷಣೆಯನ್ನು ಸಾರಾ ಅಬೂಬಕ್ಕರ್ ಅವರ 'ಲೇಖಲೋಕ'ದಲ್ಲಿನ ಕೆಳಗಿನ ಆತ್ಮಾಭಿವ್ಯಕ್ತಿಯಲ್ಲಿ ಗುರುತಿಸಬಹುದು. "ಅಲ್ಲಿಗೆ ನವಭಾರತ ಎಂಬ ಪತ್ರಿಕೆ ಬರುತ್ತಿತ್ತು. ಇದು ಗಂಡಸರ ಓದಿಗಾಗಿ ಮಾತ್ರ. ಮನೆಯ ಒಳಭಾಗಕ್ಕೆ ಅದನ್ನು ತರುತ್ತಿರಲಿಲ್ಲ. ಹೆಂಗಸರು ಮನೆಯ ಒಳಭಾಗದಿಂದ ಚಾವಡಿಗೆ, ಅಂದರೆ ಗಂಡಸರ ಭಾಗಕ್ಕೆ ಕಾಲಿಡುವ ಪದ್ಧತಿಯಿಲ್ಲ"[೨೮] ಎಂದು ಸಾರಾ ಅವರು ಬರೆದುಕೊಳ್ಳುತ್ತಾರೆ. ಇಲ್ಲಿ ಪತ್ರಿಕೆಯ ಓದಿಗೂ ಮಹಿಳೆಯರಿಗೆ ವಿಧಿಸಲಾದ ನಿರ್ಬಂಧವನ್ನು ಮನೆಯಲ್ಲಿರುವ ಚಾವಡಿ ಹಾಗೂ ಒಳಭಾಗಗಳ ವಿಂಗಡಣೆಯಲ್ಲಿ ಸಾರಾ ಕಾಣಿಸುತ್ತಿದ್ದಾರೆ. ಇವೆರಡೂ ಗಂಡಿನ ಸಾರ್ವಜನಿಕತೆ ಹಾಗೂ ಹೆಣ್ಣಿನ ಅಡುಗೆ ಮನೆಯ ಅಂತರಗಳನ್ನು ನಿರ್ದೇಶಿಸುತ್ತಿವೆ.

**೬.೨.೬.** ಪ್ರಶ್ನಿಸುವಿಕೆಯ ಪ್ರತಿರೋಧ: ಗಂಡನು ಏನು ಮಾಡಿದರು ಹೊಂದಿಕೊಂಡು ಹೋಗುವುದು ಹೆಂಡತಿಯ ಕರ್ತವ್ಯ ಎನ್ನುವಂತೆ ಪಂಚಾಯಿತಿ ಮಾಡಲು ಬಂದಿದ್ದ ವ್ಯವಸ್ಥೆಗೂ ಉಮಾಶ್ರೀಯವರಿಗು 'ಬೆಂಕಿ ಬೆಡಗು'ನಲ್ಲಿ ನಡೆಯುವ ಸಂವಾದ ಹೀಗಿದೆ. "ಒಂದು ದಿನ ನನ್ನ ಅಪ್ಪನ ತಮ್ಮ ತಿಮ್ಮಣ್ಣ ಮತ್ತು ಪ್ಯಾಟೆ ಮನೆ ಯಜಮಾನ್ರು ಅಂತ, ನಮ್ಮ ದೇವಾಂಗ ಜನಾಂಗದ ಹಿರಿಯರು ಬಂದು ನ್ಯಾಯ ಮಾಡಾನ ಅಂತ ಬಂದ್ರು, 'ಇನ್ನು ಮುಂದೆ ಅವನು ಹಾಂಗೆಲ್ಲಾ ಮಾಡಲ್ಲ, ಸುಧಾರಿಸಿಕೊಂಡು ಹೋಗ್ತಾನೆ. ನೀನು ಅವನ ಮನೆಗೆ ಹೋಗು ಅಂತ ಆ ಹಿರಿಯರು ಹೇಳಿದ್ರು.' ನಾನು ತಕ್ಷಣ ಹೇಳಿದೆ ಇಲ್ಲ ನಾನು ಹೋಗಲ್ಲ. ನೋಡ್ರಣ್ಣ ನೀವೆಲ್ಲಾ ಇಲ್ಲೀಯವರೆಗೆ ಬಂದು ಇಷ್ಟೆಲ್ಲಾ ಮಾತಾಡ್ತೀರಲ್ಲ, ನನಗೆ ಗೊತ್ತು ನನ್ನ ಗಂಡ ಅಂದ್ರೆ ಎಂಥವನೆಂದು. ಸರಿ ನಾನು ಹೋಗ್ತೇನೆ. ಆದರೆ ಒಂದು ಕಂಡೀಶನ್ನು, ಅವನು ಪುನಃ ನನಗೆ ತೊಂದರೆ ಕೊಟ್ಟರೆ ನೀವೆಲ್ಲಾ ಸೇರಿ ತಿಂಗಳಿಗೆ ಇಂತಿಷ್ಟು ಅಂತ ವಂತಿಗೆ ಹಾಕಿ ನನ್ನ ಸಂಸಾರವನ್ನು ನಡೆಸಿಕೊಡ್ತೇವೆ. ಅಂತ ಒಂದು ಅಗ್ರಿಮೆಂಟ್ ಮಾಡಿಕೊಡಿ, ನಾನು ಮರು ಮಾತಾಡದೆ ಹೋಗ್ತೇನೆ"[೩೦] ಎಂದು ಪ್ರತಿಕ್ರಿಯಿಸುತ್ತಾರೆ.

ವೈಚಾರಿಕ ಸಾಹಿತ್ಯದ ಓದು ಶಿಕ್ಷಣದ ಪ್ರಭಾವ ವ್ಯಕ್ತಿಗಳಲ್ಲಿ ವಿಚಾರ ಮಾಡುವ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ಇವೇ ಕಾರಣಗಳಿಂದ ಸಾರಾ ಅಬೂಬಕ್ಕರ್ ಅವರು 'ಲೇಖಲೋಕ'ದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವುದನ್ನು ಈ ಕೆಳಗಿನ ಸನ್ನಿವೇಶದಲ್ಲಿ ಗಮನಿಸಬಹುದಾಗಿದೆ. "ಇಸ್ಲಾಂ ಧರ್ಮದ ಎಲ್ಲ ನಿಯಮಗಳೂ ಸ್ತ್ರೀ ಪುರುಷರೆಲ್ಲರಿಗೂ ಏಕ ಪ್ರಕಾರವಾಗಿ ಅನ್ವಯಿಸುವಾಗ ಗಂಡಸರು ಮಾತ್ರ ಸಿನಿಮಾ ನೋಡುವುದು ಸರಿಯೇ? ನನಗಿಲ್ಲದ ಸೌಲಭ್ಯವನ್ನು ನೀವು ಬಳಸಿಕೊಳ್ಳಬಾರದು ಎಂದು ನನ್ನ ಗಂಡನೊಡನೆ ವಾದ ಮಾಡುತ್ತಿದ್ದೆ"[೩೧] ಎಂದು ಸಾರಾ

ಬರೆದುಕೊಳ್ಳುತ್ತಾರೆ. ಮೇಲಿನ ಎರಡೂ ಸನ್ನಿವೇಶಗಳು ಸಾಂಪ್ರದಾಯಿಕವಾಗಿ ಹೇರಲಾಗಿರುವ ಕೆಲವು ನಂಬಿಕೆಗಳು ಪೀಳಿಗೆಯಿಂದ ಪೀಳಿಗೆಗೆ ಚಲನಶೀಲವಾಗಿ ಬಂದಿರುವುದನ್ನು ಸೂಚಿಸುತ್ತವೆ. ಗಂಡನ ದೌರ್ಜನ್ಯಕ್ಕೆ ಒಳಗಾಗಿ ಬದುಕುವುದು ಪತ್ನಿಯ ಧರ್ಮ ಎನ್ನುವುದು ಅಂತಹ ನಂಬಿಕೆಗಳ ಭಾಗವಾಗಿದೆ. ಉಮಾಶ್ರೀ ಅವರನ್ನು ಹೀಗೆ ಕೌಟುಂಬಿಕ ಬಂಧನದಲ್ಲಿರಿಸುವ ಹಿರಿಯರ ಪ್ರಯತ್ನಕ್ಕೆ ಲೇಖಕರು ಪ್ರಶ್ನಿಸಿದ್ದು ಹಾಗೂ ಧರ್ಮದ ಹೆಸರಲ್ಲಿರುವ ಪುರುಷ ಕೇಂದ್ರಿತ ತರತಮವನ್ನು ಸಾರಾ ಅವರು ಗುರುತಿಸಿದ್ದು ಸ್ಥಾಪಿತ ನಂಬಿಕೆಗಳನ್ನು ಮುರಿದುಕಟ್ಟುವ ಪ್ರತಿರೋಧಗಳ ಸಂಕೇತವಾಗಿವೆ. ಹೀಗೆ ಕೆಲವು ಮೂಢ ಸಾಂಪ್ರದಾಯಿಕ ಚೌಕಟ್ಟುಗಳನ್ನು ತಮ್ಮ ಅನುಭವ ಮತ್ತು ವೈಚಾರಿಕ ಚಿಂತನೆಗಳ ಮೂಲಕ ಮುರಿಯುವ ಪ್ರಯತ್ನಗಳು ನಡೆದಿರುವುದನ್ನು ಮಹಿಳಾ ಆತ್ಮಕಥೆಗಳು ಕಾಣಿಸುತ್ತವೆ.

**೬.೨.೭.** ಮದುವೆ ಮತ್ತು ಪ್ರತಿರೋಧ: ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ಬಳಸುವ ಶ್ರೀಮಂತಿಕೆಯ ದರ್ಪಕ್ಕೆ ಸಮರ್ಥವಾದ ಪ್ರತ್ಯುತ್ತರ ಕೊಡುವ ಸನ್ನಿವೇಶ 'ಅನುದಿನದ ಅಂತರಗಂಗೆ'ಯಲ್ಲಿದೆ. 'ಪ್ರೀತಿಗೆ ಬರ ಬರದಿರಲಿ' ಎಂಬ ಅಧ್ಯಾಯದಲ್ಲಿ ಪ್ರತಿಭಾ ಅವರ ಗೆಳತಿ ಫರ್ಹಾನಳನ್ನು ಪ್ರೀತಿಯ ಗೆಳೆಯ ನಂಬಿಸಿ, ಗರ್ಭಿಣಿಯಾಗುವಂತೆ ಮಾಡುವ ಚಿತ್ರಣವಿದೆ. ಇದು ಫರ್ಹಾನಳ ನಂಬಿಕೆಗೆ ಮಾಡಿದ ಅವಮಾನವಾಗಿದೆ. ಹುಡುಗನ ಮನೆಗೆ ಹೋಗಿ ಮದುವೆಯಾಗುವಂತೆ ಕೇಳಿದರೆ "ಯಾವುದಾದರೂ ನರ್ಸಿಂಗ್ ಹೋಂಗೆ ಸೇರಿಸಿ ಅವಳ ಬಸಿರು ಇಳಿಸು"[೩೨] ಎಂದು ಉಚಿತ ಸಲಹೆ ನೀಡುತ್ತಾರೆ. ಇಲ್ಲಿ ಹುಡುಗನ ಮನೆಯವರಿಗಾಗಲೀ, ಹುಡುಗನಿಗಾಗಲೀ ಯಾವುದೇ ಪಾಪ ಪ್ರಜ್ಞೆ ಇಲ್ಲದೆ, ಶ್ರೀಮಂತಿಕೆಯ ಅಹಂ ಇರುವುದನ್ನು ಗುರುತಿಸಬಹುದಾಗಿದೆ. ಆದರೆ ಇದನ್ನು ಮೀರಿ ಪ್ರತಿಭಾ ಹುಡುಗನ ಮನೆಯವರಿಗೆ ಒಪ್ಪಿಸಿ ಮದುವೆ ಮಾಡಿಸುತ್ತಾರೆ. ಇಲ್ಲಿ ಎರಡು ಸಂಗತಿಗಳಿವೆ. ಮಹಿಳೆಯೇ ಮಹಿಳೆಯ ಸಂಕಟವನ್ನು ಅರ್ಥ ಮಾಡಿಕೊಳ್ಳದಿರುವುದು ಮತ್ತು ಮಹಿಳೆಯರೇ ಸೇರಿ ದೌರ್ಜನ್ಯವನ್ನು ವಿರೋಧಿಸಿ ಪ್ರತಿಭಟಿಸುವುದು. ಹೀಗೆ ಮಹಿಳಾ ಆತ್ಮಕಥೆಗಳಲ್ಲಿನ ಪ್ರತಿರೋಧಗಳು ಅವರ ವೈಯಕ್ತಿಕ ಬದುಕಿನ ಭಾಗವಷ್ಟೇ ಆಗದೆ, ಇತರೆ ಮಹಿಳೆಯರ ಪರವಾಗಿಯೂ ಪ್ರಕಟಗೊಳ್ಳುವುದನ್ನು ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

**೬.೨.೮.** ವೈಯಕ್ತಿಕ ಪ್ರತಿರೋಧ: ಶಿಕ್ಷಣ ಮತ್ತು ಸಾಹಿತ್ಯದ ಪ್ರಭಾವವು ವ್ಯಕ್ತಿಯನ್ನು ಆಲೋಚಿಸುವಂತೆ ಪ್ರೇರೇಪಿಸುತ್ತವೆ. ಇದರ ಜೊತೆಗೆ ದಮನದ ಸ್ತರದಿಂದ ಹೊರಬರುವಂತೆ ಪ್ರಚೋದಿಸುತ್ತವೆ. ಇಂತಹ ಪ್ರಭಾವಗಳಿಗೆ ಒಳಗಾದ ಸಾರಾ ಅಬೂಬಕ್ಕರ್ ಅವರು ಸಹ ವೈಚಾರಿಕ ಪ್ರತಿರೋಧ ತೋರುವುದನ್ನು 'ಚಂದ್ರಗಿರಿ ತೀರದಲ್ಲಿ' ಹೀಗೆ ಕಾಣಬಹುದಾಗಿದೆ. ಇಲ್ಲಿ ಲೇಖಕರು "ನಾನು ನಾನೇ ಆಗದೆ, ನಾನು ಏನೂ ಆಗದೆ ಬರೆ ಮಣ್ಣಿನ ಹೆಂಟೆಯಾಗಿ ಎಲ್ಲರಿಂದಲೂ ಒಳ್ಳೆಯವಳು ಎನ್ನಿಸಿಕೊಳ್ಳುವುದಕ್ಕಿಂತ, ನನಗೆ ಸರಿ ಎಂದು ತೋಚಿದ್ದನ್ನು ಹಾಗೆಯೇ ಅಂದು, ನನಗೆ ಸರಿ

ಕಂಡಂತೆ ಮಾಡಿ ಎಲ್ಲರಿಂದಲೂ ಕೆಟ್ಟವಳು ಎನ್ನಿಸಿಕೊಳ್ಳುವುದೇ ನನಗೆ ಹೆಚ್ಚು ಇಷ್ಟ”[೩೩] ಎಂದು ಬರೆದುಕೊಳ್ಳುತ್ತಾರೆ. ಸಮಾಜದ ನಿಂದನೆಗಳಿಗೆ ಹೆದರಿ ಮನೆಗೆ ಬೇಗ ಬರುವಂತೆ ತಾಕೀತು ಮಾಡಿದ ಕುಟುಂಬಸ್ಥರ ಮೇಲೆ ಸಾರಾ ಮಾಡಿದ ಪ್ರತಿಕ್ರಿಯೆ ಮೇಲಿನದಾಗಿದೆ. ಇಲ್ಲಿ ಲೇಖಕಿಯು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಸ್ವತಂತ್ರವಾಗಿ ರೂಪುಗೊಳ್ಳದ ಮಣ್ಣಿನ ಹೆಂಟೆಯಂತಹ ಬದುಕನ್ನು ನಿರಾಕರಿಸುವ ಮತ್ತು ನಿರ್ಬಂಧಗಳ ಆಚೆಗೆ ತನ್ನದೆಯಾದ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಭರವಸೆ ಇಲ್ಲಿ ವ್ಯಕ್ತವಾಗಿದೆ ಹೀಗಾಗಿ ಆತ್ಮಕಥನಾತ್ಮಕ ಬರೆಹದಲ್ಲಿನ ಲೇಖಕಿಯ ಉಲ್ಲೇಖಿತ ಸಾಲುಗಳು ಪುರುಷರಿಗೆ ಇರುವಂತೆ ತಮಗೂ ಸಹಜವಾದ ಸ್ವಾತಂತ್ರ್ಯ ಬೇಕೆಂಬ ಅಪೇಕ್ಷೆಯನ್ನು ಅಂತರ್ಗತವಾಗಿಸಿಕೊಂಡಿವೆ.

**೬.೨.೯.** ಪಿತೃ ಸಂಸ್ಕೃತಿಗೆ ಪ್ರತಿರೋಧ: ನಮ್ಮ ದೇಶದಲ್ಲಿ ವಿವಾಹ ಪೂರ್ವ ಲೈಂಗಿಕತೆಯು ಅಸಿಂಧುವಾದುದ್ದಾಗಿದೆ. ಪಿತೃ ಸಂಸ್ಕೃತಿಯು ಶಿಕ್ಷಣ ಕ್ಷೇತ್ರದಲ್ಲಾಗಲಿ, ಔದ್ಯೋಗಿಕ ಕ್ಷೇತ್ರದಲ್ಲಾಗಲಿ ಹಾಗೂ ಇನ್ನಿತರ ಕ್ಷೇತ್ರಗಳಲ್ಲಾಗಲಿ ತಂದೆಯ ಉಪಸ್ಥಿತಿ ಬಹಳ ಮುಖ್ಯವಾಗುವಂತೆ ಮಾಡಿದೆ. ಮಕ್ಕಳ ಹೆಸರಿನೊಂದಿಗೆ ತಂದೆಯ ಹೆಸರನ್ನು, ಮದುವೆಯಾದ ಹೆಣ್ಣಿಗೆ ಗಂಡನ ಹೆಸರನ್ನು ಸೇರಿಸುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಅದು ಬರುತ್ತಿದೆ. ವೈಯಕ್ತಿಕ ಮಾಹಿತಿಯ ಯಾವುದೇ ಕಾಲಂಗಳಲ್ಲಿ ವ್ಯಕ್ತಿಯ ಹೆಸರಿನ ಕೆಳಗೆ ತಂದೆಯ ಹೆಸರಿರುತ್ತದೆ. ವಿವಾಹದ ಸಂದರ್ಭದಲ್ಲಿಯೂ ತಂದೆಯ ಕುಲವೇ ಪ್ರಧಾನ ಪಾತ್ರವಹಿಸುತ್ತದೆ. ಇನ್ನೂ ಕೆಲವು ಸಂದರ್ಭಗಳಲ್ಲಿ ತಂದೆಯ ಅಪೇಕ್ಷೆಯನ್ನು ಈ ವ್ಯವಸ್ಥೆಯು ಬಯಸುತ್ತದೆ. ವಿವಾಹವೇ ಹೆಣ್ಣಿನ ಅಂತಿಮ ಗುರಿ. ಪುರುಷನ ಆಶ್ರಯವಿಲ್ಲದೆ ಮಹಿಳೆ ಇಲ್ಲ ಎನ್ನುವ ಪಾರಂಪರಿಕ ಆಲೋಚನಾ ಶಿಷ್ಟಾಚಾರವನ್ನು ಮುರಿದು ಕಟ್ಟುವ ಕೆಲಸ ಮಾಡಿ ಪುರುಷ ಪ್ರಧಾನ ವ್ಯವಸ್ಥೆಯೇ ಆಶ್ಚರ್ಯ ಪಡುವಂತಹ ಕೆಲಸವನ್ನು ಮಾಡಿದವರು ಕವಿತಾ ಲಂಕೇಶ್. ಅದನ್ನು ‘ಒಂಟಿ ಪಾಲಕಿಯ ಸ್ವಗತ’ ಆತ್ಮಕಥನಾತ್ಮಕ ಬರೆಹದಲ್ಲಿ ಹೀಗೆ ದಾಖಲಿಸುತ್ತಾರೆ: “ತಾನು ಮದುವೆ, ಗಂಡ ಇಲ್ಲದೆ ಮಗುವನ್ನು ಹೇರುವ ಬಯಕೆಯನ್ನು ತನ್ನ ತಾಯಿ ಮತ್ತು ಅಕ್ಕನಲ್ಲಿ ತಿಳಿಸಿದಾಗ ಅವರೂ ಈ ವಿಚಾರದಲ್ಲಿ ಸ್ವತಂತ್ರರಾಗಿ ಧೈರ್ಯವಂತರಾಗಿ ಪ್ರೋತ್ಸಾಹವನ್ನೀಯುತ್ತಾರೆ. ನಿನಗೆ ಮಗು ತಾನೇ ಬೇಕು, ಮಾಡಿಕೋ”[೩೪] ಹಿರಿಯ ನಟಿಯೊಬ್ಬರು “ಸಿಂಗಲ್ ಪೇರೆಂಟ್ ಅಂದರೆ ಏನರ್ಥ? ಇದು ಟೆಸ್ಟ್ ಟ್ಯೂಬ್ ಮಗೂನಾ? ಎಂದು ಪ್ರಶ್ನಿಸಿದ್ದಕ್ಕೆ ಕವಿತಾ ಲಂಕೇಶ್ ಅಷ್ಟೇ ಧೈರ್ಯ ಹಾಗೂ ನಿರ್ಭಿಡೆಯಿಂದ ಉತ್ತರಿಸುತ್ತಾರೆ. “ಹಾಗೇನಿಲ್ಲ. ಮದುವೆ, ಗಂಡ ಯಾವುದೂ ಬೇಡ. ಆದರೆ ಮಗು ಬೇಕು ಎಂದು ತಾಯಿ ಆಗಿದ್ದೇನೆ. ಈ ಮಗುವಿನ ಎಲ್ಲಾ ಜವಾಬ್ದಾರಿಯನ್ನು ನಾನೇ ಹೊತ್ತು ಇದನ್ನು ನಾನು ಏಕಾಂಗಿಯಾಗಿ ಬೆಳೆಸುತ್ತೇನೆ”[೩೫] ಎಂದು ಬರೆದುಕೊಳ್ಳುತ್ತಾರೆ. ಲೇಖಕಿಯ ಆತ್ಮಕಥನಾತ್ಮಕ ಬರಹ ‘ಒಂಟಿಪಾಲಕಿಯ ಸ್ವಗತ’ವು ಸಾಂಪ್ರದಾಯಿಕ ನಂಬಿಕೆಗಳನ್ನು ಹೊಸ ಬಗೆಯಲ್ಲಿ ವ್ಯಾಖ್ಯಾನಿಸುವ

ಪ್ರತಿರೋಧದಂತೆ ರೂಪಗೊಂಡಿದೆ. ಹೆಣ್ಣಿಗೆ ಬಾಲ್ಯದಲ್ಲಿ ತಂದೆಯ, ಯವ್ವನದಲ್ಲಿ ಗಂಡನ, ಮುಪ್ಪಿನಲ್ಲಿ ಮಕ್ಕಳ ಆಶ್ರಯ ಬೇಕೇ ಬೇಕು ಎಂಬ ಮನುವಿನ ಸಿದ್ಧ ಸೂತ್ರವನ್ನು ಹಾಗೂ ವೈವಾಹಿಕ ಪ್ರಕ್ರಿಯೆಯ ಮೂಲಕವೇ ಮಕ್ಕಳನ್ನು ಹೇರಬೇಕು ಎಂಬ ಸಂಪ್ರದಾಯಗಳನ್ನು ದಾಟುವ ಕೆಲಸವನ್ನು ಕವಿತಾ ಲಂಕೇಶ್‌ರವರು ಮಾಡಿದ್ದಾರೆ. ಇದು ಪ್ರತಿರೋಧದ ಆತ್ಯಂತಿಕ ಸ್ವರೂಪಕ್ಕೆ ಉದಾಹರಣೆಯಾಗಿದೆ. ಈ ಪ್ರತಿರೋಧವನ್ನು ಯಾವ ಹಿಂಜರಿಕೆ ಇಲ್ಲದೆ ಅತ್ಯಂತ ಸಮರ್ಥನೀಯ ಮತ್ತು ಸಹಜವಾದ ಧಾಟಿಯಲ್ಲಿ ಲೇಖಕರು ಅಭಿವ್ಯಕ್ತಿಸುತ್ತಾರೆ. ಹೀಗೆ ಹೆಣ್ಣನ್ನು ಶೋಷಿಸುವ ಪಿತೃ ಸಂಸ್ಕೃತಿಯನ್ನು ಮೀರಿ ವಿವಾಹವಾಗದೇ, ಗಂಡನಿಲ್ಲದೆ ಮಗು ಪಡೆದಿದ್ದು ಕವಿತಾ ಅವರ ಪ್ರತಿರೋಧವಾಗಿರುವುದನ್ನು ಆತ್ಮಕಥನಾತ್ಮಕ ಬರಹ ಪ್ರಕಟಪಡಿಸುತ್ತದೆ,

**೬.೨.೧೦.** ಕೋಪ ಮತ್ತು ಪ್ರತಿರೋಧ: ತಲೆತಲಾಂತರದಿಂದ ಮಹಿಳೆಯರನ್ನು ತಾಳ್ಮೆ, ಸಹನೆಯ ಪ್ರತಿರೂಪಗಳೆಂದು ಬಿಂಬಿಸುತ್ತ, ಆಕೆಯಲ್ಲು ತರತಮದ ಕುರಿತು ಇರಬಹುದಾದ ಕೋಪ, ಅಸಹನೆಯನ್ನು ಹತ್ತಿಕ್ಕಲಾಗಿತ್ತು. ಶಿಕ್ಷಣ, ವೈಚಾರಿಕ ಆಲೋಚನೆಗಳು ಮಹಿಳೆಯರಿಗೆ ಇಂತಹ ಇಕ್ಕಟ್ಟುಗಳನ್ನು ಕುರಿತು ಜಾಗೃತಿ ಮೂಡಿಸಿದವು. ಹೇಳುತೇನೆ ಕೇಳು' ಕೃತಿಯಲ್ಲಿನ ಆದ್ರೆ ಲೋರ್ದ್ ಅವರ 'ಹೆಣ್ಣಿಗೆ ಕೋಪ ಒಳ್ಳೆಯದು' ಎಂಬ ಆತ್ಮಕಥನಾತ್ಮಕ ಬರೆಹದಲ್ಲಿನ ಕೆಳಗಿನ ಸಾಲುಗಳು ಇಂತಹ ಜಾಗೃತಿಗೆ ಉದಾಹರಣೆಯಾಗಿದೆ. "ಜೀವವಿರೋಧಿ ಶಕ್ತಿಗಳೆದುರು ಮುಖಾಮುಖಿಯಾಗಲು ನನ್ನ ಕೋಪ ಸಹಾಯ ಮಾಡುತ್ತದೆ. ಬದುಕುವ ಹಕ್ಕು, ಆಯ್ಕೆಯ ಹಕ್ಕು, ಹೆಣ್ಣಿನ ಹಕ್ಕು, ಮಾನವ ಹಕ್ಕುಗಳ ಪರವಾಗಿ ನಿಲ್ಲಲು ಶಕ್ತಿಯನ್ನು ನೀಡುತ್ತದೆ"[೩೬] ಎಂದು ಲೇಖಕಿ ಬರೆದುಕೊಳ್ಳುತ್ತಾರೆ. ಮೇಲ್ಕಂಡ ಸನ್ನಿವೇಶದಲ್ಲಿ ಲೇಖಕಿಯು ಬಳಸಿರುವ ಕೋಪ ಪದವು ಅಮಾನವೀಯವಾದದ್ದಲ್ಲ, ಅದು ಮಾನವ ಹಕ್ಕುಗಳನ್ನು ಪಡೆದೇ ತೀರುವ ಪ್ರತಿರೋಧದ ರೂಪಕವಾಗಿದೆ. ಹೆಣ್ಣಿನ ಹಕ್ಕುಗಳನ್ನು ಹತ್ತಿಕ್ಕುವ ಜೀವವಿರೋಧಿ ಸಂಗತಿಗಳಿಂದ ಹೊರಬರಲು ಕೋಪ ಅಗತ್ಯವು, ಅನಿವಾರ್ಯವು ಆಗಿರುವುದು ಲೇಖಕಿಯ ಬರೆಹದಲ್ಲಿ ಕಾಣಿಸುತ್ತದೆ. ಇಂತಹ ಕೋಪವನ್ನು ನಾವು 'ಬೆಂಕಿ ಬೆಡಗು'ವಿನ ಉಮಾಶ್ರೀಯವರಲ್ಲೂ, ದು.ಸರಸ್ವತಿಯವರ 'ಈಗೇನ್ ಮಾಡಿರಿ' ಆತ್ಮಕಥೆಗಳಲ್ಲೂ ಕಾಣಬಹುದಾಗಿದೆ. ತಮ್ಮನ್ನು ಹತ್ತಿಕ್ಕುವ ಪುರುಷ ಪ್ರಧಾನ ಮನಸ್ಥಿತಿಯ ವಿರುದ್ಧದ ಲೇಖಕಿಯರ ಕೋಪ ತಮ್ಮನ್ನಷ್ಟೇ ಅಲ್ಲದೇ, ಇತರ ದಮನಿತರಲ್ಲೂ ಜಾಗೃತಿ ಉಂಟಾಗುವಂತೆ ಮಾಡಿರುವುದು 'ಹೆಣ್ಣಿಗೆ ಕೋಪ ಒಳ್ಳೆಯದು' ಎಂಬ ಲೇಖಕಿಯ ಸಾಲನ್ನು ಸಮರ್ಥಿಸುತ್ತದೆ.

### ೬.೩. ತೃತೀಯ ಲಿಂಗಿಗಳಿಗೆ ಲಿಂಗದ ಕಾರಣಕ್ಕೆ ಆಗುವಂತಹ ಅವಮಾನ ಮತ್ತು ಪ್ರತಿರೋಧ

ತೃತೀಯ ಲಿಂಗಿಗಳೆಂಬುದು ಒಂದು ಬಗೆಯ ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯವಾಗಿದೆ. ಗಂಡು ಹೆಣ್ಣಾಗುವ ಪರಿ ಮತ್ತು ಅದಕ್ಕೆ ಈ ಸಮಾಜವು ಪ್ರತಿಕ್ರಿಯಿಸುವ ಬಗೆಯು ಆತ್ಮಕಥೆಗಳಲ್ಲಿ ನೋವಿನಿಂದ ಚಿತ್ರಿತಗೊಂಡಿವೆ. ಸದ್ಯದ ಮಟ್ಟಿಗೆ ಕನ್ನಡದಲ್ಲಿ ಯಾವ ತೃತೀಯ ಲಿಂಗಿಯೂ

ಆತ್ಮಕಥೆ ಬರೆದುಕೊಂಡಿರುವುದು ಕಂಡುಬಂದಿಲ್ಲ. ತೃತೀಯ ಲಿಂಗಿಗಳು ಇತರೆ ಭಾಷೆಗಳಲ್ಲಿ ಬರೆದಿರುವ ಆತ್ಮಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದು, ಇವು ಕನ್ನಡದಲ್ಲಿ ಆತ್ಮಕಥೆಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆಯಿರುವುದರಿಂದ ಪ್ರಸ್ತುತ ಅಧ್ಯಾಯದಲ್ಲಿ ಪೂರಕ ಆಕರಗಳನ್ನಾಗಿ ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ. ದೇಹದಲ್ಲಿನ ಹಾರ್ಮೋನ್ಸ್‌ಗಳ ಬದಲಾವಣೆಯಿಂದ ಹೆಣ್ಣಾಗುವಾಗ ಅನೇಕ ಅವಮಾನಗಳನ್ನು, ನೋವುಗಳನ್ನು ಕೌಟುಂಬಿಕವಾಗಿ ಹಾಗೂ ಸಮಾಜದಿಂದಲೂ ಅನುಭವಿಸಬೇಕಾಗುತ್ತದೆ. ಈ ಅವಮಾನ ತೃತೀಯ ಲಿಂಗಿಗಳಿಗೆ ಮಾತ್ರ ಆಗುವಂತಹದ್ದಲ್ಲ, ಇಡೀ ಕುಟುಂಬಕ್ಕೆ ಆಗುವಂತಹದ್ದು. ಹೀಗಾಗಿ ಇವರಿಗೆ ಅವಮಾನ ಮನೆಯಿಂದಲೇ ಆರಂಭವಾಗುತ್ತದೆ. ಹೀಗೆ ಬದಲಾದ ಮಂಗಳಮುಖಿಯರಿಗೆ ಸಮಾಜದಲ್ಲಿ ಸೂಕ್ತವಾದ ಭದ್ರತೆ ಇರುವುದಿಲ್ಲ. ಗೌರವದ ಬದುಕಿಗೆ ಅವಕಾಶಗಳಿಲ್ಲದಂತಾಗಿದೆ. ಅವರನ್ನು ಕೆಲವೊಂದು ವಿಶೇಷ ಸಂದರ್ಭಗಳನ್ನು ಬಿಟ್ಟು ಉಳಿದ ಸಮಯದಲ್ಲಿ ಅಸ್ಪೃಶ್ಯರಂತೆ ಕಾಣಲಾಗುತ್ತದೆ. ಈ ಕಾರಣಗಳಿಗೆ ಹಲವಾರು ಅವಮಾನಗಳನ್ನು ಅನುಭವಿಸಿರುವುದು 'ನಾನು ಅವನಲ್ಲ ಅವಳು', 'ಬದುಕು ಬಯಲು' ಇನ್ನೂ ಮುಂತಾದ ಆತ್ಮಕಥೆಗಳಲ್ಲಿ ಕಾಣುತ್ತೇವೆ.

**೬.೩.೧.** ತೃತೀಯ ಲಿಂಗಿ ಎಂಬುವುದೇ ಅವಮಾನ: ಇತರೆ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ತೃತೀಯ ಲಿಂಗಿಯಾಗುವುದೇ ಒಂದು ಅವಮಾನಕರ ಸಂಗತಿಯಾಗಿದೆ. ಈ ಕುರಿತು 'ಬದುಕು ಬಯಲು' ಆತ್ಮಕಥೆಯಲ್ಲಿ ಬರುವ ಎರಡು ಉಲ್ಲೇಖಗಳು ಹೀಗಿವೆ.

**ಅ.** "ಹುಡುಗರು ಆಟ ಆಡುತ್ತಿರಲಿಲ್ಲವೆಂಬ ಕಾರಣಕ್ಕೆ ಪಿ.ಟಿ. ಮೇಷ್ಟ್ರು ಸಹ ಶಿಕ್ಷೆ ನೀಡಿದ್ದರು. ನನ್ನ ಕಿವಿ ಹಿಂಡಿ "ನೀನು ಹುಡುಗೀನಾ? ಚಡ್ಡಿ ತೆಗಿ ನೋಡುತ್ತೇನೆ" ಎಂದು ಬೈಯುತ್ತಿದ್ದರು"[೩೭]

**ಆ.** "ಸ್ಟೇಷನ್‌ನೆಲ್ಲ ಒರ್‍ಸಿ, ಗುಡ್ಸೋಕೆ ಹೇಳಿದ್ರು. ಎಲ್ಲಾ ಮಾಡಿದೆ. ಸೆಲ್ ಒಳಗಡೆ ಹಾಕಬೇಡಿ ಅಂತ ಚೀರಾಡಿದೆ. ಅವನ ಕಾಲಿಗೆ ಬಿದ್ದೆ. ಬೂಟುಗಾಲಲ್ಲಿ ಒದ್ದ. ಅಲ್ಲೇ ಆ ಕ್ಷಣ ಬಟ್ಟೆ ಬಿಚ್ಚು ಅಂದ. ನಗ್ನವಾಗಿ ನಿಂತಿದ್ದಾಗ ಆಪರೇಷನ್ ಆದ ಕಡೆ ಲಾಠಿ ಇಟ್ಟು ಹೆಂಗಸಿನ ತರ ಕಾಲು ಅಗಲಿಸಿ ನಿಂತ್ಕೋ ಅಂತ ಒತ್ತಾಯಿಸಿದ. ಮತ್ತೆ ಮತ್ತೆ ಲಾಠಿ ಇಟ್ಟು, "ಒಳಗೆ ಹೋಗುತ್ತಾ? ಅಥವಾ ಒಳಗೆ ಹೋಗೋಕೆ ಆಗದೇ ಇರೋ ಪ್ರದೇಶಾನಾ? ಸೆಕ್ಸ್ ಹೆಂಗೆ ಮಾಡ್ತೀಯಾ ನೀನು"?[೩೮] ಎಂಬ ನಿಂದನೆಗಳನ್ನು ಲೇಖಕರು ಬರೆದುಕೊಳ್ಳುತ್ತಾರೆ. ಮೇಲಿನ ಎರಡೂ ಸನ್ನಿವೇಶಗಳಲ್ಲಿ ಬೇಲಿಯೇ ಹೊಲವನ್ನು ಮೇಯ್ದಂತಿದೆ. ಒಂದು ಕಡೆ ಮೇಷ್ಟ್ರು ತನ್ನ ಸ್ಥಾನದ ಘನತೆ ಉಳಿಸಿಕೊಳ್ಳದೆ ಎಲ್ಲಾ ವಿದ್ಯಾರ್ಥಿಗಳ ಮುಂದೆ ಚಡ್ಡಿ ಬಿಚ್ಚುವಂತೆ ಹೇಳುವುದು. ಮತ್ತೊಂದೆಡೆ ಆರಕ್ಷಕನೇ ಶೋಷಕನಾಗಿ ಅತ್ಯಂತ ಅಮಾನವೀಯವಾಗಿ ಶೋಷಣೆ ಮಾಡುವುದು. ಈ ಎರಡೂ ಘಟನೆಗಳು ತೃತೀಯ ಲಿಂಗಿಗಳ ಅಪಮಾನಿತ ಬದುಕನ್ನು ವೇದನೆ ತುಂಬಿದ ಧ್ವನಿಯಲ್ಲಿ ಚಿತ್ರಿಸುತ್ತವೆ.

೬.೩.೨. ನ್ಯಾಯವಾಗಿ ಬದುಕುವ ಹೋರಾಟಕ್ಕೂ ಅವಮಾನ: ಇಲ್ಲಿ ತೃತೀಯ ಲಿಂಗಿಗಳು ನ್ಯಾಯವಲ್ಲದ ಮಾರ್ಗದಲ್ಲಿ ಹಣ ಸಂಪಾದನೆ ಮಾಡುತ್ತಾರೆಂಬ ಅಪವಾದಗಳಿಗೆ ವಿದ್ಯಾ ಅವರು ಬೇಸತ್ತಿರುತ್ತಾರೆ. ಶಿಕ್ಷಣವು ಅಪೂರ್ಣವಾದ ಕಾರಣ ತೃತೀಯ ಲಿಂಗಿಗಳಿಗೆ ಬೇರೆ ಕೆಲಸಗಳು ಸಿಗದೆ ನ್ಯಾಯವಾದ ಮಾರ್ಗದಲ್ಲಿ ದುಡಿಮೆ ಮಾಡುವ ನಿರ್ಧಾರ ತೆಗೆದುಕೊಳ್ಳುತ್ತಾರೆ. ಇದಕ್ಕಾಗಿ ರೈಲಿನಲ್ಲಿ ಗೃಹ ಉಪಯೋಗಿ ವಸ್ತುಗಳನ್ನು ಮಾರಲು ಹೋದಾಗ 'ನಾನು ಅವನಲ್ಲ ಅವಳು'ದಲ್ಲಿ ವಿದ್ಯಾ ಅವರ ವಸ್ತುಗಳನ್ನು ಯಾರು ಕೊಳ್ಳುವುದಿಲ್ಲ. ಇದರ ಜೊತೆಗೆ ರೈಲಿನ ಪ್ರಯಾಣಕರ ಬಳಿ ಭಿಕ್ಷೆ ಎತ್ತುವ ಸಂದರ್ಭದಲ್ಲಿ ದಂಪತಿಗಳಿಬ್ಬರು "ದುಡಿದು ತಿನ್ನುವುದನ್ನು ಬಿಟ್ಟು ಭಿಕ್ಷೆ ಬೇಡುತ್ತಾರೆ ಸಾಯೋದ್ ಬಿಟ್ಟು"[೩೯] ಎಂದು ಮೂದಲಿಸಿದಾಗ, ರೇವತಿಯವರು ನನ್ನನ್ಯಾಕೆ ಸಾಯಿ ಅಂತಿಯಾ ನಿನ್ನ ಗಂಡ ಐದೊ, ಹತ್ತೊ ರೂಪಾಯಿ ಕೊಟ್ರೆ ಏನಾಗುತ್ತೆ ಎಂದು ಕೇಳುತ್ತಾರೆ. ಆಗ ದಂಪತಿಗಳು ಅವರ ಹತ್ತಿರ ಏನ್ ಮಾತು, ಅವರೆಲ್ಲ ಅನ್‌ಎಜುಕೇಟೆಡ್ ಎನ್ನುತ್ತಾರೆ. ಆಗ ವಿದ್ಯಾರವರು "ಹೆಲೋ ಮಿಸ್ಟರ್, ಐ ಯಮ್ ಎಜುಕೇಟೆಡ್. ಡು ಯು ಹ್ಯಾವ್ ಗೀವನ್ ಮಿ ಯೇ ಜಾಬ್"[೪೦] ಎಂಬ ಪ್ರಶ್ನೆಯನ್ನು ಕೇಳುತ್ತಾರೆ. ಇಲ್ಲಿನ ದಂಪತಿಗಳಿಬ್ಬರ ಮಾತು ತೃತೀಯ ಲಿಂಗಿಗಳ ಬಗೆಗಿನ ಅಸಹಿಷ್ಣುತೆಯ ಫಲವಾಗಿದ್ದರೆ, ವಿದ್ಯಾ ಎತ್ತುತ್ತಿರುವ ಪ್ರಶ್ನೆಯು ಅಕ್ಷರಸ್ಥರಾದರೂ ತಮ್ಮನ್ನು ಪರಿಗಣನೆಗೆ ತೆಗೆದುಕೊಳ್ಳದ ಈ ಅವ್ಯವಸ್ಥೆಗೆ ಕೇಳುವಂತಿದೆ. ತೃತೀಯ ಲಿಂಗಿಗಳಿಗೆ ಯಾವ ಬಗೆಯ ಮೂಲಭೂತ ಅಂಗೀಕಾರ ಮತ್ತು ಸಹಾಯವನ್ನು ಮಾಡದಿರುವ ಈ ಅವ್ಯವಸ್ಥೆ, ನ್ಯಾಯಯುತವಾಗಿ ಬದುಕುವ ಅವಕಾಶವನ್ನು ಕೊಡದೆ, ಬದುಕಲು ಬಿಡದೆ ಅವಮಾನಿಸುವ ಸಂಗತಿಗಳು ಪ್ರಕಟಗೊಂಡಿರುವುದಕ್ಕೆ ಮೇಲಿನ ಘಟನೆಯೇ ಸಾಕ್ಷಿಯಾಗಿದೆ. ಇದುವರೆಗೂ ಬರೆಯಲ್ಪಟ್ಟಿರುವ ತೃತೀಯ ಲಿಂಗಿಗಳ ಆತ್ಮಕಥೆಗಳಲ್ಲಿ ಆತ್ಮಕಥನಕಾರರ ಬದುಕು ಆರ್ಥಿಕವಾಗಿ ದುರ್ಬಲರಿರುವವರದ್ದೇ ಆಗಿದೆ. ಆದರೆ ಆರ್ಥಿಕವಾಗಿ ಸಬಲರಿದ್ದರೂ ತೃತೀಯ ಲಿಂಗಿಗಳಿಗೆ ಲಿಂಗದ ಕಾರಣಕ್ಕೆ ಅವಮಾನಗಳಾಗುತ್ತವೆ. ಹೀಗೆ ತೃತೀಯ ಲಿಂಗಿಗಳು ಅನುಭವಿಸುತ್ತಿರುವ ಮತ್ತು ಬದುಕು ಕಟ್ಟಿಕೊಳ್ಳಲು ಇರುವ ತೊಡಕುಗಳನ್ನು ಆತ್ಮಕಥೆಗಳು ಅಸಹಾಯಕತೆಯಲ್ಲಿ ಅಭಿವ್ಯಕ್ತಿಸುತ್ತವೆ.

೬.೩.೩. ಪ್ರಜ್ಞೆ ಮತ್ತು ಪ್ರತಿರೋಧ: ತೃತೀಯ ಲಿಂಗಿಗಳದು ಕೇವಲ ಅಪಮಾನಿತ ಬದುಕಷ್ಟೇ ಆಗದೆ ಆಗಾಗ ಅಪಮಾನಗಳನ್ನು ಮೀರುವ, ಪ್ರತಿರೋಧಗಳು ಕೂಡ ಪ್ರಜ್ಞೆಯ ಭಾಗವಾಗಿ ವ್ಯಕ್ತವಾಗುವ ಸಂಗತಿಯನ್ನು 'ಬದುಕು ಬಯಲು' ಆತ್ಮಕಥೆಯ ಮುಂದಿನ ಸನ್ನಿವೇಶದಲ್ಲಿ ಕಾಣಬಹುದಾಗಿದೆ. "ಆಟೋರಿಕ್ಷ ಡ್ರೈವರ್‌ಗಳು ನನ್ನ ಬಗ್ಗೆ ಮಾತಾಡಿಕೊಳ್ಳೋದು ಕೇಳಿಸಿತು. ಒಂದು ಗುಂಪು ನಾನು ಗಂಡಸೇ ಎಂದು ಹೇಳಿದರೆ, ಮತ್ತೊಂದು ಗುಂಪು ಹೆಂಗಸೆಂದು ಹೇಳಿತು. ಮೊದಲನೇ ಗುಂಪಿನ ಗಂಡಸೊಬ್ಬ ಹೆಂಗಸರು ಅಷ್ಟು ದೊಡ್ಡ ಆಳಾಗಿರೋಕೆ ಸಾಧ್ಯವಿಲ್ಲ. ಎಂದು ಏನೇನೋ ಮಾತಾಡುತ್ತಿದ್ದರು. ಈ ಸಲ ಸುಮ್ನೆ ಬಿಟ್ರೆ ಮುಂದೆ ನನ್ನ ನೋಡಿದಾಗಲೆಲ್ಲ

ಮಾತಾಡ್ತಾರೆ ಎನಿಸಿತು. ರಸ್ತೆ ಮಧ್ಯೆ ಹೋಗಿ ನಿಂತು ಕೂಗಿದೆ. ಏನ್ರೋ! ಯಾರು ಸಣ್ಣ, ಯಾರು ದಪ್ಪ, ಯಾರು ಗಂಡಸು, ಯಾರು ಹೆಂಗಸು ಅಂತ ಬೆಟ್ ಕಟ್ತೀರಾ? ಕೇಳಿಸ್ಕೋಳಿ. ನಾನು ಪೊಟ್ಟೈ! ಗಂಡಸಾಗಿದ್ದು ಹೆಂಗಸಾಗಿ ಬದಲಾಗಿದೀನಿ. ನಿಮ್ಮ ಮನೇಲಿ ನನ್ನ ತರಹದವರಿದ್ರೆ ಅವರ ಮೇಲೂ ಹೀಗೇ ಬೆಟ್ ಕಟ್ತೀರಾ?"[೪೦] ಎಂದು ರೇವತಿಯವರು ಪ್ರಶ್ನಿಸುತ್ತಾರೆ. ಪ್ರಸ್ತುತ ಸನ್ನಿವೇಶವು ಇಡೀ ವ್ಯವಸ್ಥೆಯೇ ಕ್ರೂರವಾದಾಗ ಮುಗ್ಧ ಬದುಕೊಂದು ಕಠಿಣವಾಗಿ ಪ್ರತಿಕ್ರಿಯಿಸುವುದಕ್ಕೆ ಸಾಕ್ಷಿಯಾಗಿದೆ. ಇಲ್ಲಿ ಅವಮಾನವನ್ನು ತಾಳಲಾಗದ ಬದುಕ್ಕೊಂದು ಕೊನೆಗೆ ಅವಮಾನಿಸುವವರು ಆತ್ಮವಿಮರ್ಶೆ ಮಾಡಿಕೊಳ್ಳುವಂತೆ ಮಾತನಾಡುವುದು ಪ್ರತಿರೋಧವಾಗಿದೆ. ನಿಮ್ಮ ಮನೆಯಲ್ಲಿ ನನ್ನ ತರಹದವರಿಗೆ ಹೀಗೆ 'ಬೆಟ್ ಕಟ್ತಿರಾ' ಹಾಗೂ 'ನಾನು ಪೊಟ್ಟೆ' ಎನ್ನುವ ರೇವತಿಯವರ ಆಕ್ರೋಶದ ಮಾತುಗಳು; ತೃತೀಯ ಲಿಂಗಿಗಳು ತಮ್ಮ ದಯಾನೀಯ ಸ್ಥಿತಿಯನ್ನು ಒಪ್ಪಿಕೊಂಡು, ಅದನ್ನೇ ಸ್ವಾಭಿಮಾನದ ಸಂಕೇತವಾಗಿಸಿ ಪ್ರತಿರೋಧಿಸುವ ಆತ್ಮವಿಶ್ವಾಸ ಪಡೆದಿರುವುದನ್ನು ಕಾಣಿಸುತ್ತವೆ.

**೬.೩.೪.** ದೈಹಿಕ ಚಹರೆಗಳ ಮೂಲಕ ಪ್ರತಿರೋಧ: ಅಸಹಾಯಕವಾದ ಜೀವಿಗಳು ಹೇಗೆ ತಮ್ಮ ಪ್ರಾಣ ರಕ್ಷಣೆಗೆ ಕೆಲವು ಉಪಾಯಗಳನ್ನು ಹುಡುಕುತ್ತವೆಯೋ ಹಾಗೆಯೇ ತೃತೀಯ ಲಿಂಗಿಗಳು ಸಹ ತಮ್ಮ ಬದುಕನ್ನು ನಡೆಸಲು ಇರುವಂತಹ ಎಲ್ಲಾ ಅವಕಾಶಗಳು ಗೌಣವಾದ ಕಾರಣ 'ಭಿನ್ನ' ಲಕ್ಷಣಗಳನ್ನು ವ್ಯಕ್ತಪಡಿಸುವುದರ ಮೂಲಕ ಪ್ರತಿರೋಧ ತೋರುವರು. ಅವರು ಜೋರಾಗಿ ತಟ್ಟುವ ಚಪ್ಪಾಳೆಯಾಗಿರಬಹುದು, ಮೈ, ಕೈ ಮುಟ್ಟಿ ಮಾತಾಡಿಸುವುದು. ಇವೆಲ್ಲ ಕೇವಲ ಆಂಗಿಕತೆಯಷ್ಟೇ ಆಗದೆ ಈ ಮೂಲಕವಾದರೂ ಅವಮಾನಿಸುವ ಸಮಾಜಕ್ಕೆ ತೋರುವ ಪ್ರತಿರೋಧವಾಗಿದೆ. ಜೊತೆಗೆ ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುವುದರ ತಂತ್ರವು ಆಗಿರುವುದನ್ನು ತೃತೀಯ ಲಿಂಗಿಗಳ ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

## ೬.೪. ಅಭಿವ್ಯಕ್ತಿ ಸ್ವರೂಪ

ಯಾವುದೇ ಅಭಿಪ್ರಾಯ, ಪರಿಕಲ್ಪನೆ, ವಿಚಾರಗಳು ಲಿಖಿತವಾಗಿ ಅಥವಾ ಮೌಖಿಕವಾಗಿ ಅಭಿವ್ಯಕ್ತಿಗೊಂಡರೆ ಅದು ಸಾಹಿತ್ಯ ಪ್ರಕಾರವಾಗುವುದು. ಇದಕ್ಕೆ ಆತ್ಮಕಥೆಯೂ ಹೊರತಾಗಿಲ್ಲ. ಅನುಭವಗಳು ಭಿನ್ನವಾದಂತೆ ಆತ್ಮಕಥೆಗಳ ಅಭಿವ್ಯಕ್ತಿಯು ಭಿನ್ನವಾಗಿರುತ್ತದೆ.

**೬.೪.೧.** ಅಭಿವ್ಯಕ್ತಿಯಲ್ಲಿನ ಬಿಕ್ಕಟ್ಟುಗಳು: ಲೇಖಕ ಮತ್ತು ಲೇಖಕಿಯರ ಆತ್ಮಕಥೆಗಳ ಅಭಿವ್ಯಕ್ತಿಯ ನಡುವೆ ಹಲವು ವ್ಯತ್ಯಾಸಗಳಿವೆ. ಇದಕ್ಕೆ ಸಾಹಿತ್ಯ ಪ್ರಕಾರದ ವಿಶಿಷ್ಟತೆಯೂ ಕಾರಣವಾಗಿದೆ. ವೈಯಕ್ತಿಕ ಭಾವನೆಗಳು ಮತ್ತು ಸಾರ್ವಜನಿಕ ಜೀವನದ ವಿವರಗಳು ಆತ್ಮಕಥೆಗಳಲ್ಲಿ ಪ್ರಕಟವಾಗುವುದು ಲೇಖಕಿಯರಿಗೆ ಕೆಲವೊಂದು ಸಮಸ್ಯೆಗಳನ್ನು ತಂದೊಡ್ಡಬಹುದಾದ ಸಾಧ್ಯತೆಗಳಿರುತ್ತವೆ. ಈ ಕಾರಣಕ್ಕಾಗಿ ಲೇಖಕರಿಗಿಂತ ಲೇಖಕಿಯರ ಆತ್ಮಕಥೆಗಳು ಕಡಿಮೆ ಪ್ರಮಾಣದಲ್ಲಿ ರಚನೆಯಾಗಿವೆ. 'ಲೇಖ-ಲೋಕ'(ಭಾಗ-೨)ದಲ್ಲಿ ನೀಳಾದೇವಿ ಅವರ ಈ ಮುಂದಿನ ಮಾತು ಗಮನಾರ್ಹವೆನಿಸುತ್ತದೆ.

“ನನ್ನ ಬರವಣಿಗೆಯಲ್ಲಿ ನನಗೆ ಸಂಪೂರ್ಣ ತೃಪ್ತಿ ಇದೆ ಎನ್ನುವಂತಿಲ್ಲ. ಏಕೆಂದರೆ ಮುಕ್ತವಾಗಿ ಹೇಳಬೇಕಾದ್ದನ್ನು ಹೇಳಲಾಗುವುದಿಲ್ಲ. ಬೆಳೆದ ಕಟ್ಟುನಿಟ್ಟಿನ ವಾತಾವರಣ, ನಮ್ಮ ಪೀಳಿಗೆಯವರನ್ನು ಹೆಚ್ಚು ಬಂಧಿಸುತ್ತದೆ”[೪೨] ಲೇಖಕರಿಗಿಂತ ಸಮಾಜ, ಸಂಪ್ರದಾಯ, ಸಂಸ್ಕೃತಿಗಳಡಿಯಲ್ಲಿ ಬದುಕುವ ಮಹಿಳೆಯರಿಗೆ ತಮ್ಮ ಬದುಕಿನ ಸಂದರ್ಭದಲ್ಲಿ ಅಭಿವ್ಯಕ್ತಿಯ ಸಮಸ್ಯೆ ತಂದೊಡ್ಡುವ ಆತಂಕಗಳೇ ಹೆಚ್ಚು. ಈ ಆತಂಕಗಳ ಭಯದಲ್ಲೇ ಲೇಖಕಿಯರು ಆತ್ಮಕಥೆ ಬರೆಯುವ ಪ್ರಯತ್ನ ಮಾಡಿದ್ದಾರೆ. ಭಯವಿಲ್ಲದೆಯೂ ಅಲ್ಪಮಟ್ಟಿಗೆ ದಿಟ್ಟವಾಗಿ ಬರೆದ ಮಹಿಳಾ ಆತ್ಮಕಥೆಗಳು ಕನ್ನಡದಲ್ಲಿವೆ. ಕಾದಂಬರಿ, ಕಥೆ, ಕಾವ್ಯ ಸಾಹಿತ್ಯ ಪ್ರಕಾರಗಳೆಲ್ಲ ಕಲ್ಪನಾಧಾರಿತ ಅಭಿವ್ಯಕ್ತಿ ಪ್ರಕಾರಗಳು. ಇಲ್ಲಿ ಕೆಲವೊಮ್ಮೆ ವಾಸ್ತವ ಬದುಕಿನ ಸಾಮಾಜಿಕ ಸಂಗತಿಗಳು ನಿರೂಪಣೆಗೊಂಡಿದ್ದರೂ, ಈ ಸಾಹಿತ್ಯ ಪ್ರಕಾರಗಳು ಪರೋಕ್ಷ ಮಾದರಿಯನ್ನೇ ಹೆಚ್ಚು ಅನುಸರಿಸಿರುವುದರಿಂದ ಲೇಖಕರಿಗೂ ಹಾಗೂ ಅಲ್ಲಿ ಬರುವ ಪಾತ್ರಗಳಿಗೂ ತೊಂದರೆಯುಂಟು ಮಾಡುವ ಪ್ರಮಾಣ ಕಡಿಮೆ. ಆತ್ಮಕಥೆಗಳಿಗೆ ಈ ಅವಕಾಶಗಳಿರುವುದು ಬಹಳ ಕಡಿಮೆಯಿದ್ದು, ಕಲ್ಪನೆಗೆ ಬಹುತೇಕ ಆಸ್ಪದವಿರುವುದಿಲ್ಲ. ವ್ಯಕ್ತಿಗಳು ತಾವು ಬದುಕಿದ ವಿವರಗಳನ್ನು ನಿಷ್ಠುರವಾಗಿ ವ್ಯಕ್ತಪಡಿಸುವಾಗ ಕೆಲವು ಸಮಸ್ಯೆಗಳಾಗಬಹುದು. ಇದು ಪುರುಷ ಮತ್ತು ಮಹಿಳಾ ಲೇಖಕರಿಬ್ಬರಿಗೂ ಸಂಬಂಧಿಸಿದ ಸಮಸ್ಯೆಯಾದರೂ, ಮಹಿಳಾ ಆತ್ಮಕಥನಕಾರರು ಹೆಚ್ಚು ಸಮಸ್ಯೆ ಅನುಭವಿಸುತ್ತಾರೆ. ಹೀಗಾಗಿ ಪುರುಷ ಆತ್ಮಕಥೆಗಳಿಗೆ ಹೋಲಿಸಿದರೆ ಮಹಿಳಾ ಆತ್ಮಕಥೆಗಳು ಕಡಿಮೆ ಪ್ರಮಾಣದಲ್ಲಿರುವುದನ್ನು ನೋಡಬಹುದಾಗಿದೆ.

**೬.೪.೨.** ಬರಹ ಕೂಡ ಪ್ರತಿರೋಧವಾಗಿರುವ ಹಲವಾರು ನಿದರ್ಶನಗಳಿವೆ. ವಾಸಂತಿ ಪಡುಕೋಣೆಯವರ 'ಜೀವನ ಹೋರಾಟ' ಆತ್ಮಕಥೆಯಲ್ಲಿ ವಾಸಂತಿಯವರ ಅಣ್ಣ “ನೀನು ಸ್ವತಃ ಬರೆಯುವುದಿಲ್ಲ. ನಿನ್ನ ಯಜಮಾನರು ಬರೆದು ನಿನ್ನ ಹೆಸರಿನಲ್ಲಿ ಕಳುಹಿಸುತ್ತಿದ್ದಾರೆ”[೪೩] ಎಂದು ತಮಾಷೆ ಮಾಡುತ್ತಾನೆ. ಆಗ ವಾಸಂತಿ ಅವರು 'ಜವಾನಿಕೀ ಹವಾ' ಎಂಬ ಕಥೆಯನ್ನು ಅವರಿಗೆ ಬರೆದು ತೋರಿಸುತ್ತಾರೆ. ಈ ಕಥೆಯನ್ನು ಓದಿದ ಲೇಖಕಿಯರ ಅಣ್ಣ ಮೆಚ್ಚಿದ್ದು, ಅಲ್ಲದೆ ಅದು ಸಿನಿಮಾ ಆಗಿ ಪ್ರದರ್ಶನಗೊಳ್ಳುತ್ತದೆ. ಇಲ್ಲಿ ಅಪಮಾನಿತ ಹೆಣ್ಣಿನ ಛಲ ಪ್ರಕಟವಾಗುತ್ತದೆ.

ಅನುಪಮಾ ನಿರಂಜನರ 'ನೆನಪು ಸಿಹಿಕಹಿ' ಆತ್ಮಕಥೆಯಲ್ಲಿ ಬರಹವು ಪ್ರತಿರೋಧವಾಗುವುದಕ್ಕೆ ಉದಾಹರಣೆಗಳು ದೊರೆಯುತ್ತವೆ. “ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡಸೇ ಶ್ರೇಷ್ಠ ಎಂಬಂತಹ ಕಲ್ಪನೆಗಳಿರುವಾಗ, ಹೆಣ್ಣು ತಾನೂ ಕೂಡ ಶ್ರೇಷ್ಠ ಎಂದು ಹೇಳಿಕೊಳ್ಳಲು ಅಪಾರ ಸಿದ್ಧತೆ ಮತ್ತು ಮನಃಸ್ಥೈರ್ಯ ಬೇಕು. ಇದನ್ನು ಪಡೆಯಲು ಸೃಜನಾತ್ಮಕ ಕಲೆಗಳ ಮುಖಾಂತರವೇ ಹೋರಾಡಬೇಕಾಗುತ್ತದೆ”[೪೪] ಎಂದು ಅನುಪಮ ಬರೆಯುತ್ತಾರೆ. ಬರಹಗಳಲ್ಲಿ ಮಹಿಳೆಯರು ತಮ್ಮ ಅಸ್ತಿತ್ವವನ್ನು ಸ್ಥಾಪಿಸುವ ಛಲ ತೊಟ್ಟಿರುವುದು ಗೋಚರಿಸುತ್ತದೆ. ಮಹಿಳಾ ಸಾಹಿತ್ಯದ ಅಭಿವ್ಯಕ್ತಿಯನ್ನೇ ಅವಮಾನಿಸುವ ವ್ಯವಸ್ಥೆಗೆ ಸಾಹಿತ್ಯದ ಮೂಲಕವೇ ಉತ್ತರಿಸುವ ಪ್ರತಿರೋಧವು ಇಲ್ಲಿದೆ.

೭೦-೮೦ರ ದಶಕದಲ್ಲಿ ಹೋರಾಟದ ಹಾಡುಗಳು, ಪತ್ರಿಕೆಗಳು, ಕಥೆ, ಕವನಗಳೆಲ್ಲ ಹೋರಾಟದ ಪ್ರತಿರೋಧದ ಸಂಕೇತಗಳಾಗಿದ್ದವು. ವಾಸಂತಿ ಅವರ 'ಜವಾನಿಕೀ ಹವಾ' ಹಾಗೂ ಅನುಪಮಾ ನಿರಂಜನ ಅವರು ಮಹಿಳೆಯರ ಸಾಹಿತ್ಯಾಭಿವ್ಯಕ್ತಿ ಕುರಿತ ಬೆಂಬಲದ ಸಲಹೆಗಳು ಅಂತಹ ಲಕ್ಷಣಗಳನ್ನು ಒಳಗೊಂಡಿವೆ. ಇವೆಲ್ಲ ಯಾವ ಪಿತೃಸಂಸ್ಕೃತಿಯು ಮಹಿಳೆಯ ಅಭಿವ್ಯಕ್ತಿಗೆ ಆವಕಾಶ ಮಾಡಿದ್ದಿಲ್ಲವೊ, ಅಂತಹ ಸಂಸ್ಕೃತಿಗೆ ಅಕ್ಷರದ ಅಭಿವ್ಯಕ್ತಿಯ ಮೂಲಕವೇ ಪ್ರತಿರೋಧ ತೋರುವುದು ಕಂಡುಬರುತ್ತದೆ. ಇದರ ಜೊತೆಗೆ ಮಹಿಳೆಯರು ಮತ್ತು ಪುರುಷರು ಬದಲಾಗಬೇಕಾದ ಅನಿವಾರ್ಯತೆಯನ್ನು ಹೇಳುವುದಕ್ಕೆ ಬರಹವೇ ಉತ್ತಮ ಮಾಧ್ಯಮವಾಗುತ್ತದೆ ಎಂಬುದನ್ನು ಸೂಚಿಸುತ್ತದೆ.

**೬.೪.೩.** ಆತ್ಮಕಥೆಗಳ ಶೀರ್ಷಿಕೆಗಳು: ಆತ್ಮಕಥನಕಾರರ ಬಹುತೇಕ ಬದುಕನ್ನು ಆತ್ಮಕಥೆಗಳ ಶೀರ್ಷಿಕೆಗಳು ತಮ್ಮೊಳಗೆ ಅಂತರ್ಗತವಾಗಿರಿಸಿಕೊಂಡಿರುತ್ತವೆ. ಹೀಗಾಗಿ ಶೀರ್ಷಿಕೆಗಳಿಗೂ ಆತ್ಮಕಥನಕಾರರ ಬದುಕಿಗೂ ಅಂತರ್‌ಸಂಬಂಧಗಳಿರುತ್ತವೆ. 'ಬೆಂಕಿ ಬೆಡಗು' ಹಾಗೂ 'ಮಾತಂಗಿ ದೀವಟಿಗೆ' ಇವೆರಡೂ ಶೀರ್ಷಿಕೆಗಳು ಅವಮಾನ ಮತ್ತು ಪ್ರತಿರೋಧದ ಸಂಕೇತಗಳಾಗಿವೆ. 'ಬೆಂಕಿ ಬೆಡಗು' ತನ್ನ ಒಡಲೊಳಗೆ ನೋವುಗಳ ಸರಮಾಲೆಯನ್ನೇ ಇಟ್ಟುಕೊಂಡಿದೆ. ಒಂದು ಕಡೆ ಪತಿ ತನ್ನ ಭಾವನೆಗಳಿಗೆ ಸ್ಪಂದಿಸದ ಅವಮಾನ ಒಂದು ಕಡೆಯಾದರೆ ಮತ್ತೊಂದು ಕಡೆ ಬದುಕು ಕಟ್ಟಿಕೊಳ್ಳುವ ಬರದಲ್ಲಿ ಸಮಾಜದಲ್ಲಿ ಕಂಡುಬರುವ ಅವಮಾನಗಳು. ಸಮಾಜದ ವಿನಾಕಾರಣ ಆರೋಪಗಳಿಂದ ಬೆಂಕಿಯುಂಡೆಯಂತಹ ಬದುಕನ್ನು ಸಾಂಕೇತಿಸುವ ರೂಪದಲ್ಲಿ ಬೆಂಕಿ ಎನ್ನುವ ಪದವಿದ್ದರೆ, ಈ ಎಲ್ಲಾ ಅವಮಾನಗಳನ್ನು ಮೀರಿ ಬದುಕನ್ನು ಗೆಲ್ಲಲಿಕ್ಕೆಂದು ಭಾವಿಸಿ ಅವಮಾನಿಸಿದವರೇ ಆಶ್ಚರ್ಯಪಟ್ಟುಕೊಳ್ಳುವಂತೆ ಬದುಕಿದ್ದು ಮತ್ತೊಂದು ಪರಿ. ಈ ಪರಿಯ ಅರ್ಥವೇ ಬೆಡಗು. ಈ ಬೆಡಗು ಉಮಾಶ್ರೀಯವರ ಸಾಧಕ ಬದುಕಿನ ಬೆರಗು ಸಹ ಆಗಿದೆ. ಇನ್ನೂ 'ಮಾತಂಗಿ ದೀವಟಿಗೆ'ಯಲ್ಲಿ ಲೇಖಕಿಯು ಮಾತಂಗಿ ಹಿನ್ನೆಲೆಯ ತಳಸಮುದಾಯದಿಂದ ಬಂದು ಹಿಂದುಳಿಯದೇ ಅವಮಾನಗಳೆಂಬ ಕತ್ತಲೆಗೆ ದೀವಟಿಗೆಯ ಸ್ಫೂರ್ತಿಯಾಗಿ ಬದುಕಿದ್ದು ಒಂದು ಬಗೆಯ ಪ್ರತಿರೋಧವೂ ಹೌದು, ತಳಸಮುದಾಯಗಳಾಗಿ ಉಳಿಯದೆ ಸಮಾನವಾಗಲೂ ಮತ್ತೊಬ್ಬರಿಗೆ ಪ್ರೇರಣೆಯೂ ಹೌದು.

'ಅನುದಿನದ ಅಂತರಗಂಗೆ' ಎಂಬ ಶೀರ್ಷಿಕೆಯು ಅವಮಾನಗಳನ್ನು ತಾಳ್ಮೆಯ, ಸಹನೆಯ ಗಂಗೆಯಂತೆ ಒಳಗೊಳ್ಳುವ ಭಾಗವಾಗಿ ಅಭಿವ್ಯಕ್ತಿಗೊಂಡಿರುವಂತಿದೆ. ಸರಸ್ವತಿಯವರ 'ಈಗೇನ್ ಮಾಡಿರಿ' ಆತ್ಮಕಥೆಯ ಶೀರ್ಷಿಕೆಯಲ್ಲಿ ಮುಗ್ಧತೆಯ ಒಂದು ಜೀವ ಈ ಅವ್ಯವಸ್ಥಿತ ಸಮಾಜದ ಅವಮಾನದಿಂದ ಬೇಸತ್ತು, ಕೊನೆಗೆ ಅದನ್ನು ಎದುರಿಸಿ ನಿಲ್ಲುವ ಆಶಯವಿದೆ. ಅವಮಾನಗಳಿಂದ ಪುಟಿದೆದ್ದ ಲೇಖಕಿ 'ಈಗೇನ್ ಮಾಡಿರಿ' ಎಂದು ಪ್ರಶ್ನೆ ಮಾಡುವಲ್ಲಿ ಪ್ರತಿರೋಧವಿದೆ. ಅಮೃತಾ

ಪ್ರೀತಂರವರ 'ರಸೀದಿ ತಿಕೀಟು' ಶಿರ್ಷಿಕೆಯ ಹಿನ್ನೆಲೆಯಲ್ಲೂ ಅವಮಾನದ ಪ್ರೇರಣೆಯಿದೆ. ಪ್ರೀತಂ ಅವರು ಒಂದು ಬಾರಿ ತನ್ನ ಆತ್ಮಕಥೆ ಕುರಿತು ಖುಷ್ವಂತ್ ಸಿಂಗ್‌ರ ಬಳಿ ಚರ್ಚಿಸುತ್ತಿದ್ದಾಗ ನಿನ್ನದೇನು ಬಿಡು ರಸೀದಿ ತಿಕೀಟಿನ ಬೆನ್ನ ಮೇಲೆ ಬರೆಯಬಹುದು ಎಂದರಂತೆ. ಇಲ್ಲಿ ಮಹಿಳೆಯ ಬದುಕಿನ ಮೇಲೆ ಇರುವಂತಹ ಪುರುಷ ಪ್ರಧಾನ ದೃಷ್ಟಿಕೋನವು ಹೀಗೆ ಅವರಿಂದ ಹೇಳಿಸಿದೆ. ಇದು ಹೆಣ್ಣಿನ ಬದುಕನ್ನು ಒಂದು ಬದುಕು ಎಂದು ಗ್ರಹಿಸದ ಅವಮಾನಿಸುವ ಪ್ರಕ್ರಿಯೆಯಾಗಿದೆ. ಆದರೆ ಅಮೃತಾ ಅವರು ಆ ಅವಮಾನಿತ ಪದವನ್ನೇ ತಮ್ಮ ಆತ್ಮಕಥೆಯ ಶೀರ್ಷಿಕೆಯನ್ನೇ ಇಟ್ಟು ಸ್ವಾಭಿಮಾನ ಮತ್ತು ಪ್ರತಿರೋಧ ಪ್ರಕಟಿಸಿದರು.

**೬.೪.೪.**ಅವಮಾನಿತರು ತಮ್ಮ ಅಳಲನ್ನು ಹೇಳಿಕೊಳ್ಳಲು ಪ್ರಾಚೀನ ಕಾಲದಿಂದಲೂ ಬಳಸಿದ್ದು ಹಾಡಿನ ಮಾಧ್ಯಮ ಇದು ಮಾನಸಿಕ ನೆಮ್ಮದಿಯನ್ನು ಕೊಡುತ್ತಿತ್ತು. ಈ ಕಾರಣಕ್ಕಾಗಿಯೇ ಕನ್ನಡ ಸಾಹಿತ್ಯದಲ್ಲಿ 'ಬೆಲ್ಚಿಯ ಹಾಡು', 'ಬರುತಿಹೆವು ನಾವು ಬರುತಿಹೆವು' ಕವನಗಳು ರಚನೆಯಾದವು. ಇಂತಹ ಎಚ್ಚರಗಳಿಂದ ಪ್ರಭಾವಗೊಂಡ ರೇವತಿಯವರೂ ಸಹ 'ಬದುಕು ಬಯಲು' ಆತ್ಮಕಥೆಯ ಕೊನೆಯಲ್ಲಿ ಕವನವನ್ನು ತರುತ್ತಾರೆ.

ಅಮ್ಮ ಒಪ್ಪಿಲ್ಲ, ನಮ್ಮನ್ನು ಅಪ್ಪ ಒಪ್ಪಿಲ್ಲ
ಸಂಕಟ ಅವಮಾನ
ತಪ್ಪಿದ್ದಲ್ಲ ನಮಗೆ
ಎಲ್ಲರಂತೆ ನಾವೂ ಕೂಡ ಬದುಕಬೇಕಂತೀವಿ
ಸಿದ್ಧವಾಗಿದೀವಿ,
ಕುರುಕ್ಷೇತ್ರಕ್ಕಿಳಿದಿದ್ದೀವಿ
ಪಾಪ! ಎನಬೇಡಿ,
ಥೂ! ಎಂದು ದೂರ ತಳ್ಬೇಡಿ
ನಮ್ಮ ಹಕ್ಕು ನಮ್ಮ ಘನತೆ
ಪಡೆದೇ ತೀರ್ತೀವಿ,
ಅಡ್ಡ ಬರಬೇಡಿ
ನಮ್ಮ ಮನದ ದನಿಗೆ ಕಿವಿಗೂಡಿ”[೪೫]

'ಬದುಕು ಬಯಲು'ಪಠ್ಯದಲ್ಲಿ ಬರುವ ಮೇಲಿನ ಕವನ ಎರಡು ಆಶಯಗಳನ್ನು ಒಳಗೊಂಡಿದೆ. ತೃತೀಯ ಲಿಂಗಿಗಳ ಅಪಮಾನ ತುಂಬಿದ ದಾರುಣ ಬದುಕನ್ನು ಹೇಳುವುದು ಮೊದಲನೆಯ ಆಶಯವಾದರೆ, ಭರವಸೆಯ ಬದುಕು ಮತ್ತು ಪ್ರತಿರೋಧದ ಛಲ ಕವಿತೆಯ ಎರಡನೆಯ ಆಶಯವಾಗಿದೆ. ದಮನದ ಸ್ತರದಿಂದ ನೋವುಂಡ ಸಮುದಾಯಗಳು ಸಂಘಟನೆಗೊಂಡ ಮೇಲೆ

ಒಂದು ಬಗೆಯ ಆತ್ಮವಿಶ್ವಾಸವನ್ನು ಹೊಂದಿ ಮರುಕವನ್ನಾಗಲಿ ಅಥವಾ ಕನಿಕರವನ್ನಾಗಲಿ ಬಯಸದೆ; ತಮ್ಮ ಹಕ್ಕನ್ನು ಪಡೆದೇ ತೀರುತ್ತೇವೆ ಎಂಬ ಸ್ಪಷ್ಟ ನಿಲುವುಗಳನ್ನು ಕವನದಲ್ಲಿ ವ್ಯಕ್ತಪಡಿಸಿರುವುದು ಪ್ರತಿರೋಧದ ಸಾಂಕೇತಿಕತೆಯೂ ಆಗಿದೆ.

ಒಟ್ಟಾರೆಯಾಗಿ ಕನ್ನಡ ಆತ್ಮಕಥೆಗಳು ಸಾಮಾಜಿಕ ವ್ಯವಸ್ಥೆಯೊಳಗಿನ ಹಲವು ಶ್ರೇಣೀಕರಣಗಳನ್ನು ಅಧ್ಯಯನ ಮಾಡಲು ಆಗು ಮಾಡಿಕೊಟ್ಟಿವೆ. ಲಿಂಗ ತರತಮಗಳಿಗೆ ಸಂಬಂಧಿಸಿದಂತೆ ಪುರುಷ ಪ್ರಧಾನ ಸಮಾಜದ ವ್ಯವಸ್ಥಿತ ತಂತ್ರಗಾರಿಕೆಗಳನ್ನು ಕಂಡುಕೊಳ್ಳಲಾಗಿದ್ದೂ, ಈ ತಂತ್ರಗಾರಿಕೆಗಳನ್ನು ಅಷ್ಟೇ ಸಮರ್ಥ ಪರ್ಯಾಯಗಳ ಮೂಲಕ ಪ್ರತಿರೋಧಿಸುವ ಹಲವು ಸಂಗತಿಗಳು ಈ ಆತ್ಮಕಥೆಗಳಲ್ಲಿ ದಾಖಲಾಗಿವೆ.

**ಕೊನೆ ಟಿಪ್ಪಣಿಗಳು**

೧. ಅಮೃತಾ ಪ್ರೀತಂ, ಅನು: ಹಸನ್ ನಯೀಂ ಸುರಕೋಡ, ರಸೀದಿ ತಿಕೀಟು, ಪು. ೧

೨. ಛಾಯ ದಾತಾರ್, ಅನು: ಸರಸ್ವತಿ ರಿಸಬೂಡ, ಸ್ತ್ರೀ-ಪುರುಷ, ಪು. ೧೩೪

೩. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪು. ೪೩

೪. ಪ್ರತಿಭಾ ನಂದಕುಮಾರ್, ಅನುದಿನದ ಅಂತರಗಂಗೆ, ಪು.೮೦

೫. ಅದೇ, ಪು. ೮೦

೬ ಮಾದವಿ ದೇಸಾಯಿ,ಚಂದ್ರಕಾಂತ್ ಪೋಕಳೆ(ಅನು) ಕುಣಿಯೇ ಘುಮಾ, ಪು. ೧೮೦

೭ ಪ್ರತಿಭಾ ನಂದಕುಮಾರ್, ಅನುದಿನದ ಅಂತರಗಂಗೆ, ಪು. ೧೮

೮. ಅದೇ, ಪು. ೧೮

೯. ಅದೇ, ಪು. ೧೮

೧೦. ಗಣಪತಿ ಬಿ, ಬೆಂಕಿ ಬೆಡಗು, ಪು. ೮

೧೧. ಅದೇ, ಪು. ೩೪

೧೨. ಅದೇ, ಪು. ೩೫

೧೩. ಅದೇ, ಪು. ೫೩, ೫೪

೧೪. ಅದೇ, ಪು. ೩೪, ೩೪

೧೫. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪು. ೧೩೮

೧೬. ಗಣಪತಿ ಬಿ, ಬೆಂಕಿ ಬೆಡಗು, ಪು. ೨೮

೧೭. ಅದೇ, ಪು. ೨೯

೧೮. ಅದೇ, ಪು. ೨೯

೧೯. ಅದೇ, ಪು. ೩೦

೨೦. ಪ್ರೊ. ಕಾಳೇಗೌಡ ನಾಗವಾರ(ಸಂ),ಜಿ.ವಿ. ಆನಂದಮೂರ್ತಿ, ಗರಿಗೆದರಿದ ನವಿಲು, ಪು. ೩೩

೨೧. ಗಣಪತಿ ಬಿ ,ಬೆಂಕಿ ಬೆಡಗು, ಬೆನ್ನುಡಿ.

೨೨. ಇಂದಿರಾ. ಆರ್, ಮಹಿಳೆ, ಸಮಾಜ, ಸಂಸ್ಕೃತಿ, ಪು. ೨೪

೨೩. ಗಣಪತಿ ಬಿ, ಬೆಂಕಿ ಬೆಡಗು, ಪು. ೪೧

೨೪. ಅದೇ, ಪು. ೬೨

೨೫. ಅದೇ, ಪು.೧೩

೨೬. ಕಾರಂತ ಬಿ.ವಿ, ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ, ಪು. ೧೩೦

೨೭. ಪ್ರೊತಿಮಾ ಬೇಡಿ, ಟೈಮ್ ಪಾಸ್, ಪು. ೧೬

೨೮. ಸುಶೀಲಾ ರಾಯ್, ಜಿ.ಕುಮಾರಪ್ಪ (ಅನು), ನಿರಕ್ಷರಿಯ ಆತ್ಮಕತೆ, ಪು. ೯

೨೯. ವಿಜಯಾದಬ್ಬೆ, ಲೇಖ-ಲೋಕ, ಪು. ೨೬

೩೦. ಗಣಪತಿ ಬಿ, ಬೆಂಕಿ ಬೆಡಗು, ಪು. ೩೧

೩೧. ವಿಜಯಾದಬ್ಬೆ, ಲೇಖ-ಲೋಕ, ಪು. ೨೭

೩೨. ಪ್ರತಿಭಾ ನಂದಕುಮಾರ್, ಅನುದಿನದ ಅಂತರಗಂಗೆ, ಪುಟ. ೪೧

೩೩. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪು. ೧೩೬

೩೪. ಕವಿತಾ ಲಂಕೇಶ್, ಒಂಟಿ ಪಾಲಕಿಯ ಸ್ವಗತ, ಸುಧಾ ವಾರ ಪತ್ರಿಕೆ, ನವಂಬರ್ ೨೨, ಪು. ೨೫,೩೫.

೩೫. ಅದೇ, ಪು. ೨೬

೩೬. ಸುಕನ್ಯಾ ಕನಾರಳ್ಳಿ, ಹೇಳುತೇನೆ ಕೇಳು, ೨೩೬

೩೭. ರೇವತಿ.ಎ, ದು.ಸರಸ್ವತಿ (ಅನು), ಬದುಕು ಬಯಲು, ಪು. ೬

೩೮. ಅದೇ, ಪು. ೧೮೪

೩೯. ನಾನು ಅವನಲ್ಲ ಅವಳು, (ವಿದ್ಯಾ ಅವರು ರೈಲಿನಲ್ಲಿ ಪ್ರಯಾಣಿಸುವ ದೃಶ್ಯ) ಚಲನಚಿತ್ರ

೪೦. ಅದೇ ದೃಶ್ಯ.

೪೧. ರೇವತಿ.ಎ, ದು.ಸರಸ್ವತಿ (ಅನು), ಬದುಕುಬಯಲು, ಪು. ೨೦೪

೪೨. ವಿಜಯಾ ದಬ್ಬೆ, ಲೇಖಲೋಕ-೨, ಪು. ೫೪

೪೩. ವಾಸಂತಿ ಪಡುಕೋಣೆ, ಜೀವನಹೋರಾಟ, ಪು. ೧೦೩

೪೪. ಅನುಪಮಾ ನಿರಂಜನ, ಬರಹಗಾರ್ತಿಯ ಬದುಕು, ಪು. ೨೫,೨೬

೪೫. ರೇವತಿ.ಎ, ದು.ಸರಸ್ವತಿ (ಅನು), ಬದುಕುಬಯಲು, ಪು. ೨೮೦

ಅಧ್ಯಾಯ : ಏಳು

# ಧರ್ಮದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

೭.೧. ಧರ್ಮಾಧಾರಿತ ಪರಕೀಯತೆಯಿಂದ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೭.೨. ಸ್ವಧರ್ಮಿಯರಿಂದಲೇ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

೭.೩. ಅಭಿವ್ಯಕ್ತಿ ಸ್ವರೂಪ

ಅಧ್ಯಾಯ : ಏಳು

# ಧರ್ಮದ ನೆಲೆಯಲ್ಲಿ ಅವಮಾನ ಮತ್ತು ಪ್ರತಿರೋಧಗಳು

## ಪ್ರಸ್ತಾವನೆ

ಸಾಮಾಜಿಕ ವ್ಯವಸ್ಥೆಯೂ ಜಾತಿ, ವರ್ಗ, ಲಿಂಗ, ಬಣ್ಣ, ಧರ್ಮಗಳ ಅಡಿಪಾಯದ ಮೇಲೆ ರಚನೆಗೊಂಡಿದೆ. ಹಾಗಾಗಿ ಮೇಲಿನ ಸಂಗತಿಗಳು ಯಾವುದೇ ಕ್ಷೇತ್ರದಲ್ಲಾದರೂ ಸುಲಭವಾಗಿ ಪ್ರವೇಶ ಪಡೆಯುತ್ತವೆ ಮತ್ತು ಪರಿಣಾಮಕಾರಿಯಾದ ಪ್ರಭಾವ ಬೀರುತ್ತವೆ. ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಜಾತಿ, ವರ್ಗ, ಲಿಂಗಾಧಾರಿತ ಅವಮಾನ ಮತ್ತು ಪ್ರತಿರೋಧಗಳನ್ನು ಕುರಿತು ಅಧ್ಯಯನ ಮಾಡಲಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಧಾರ್ಮಿಕ ಮೂಲಭೂತವಾದಿತನ ಮತ್ತು ಸ್ವಧರ್ಮಿಯರಿಂದ ಅನುಭವಿಸುವ ಪರಕೀಯತೆಯನ್ನು ಕುರಿತು ಚರ್ಚಿಸಲಾಗುವುದು. ಆಕರಗಳಾಗಿ ಆತ್ಮಕಥೆ ಪ್ರಕಾರಗಳಲ್ಲಿಯೇ ಪ್ರಕಟವಾದ ಕೃತಿಗಳ ಜೊತೆಗೆ ಇತರೆ ಆತ್ಮಕಥನಾತ್ಮಕ ಬರಹಗಳನ್ನೂ ಸಹ ಪೂರಕ ಆಕರಗಳನ್ನಾಗಿ ಆಯ್ದುಕೊಳ್ಳಲಾಗಿದೆ. ಇದರ ಜೊತೆಗೆ ಕೆಲವು ಲೇಖಕರನ್ನು ಸಂದರ್ಶನ ಮಾಡಲಾಗಿದೆ.

ಧರ್ಮ ಎಂಬ ಪದವು ನಿಯಮ, ಪುಣ್ಯ, ಗುಣ, ನಿಷ್ಠೆ, ದಯೆ, ಮತ, ಕರ್ತವ್ಯ ಎಂಬ ಅರ್ಥಗಳನ್ನು ನಿಘಂಟುವಿನಲ್ಲಿ ಒಳಗೊಂಡಿದೆ. ಸಾಮಾನ್ಯವಾಗಿ ಈ ಎಲ್ಲಾ ಅರ್ಥಗಳಲ್ಲಿ ಧರ್ಮವನ್ನು ಬಳಸಲಾಗಿದೆ. 'ದಯವಿಲ್ಲದ ಧರ್ಮ ಯಾವುದಯ್ಯ' 'ಕೆಲಸವನ್ನು ನಿಷ್ಠೆಯಿಂದ ಮಾಡುವುದು ನಮ್ಮ ಧರ್ಮ' ಎಂಬ ಮಾತುಗಳಲ್ಲಿ ಧರ್ಮವು ದಯೆ, ನಿಷ್ಠೆ ಎಂಬ ಅರ್ಥಗಳಲ್ಲಿ ಬಳಕೆಯಾಗಿದೆ. ಹೀಗೆ ಧರ್ಮವನ್ನು ಜನಮಾತಿನಲ್ಲಿ ಹಾಗೂ ಸಾಹಿತ್ಯ ವಲಯದಲ್ಲೂ ಬಳಸಲಾಗಿದೆ. ಈ ಧರ್ಮದ ಕುರಿತ ಚಿಂತನೆಗೆ ದೀರ್ಘವಾದ ಚರಿತ್ರೆಯಿದೆ. ಶತಶತಮಾನಗಳಿಂದಲೂ ಧರ್ಮವು ವ್ಯಾಖ್ಯಾನಕ್ಕೆ ಮರು ವ್ಯಾಖ್ಯಾನಕ್ಕೆ ಒಳಗಾಗುತ್ತಲೇ ಬಂದಿದ್ದು, ಇಂದಿಗೂ ಮುಂದುವರಿದಿರುವ ಹಾಗೂ ಮುಂದುವರೆಯುತ್ತಲೇ ಇರುವ ಬಹುರೂಪಿ ಅರ್ಥವುಳ್ಳ ಪದವಾಗಿದೆ. ಚಾರ್ವಾಕರಿಂದ ಹಿಡಿದು ಇಂದಿನ ಪ್ರತ್ಯೇಕ ಲಿಂಗಾಯತ ಧರ್ಮದ ವಿಚಾರದವರೆಗಿನ ಪರಿಷ್ಕರಣೆಗಳೇ ಮೇಲಿನ ವಾದಕ್ಕೆ ಪುಷ್ಟಿ ನೀಡುತ್ತವೆ. ಬುದ್ಧ ತನ್ನ ಧಮ್ಮದ ಮೂಲಕ ಧರ್ಮವನ್ನು ಸರಳೀಕರಿಸುವ ಪ್ರಯತ್ನವನ್ನು ಮತ್ತು ಸಮಾನತೆಯ ನೆಲೆಗಟ್ಟಿನಲ್ಲಿ ಕಟ್ಟುವ ಪ್ರಯತ್ನ ಮಾಡಿದ. ಆಗ ಸನಾತನ

ಧರ್ಮದ ಮೂಲಭೂತವಾದಿಗಳು ಬುದ್ಧನ ಧಮ್ಮದೊಂದಿಗೆ ಸಂಘರ್ಷಕ್ಕಿಳಿದರು. ಕೊನೆಗೆ ಬುದ್ಧನನ್ನೇ ತಮ್ಮೊಳಗೆ ಸೆಳೆಯುವ ಪ್ರಯತ್ನ ಮಾಡಿದರು.

ಈ ಧರ್ಮ ಧರ್ಮಗಳ ನಡುವಿನ ಸಂಘರ್ಷವು ಮತ್ತೆ ಮತ್ತೆ ಕಂಡುಬರುತ್ತಲೇ ಇತ್ತು. ಇಂತಹ ಕಾದಾಟದ ಸಮಯದಲ್ಲೆಲ್ಲ ಸಾಹಿತ್ಯವು ಪ್ರತಿಕ್ರಿಯಿಸುತ್ತಲೇ ಬಂದಿದೆ. ೧೦ನೇ ಶತಮಾನದಲ್ಲಿನ 'ಕವಿರಾಜಮಾರ್ಗ' ಕೃತಿಯಲ್ಲಿಯೂ 'ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ ಪರ ವಿಚಾರಮಂ ಪರಧರ್ಮಮಂ' ಎಂದು ಹೇಳಿರುವುದು ಧಾರ್ಮಿಕ ಅಸಹಿಷ್ಣುತೆ ಕುರಿತ ಪ್ರತಿಕ್ರಿಯೆಯಾಗಿದೆ. ವೈಷ್ಣವ ಮತ್ತು ಜೈನರ ನಡುವಿನ ಸಂಘರ್ಷದ ಬಗ್ಗೆ ಹೇಳುವ ೧೩೬೮ರ 'ಬುಕ್ಕರಾಯ ಶಾಸನ', ಬಸವಣ್ಣನವರ 'ದಯವಿಲ್ಲದ ಧರ್ಮ ಯಾವುದಯ್ಯ' ಎಂಬ ಮಾತಿನಲ್ಲಿ ವೃತ್ತವಿಲಾಸನ 'ಧರ್ಮ ಪರೀಕ್ಷೆ' ಹಾಗೂ ಬ್ರಹ್ಮಶಿವನ 'ಸಮಯ ಪರೀಕ್ಷೆ' ಕೃತಿಗಳಲ್ಲಿ ಧರ್ಮ ಸಂಘರ್ಷದ ಬಗ್ಗೆ ಇದ್ದರೆ, ಸಂಚಿ ಹೊನ್ನಮ್ಮನ 'ಹದಿಬದೆಯ ಧರ್ಮ' ಕೃತಿಯಲ್ಲಿ ಧರ್ಮವು ನಡೆ ನುಡಿ ಎಂಬರ್ಥದಲ್ಲಿ ಬಳಕೆಯಾಗಿದೆ. ಕುವೆಂಪು ಅವರ 'ನೇಗಿಲ ಮೇಲೆಯೇ ನಿಂತಿದೆ ಧರ್ಮ' ಎಂಬ ಹೇಳಿಕೆಯು ವೃತ್ತಿ ಬದ್ಧತೆ ಮತ್ತು ನೆಲದ ನಂಟಿನ ಬಗ್ಗೆ ಹೇಳುತ್ತದೆ. ಹೀಗೆ ಧರ್ಮ ಎಂಬ ಪದವು ಹಲವು ಅರ್ಥಗಳನ್ನು ತನ್ನೊಡಲಲ್ಲಿ ಇಟ್ಟುಕೊಂಡು ಬಳಕೆಗೊಂಡಿದೆ.

ಇತ್ತೀಚೆಗೆ ಧರ್ಮವು ಕೋಮುವಾದಕ್ಕೆ ಪರಿವರ್ತನೆಯಾಗಿದೆ. ಇಲ್ಲಿಯೇ ಕಾರ್ಲ್‌ಮಾರ್ಕ್ಸ್‌ರ 'ಧರ್ಮ ಒಂದು ಅಫೀಮು' ಎಂಬ ಹೇಳಿಕೆಯನ್ನು ನೆನಪಿಸಿಕೊಳ್ಳಬೇಕು. ಏಕೆಂದರೆ ಧರ್ಮಾಂಧತೆಯು ಇಂದು ಅಂತರಾಷ್ಟ್ರೀಯ ಮಟ್ಟದಲ್ಲಿ ವ್ಯಾಪಿಸಿಕೊಂಡಿದೆ. ಧರ್ಮಾಂಧತೆಯನ್ನು ಹರಡುವುದಕ್ಕಾಗಿಯೇ ಹಿಂದೂ ಮತ್ತು ಮುಸ್ಲಿಂ ಮೂಲಭೂತವಾದಿ ಸಿದ್ಧಾಂತ ಮತ್ತು ಸಂಘಟನೆಗಳು ಕಾರ್ಯೋನ್ಮುಖವಾಗಿವೆ. ಪಾಕಿಸ್ತಾನ, ಭಾರತ, ಅಮೆರಿಕ, ಬಾಂಗ್ಲಾದೇಶ ಇನ್ನೂ ಮುಂತಾದ ದೇಶಗಳು ಇದರ ನೇರ ಪಾಲುದಾರರಾಗಿವೆ. ಬ್ರಿಟಿಷರು ಭಾರತಕ್ಕೆ ಕೇವಲ ವ್ಯಾಪಾರಕ್ಕಾಗಿ ಮಾತ್ರ ಬಂದವರಲ್ಲ, ಕ್ರೈಸ್ತ ಧರ್ಮದ ಪ್ರಚಾರವೂ ಅವರ ಉದ್ದೇಶವಾಗಿತ್ತು. ಇಲ್ಲಿನ ಜನರನ್ನು ಮತಾಂತರ ಮಾಡುವ ಪ್ರಯತ್ನಗಳು ನಡೆದವು. ಹೀಗೆ ಮತಾಂತರ ಆಗುವವರಿಗೆ ಆಸೆ ಆಮಿಷಗಳನ್ನೂ ನೀಡಲಾಗುತ್ತಿತ್ತು. 'ಚೋಮನ ದುಡಿ'ಯ ಚೋಮ ಜಮೀನಿಗಾಗಿ ಮತಾಂತರವಾಗಲು ಹೊರಟಿದ್ದನ್ನು ಗಮನಿಸಬಹುದು.

ಭಾರತದಲ್ಲಿ ಕೋಮುವಾದವು ೫ ಪ್ರಮುಖ ಹಂತಗಳಲ್ಲಿ ಸೃಷ್ಟಿಯಾಗಿರುವುದನ್ನು ಗಮನಿಸಬಹುದಾಗಿದೆ. ಮೊದಲನೆಯದಾಗಿ, ೧೮೪೯ ರಲ್ಲಿ ಪ್ಯಾಟ್ರಿಕ್‌ಸನ್ ಮತ್ತು ವಿಲ್ಕ್ಸ್ ಎಂಬ ಬ್ರಿಟಿಷ್ ಇತಿಹಾಸಕಾರರು ಟಿಪ್ಪುವಿನ ಬಗ್ಗೆ ಇದ್ದ ಜನರ ಅಭಿಮಾನವನ್ನು ತಗ್ಗಿಸಲು ಟಿಪ್ಪುವನ್ನು ಖಳನಾಯಕನಾಗಿ ಚಿತ್ರಿಸುತ್ತಾ, ಟಿಪ್ಪುವನ್ನು ಒಬ್ಬ ಮತಾಂಧನನ್ನಾಗಿ ರೂಪಿಸಿದರು. ಎರಡನೆಯದಾಗಿ, ೧೮೫೭ ರಲ್ಲಿ ನಡೆದ ಸಿಪಾಯಿ ದಂಗೆಯಲ್ಲಿ ಹಿಂದೂಗಳು ಮತ್ತು ಮುಸ್ಲಿಮರು ಒಟ್ಟಾಗಿ

ಹೋರಾಟ ಮಾಡಿದ್ದರ ಫಲವಾಗಿ ಬ್ರಿಟಿಷರಿಗೆ ಅಲ್ಪಮಟ್ಟಿಗೆ ಹಿನ್ನೆಡೆಯಾಯಿತು. ಈ ಒಗ್ಗಟ್ಟಿನ ಹೋರಾಟವನ್ನು ಹತ್ತಿಕ್ಕುವುದಕ್ಕಾಗಿ ಹಿಂದೂ ಮತ್ತು ಮುಸ್ಲಿಮರ ನಡುವೆ ಸಂಘರ್ಷ ಉಂಟು ಮಾಡಲಾಯಿತು. ಮುಸ್ಲಿಂ ಆಳುವ ವರ್ಗಗಳು ಮಾಡಿರುವ ರಾಜಕೀಯ ಒಪ್ಪುತಪ್ಪುಗಳನ್ನು ಧಾರ್ಮಿಕ ಸಮುದಾಯದ ವಿರುದ್ಧ ಮಾಡಿದ ಶೋಷಣೆ ಎಂಬಂತೆ ಚಿತ್ರಿಸಲಾಯಿತು. ಮೂರನೆಯದಾಗಿ, ೧೯೨೭ರಲ್ಲಿ ಅಂಬೇಡ್ಕರ್ ಅವರ ವೈಚಾರಿಕ ಜಾಗೃತಿಯಿಂದ ಸವರ್ಣೀಯರು ಎಲ್ಲಿ ತಮ್ಮ ಯಜಮಾನಿಕೆಯು ಕಳೆದು ಹೋಗುತ್ತೆಂದು ಹೊಸ ಶತ್ರುಗಳನ್ನು ಸೃಷ್ಟಿಸಿ ತಮ್ಮ ಯಾಜಮಾನ್ಯವನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದರು. ನಾಲ್ಕನೆಯದಾಗಿ, ೧೯೪೭ರಲ್ಲಿ ಕೆಲವರ ರಾಜಕೀಯ ಅಧಿಕಾರಕ್ಕಾಗಿ ನಡೆದ ಧರ್ಮಾಧಾರಿತ ದೇಶ ವಿಭಜನೆಯಿಂದ ಭಾರತದಲ್ಲೇ ಉಳಿದುಕೊಂಡ ಮುಸ್ಲಿಮರ ವಿರುದ್ಧ ಧರ್ಮಾಂಧತೆಯನ್ನು ಬೆಳೆಸಲಾಯಿತು. ಐದನೆಯದಾಗಿ, ದೊಡ್ಡ ಮಟ್ಟದಲ್ಲಿ ರಾಜಕಾರಣವನ್ನು ಪ್ರವೇಶಿಸುವುದಕ್ಕಾಗಿ ಹಾಗೂ ಜಾತಿ ಅಸಮಾನತೆಯನ್ನು ಮರೆಸಿ ಧರ್ಮಾಂಧತೆಯನ್ನು ತುಂಬುವುದಕ್ಕಾಗಿಯೇ ಬಾಬ್ರಿ ಮಸೀದಿ ಧ್ವಂಸ ಮಾಡುವುದರ ಮೂಲಕ ಕೋಮುವಾದವನ್ನು ಹೆಚ್ಚಿಸಲಾಯಿತು.

ಹೀಗೆ ಕೋಮುವಾದಕ್ಕೆ ಒಂದು ಇತಿಹಾಸವೇ ಕಂಡುಬರುತ್ತದೆ. ಆಯಾ ದೇಶದಲ್ಲಿರುವ ಧಾರ್ಮಿಕ ಬಹುಸಂಖ್ಯಾತರು ಅದೇ ದೇಶದಲ್ಲಿನ ಧಾರ್ಮಿಕ ಅಲ್ಪಸಂಖ್ಯಾತರನ್ನು ಅನುಮಾನಿಸುವ, ಹಲ್ಲೆ ಮಾಡುವ ಹಂತಕ್ಕೆ ಹೋಗಿರುವ ಸನ್ನಿವೇಶಗಳು ಹಲವಾರು ದೇಶಗಳಲ್ಲಿ ಕಂಡುಬರುತ್ತವೆ. ಭಾರತ ದೇಶವೂ ಇದಕ್ಕೆ ಹೊರತಾಗಿಲ್ಲ. ಪಾಕಿಸ್ತಾನದಲ್ಲಿರುವ ಹಿಂದೂಗಳು, ಭಾರತದಲ್ಲಿರುವ ಮುಸ್ಲಿಮರು, ಕ್ರೈಸ್ತರು, ಕಾಶ್ಮೀರದಲ್ಲಿರುವ ಪಂಡಿತರು ಹೀಗೆ ಒಂದಲ್ಲ ಒಂದು ಕಾರಣಕ್ಕೆ ಪರಕೀಯತೆಗೆ ಒಳಗಾಗುತ್ತಿರುವವರಾಗಿದ್ದಾರೆ. ಅನ್ಯಧರ್ಮಿಯರ ಬಗ್ಗೆ ಇರುವ ಈ ಅಸಹಿಷ್ಣುತೆಯು ರಕ್ತಸಿಕ್ತ ಕಾದಾಟಕ್ಕೆ ತಲುಪಿದೆ.

ಜಗತ್ತು ವೈಜ್ಞಾನಿಕವಾಗಿ ಬೆಳೆದು ಸಂಪರ್ಕ ಕ್ಷೇತ್ರದಲ್ಲಿ ದೊಡ್ಡ ಕ್ರಾಂತಿಯೇ ನಡೆದು ಜನರನ್ನು ಹತ್ತಿರ ತಂದಿದೆ. ಆದರೆ ಅದು ಕೋಮುವಾದವನ್ನು ವೇಗವಾಗಿ ಹರಡುತ್ತಾ ಜನರ ನಡುವೆ ಅಂತರವನ್ನು ಹೆಚ್ಚು ಮಾಡಲು ಅನುಕೂಲವೂ ಆದಂತಾಗಿದೆ. ತೈಲ ಉತ್ಪನ್ನ ರಾಷ್ಟ್ರಗಳ ಮೇಲೆ ಹಿಡಿತ ಸಾಧಿಸುವ ಸಲುವಾಗಿ ಈ ಕೆಲಸಕ್ಕೆ ಗತಕಾಲದ ಕೆಲವು ಸಂಗತಿಗಳನ್ನು ಬಳುವಳಿಯಾಗಿ ತೆಗೆದುಕೊಂಡು, ಮತ್ತೆ ಕೆಲವೊಮ್ಮೆ ತಾವೇ ಅಪವಾದಗಳನ್ನು ಸೃಷ್ಟಿಸಿ ಕೋಮುವಾದವನ್ನು ಬಿತ್ತಲಾಗುತ್ತಿದೆ. ಹೀಗೆ ಮತೀಯವಾದವು ಒಂದು ನಿರ್ದಿಷ್ಟ ಸಮುದಾಯದ ವಿರುದ್ಧ ದೇಶದ್ರೋಹವನ್ನು ಆರೋಪಿಸಿ ತನ್ನ ಸಮುದಾಯದೊಳಗಿನ ಜಾತಿಗಳನ್ನು ಒಗ್ಗೂಡಿಸಲು ಆ ಸಮುದಾಯದ ಹೆಸರಲ್ಲಿ ವಿದೇಶದ ಬಾವುಟ ಹಾರಿಸುವುದನ್ನು ಕಾಣಬಹುದು. ಇಂತಹ ಕೋಮುವಾದಗಳ ದಳ್ಳುರಿಯಲ್ಲಿ ಸಾಮಾನ್ಯ ಜನರು ಬಲಿಯಾಗುವುದು ಒಂದೆಡೆಯಾದರೆ, ಮತ್ತೊಂದೆಡೆ ಎಲ್ಲಾ

ಧರ್ಮದಲ್ಲಿರುವ ಮೂಲಭೂತವಾದಿಗಳು ಅದರ ಲಾಭ ಮಾಡಿಕೊಳ್ಳುವುದು. ಮತ್ತೊಂದು ಬಗೆಯಾಗಿದೆ.

ಅಮೆರಿಕವು ಕೋಮುವಾದವನ್ನು ಸೃಷ್ಟಿ ಮಾಡಿದರೆ. ರಾಜಕೀಯ, ಆರ್ಥಿಕ ಕಾರಣಗಳಿಗಾಗಿ ಭಾರತ ದೇಶದಲ್ಲೂ ಧಾರ್ಮಿಕ ಅಸಹಿಷ್ಣುತೆಯನ್ನುಂಟು ಮಾಡಲಾಗುತ್ತಿದೆ. ಭಾರತ ದೇಶದಲ್ಲಿ ಎರಡು ಕಾರಣಗಳಿಗಾಗಿ ಧಾರ್ಮಿಕ ಅಸಹಿಷ್ಣುತೆಯನ್ನು ಸೃಷ್ಟಿ ಮಾಡಲಾಗುತ್ತಿದೆ. ಒಂದನೆಯದಾಗಿ, ಆಳುವ ಪಕ್ಷಗಳು ರಾಜಕೀಯ ಹಿತಾಸಕ್ತಿಗಾಗಿ ಧಾರ್ಮಿಕ ಸಮುದಾಯಗಳನ್ನು ಮತ ಬ್ಯಾಂಕ್‌ಗಳನ್ನಾಗಿ ಪರಿವರ್ತಿಸಿರುವುದು ಕೋಮು ಅಸಹಿಷ್ಣುತೆಗೆ ಎಡೆಮಾಡಿಕೊಟ್ಟಿದೆ. ಹೀಗಾಗಿ ಹಿಂದೂಗಳನ್ನು ಭಾವನಾತ್ಮಕವಾಗಿ ಸೆಳೆಯುತ್ತ, ಮುಸ್ಲಿಮರಿಗೆ ವಿರುದ್ಧವಾಗಿ ಹಿಂದೂಗಳನ್ನು ಎತ್ತಿಕಟ್ಟುವ ಕೆಲಸವು ಅತ್ಯಂತ ವೇಗವಾಗಿ ಜರುಗುತ್ತಿದೆ. ಗೋಧ್ರಾ ನರಮೇಧ ಪ್ರಕರಣದಲ್ಲಿ ಪ್ರಭುತ್ವದ ಕೈವಾಡವು ಕಂಡುಬಂದಿತ್ತು. ಮಂಡಲ್ ವರದಿಯ ಜಾರಿಗೆ ಸಂದರ್ಭದಲ್ಲಿ ಬಾಬ್ರಿ ಮಸೀದಿಯ ಪ್ರಕರಣ ತಲೆದೋರಿತು. ಸಾಮಾನ್ಯವಾಗಿ ಕೆಲವು ರಾಜಕೀಯ ಪಕ್ಷಗಳು ಕೋಮುವಾದವನ್ನು ತಮ್ಮ ಸ್ವಾರ್ಥಕ್ಕೆ ಸೃಷ್ಟಿ ಮಾಡಿವೆ. ಈ ಧಾರ್ಮಿಕ ಅಸಹಿಷ್ಣುತೆಗೆ ಮತ್ತೊಂದು ಕಾರಣವಿದೆ. ಅಂಬೇಡ್ಕರ್ ಅವರ ಪ್ರಭಾವದಿಂದ ದಲಿತರು ಬೌದ್ಧ ಧರ್ಮಕ್ಕೆ ಮತಾಂತರ ಆಗುವುದು ಕಂಡುಬರುತ್ತಿದೆ. ಪ್ರತ್ಯೇಕ ಲಿಂಗಾಯತ ಧರ್ಮದ ಪ್ರಭಾವಗಳೆಲ್ಲ ಹಿಂದುತ್ವವನ್ನು ಪ್ರಶ್ನಿಸುತ್ತಿವೆ. ಇಂತಹ ಘಟನೆಗಳು ಮೂಲಭೂತವಾದಿಗಳ ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಯಜಮಾನಿಕೆಗೆ ಭಾರೀ ಪೆಟ್ಟು ಕೊಡುತ್ತಿರುವ ಕಾರಣ, ಬುದ್ಧ ಮತ್ತು ಬಸವಣ್ಣನ ಧಾರ್ಮಿಕ ಚಿಂತನೆಗಳ ಪೆಟ್ಟುಗಳಿಂದ ಹಿಂದುತ್ವವನ್ನು ಉಳಿಸಿಕೊಂಡಂತೆ ಪ್ರಸ್ತುತ ದಿನಮಾನಗಳಲ್ಲೂ ಸಹ ಹಿಂದುತ್ವವನ್ನು ಒಟ್ಟುಗೂಡಿಸುವ ಒತ್ತಡ ಮೂಲಭೂತವಾದಿಗಳ ಮೇಲೆ ಇದೆ. ಈ ಕಾರಣಕ್ಕಾಗಿ ಧಾರ್ಮಿಕ ಸಮುದಾಯಗಳನ್ನು ಭಾವನಾತ್ಮಕವಾಗಿ ಸೆಳೆದು ಅನ್ಯಧರ್ಮಿಯರನ್ನು ವಿರೋಧಿಗಳಂತೆ ಚಿತ್ರಿಸಲಾಗುತ್ತಿದೆ. ಈ ಮೂಲಕ ತಮ್ಮ ಸ್ಥಾನವನ್ನು ಉಳಿಸಿಕೊಳ್ಳುವ ಉದ್ದೇಶ ಅದರಲ್ಲಿ ಅಡಗಿದೆ. ಇವುಗಳ ಭಾಗವಾಗಿ ಧಾರ್ಮಿಕ ಅಲ್ಪಸಂಖ್ಯಾತರ ಮೇಲೆ  ಮಾಡುತ್ತಿರುವ ಆರೋಪಗಳನ್ನು ಈ ಕೆಳಗಿನಂತೆ  ಗಮನಿಸಬಹುದು.

ಮುಸ್ಲಿಮರು ಮೂಲತಃ ಭಾರತೀಯರಲ್ಲ ಹಾಗೂ ಅವರಿಗೆ ಈ ನೆಲದ ಮೇಲೆ ದೇಶಭಕ್ತಿ ಇಲ್ಲವೆಂದು ಅನುಮಾನ ವ್ಯಕ್ತಪಡಿಸುವುದು ಮೊದಲನೆಯ ಆರೋಪವಾಗಿದೆ. ಚರಿತ್ರೆಯಲ್ಲಿ ಮುಸ್ಲಿಂ ದೊರೆಗಳು ಹಿಂದೂಗಳನ್ನು ಶೋಷಣೆ ಮಾಡಿದ್ದು, ಗೋವು ಅವರ ಆಹಾರವಾಗಿದೆ ಎನ್ನುವುದು ಎರಡನೆಯ ಆರೋಪವಾಗಿದೆ. ಇವುಗಳೆಲ್ಲದರ ಜೊತೆಗೆ ಮುಸ್ಲಿಮರೆಲ್ಲಾ ಭಯೋತ್ಪಾದಕರು ಎಂದು ಸಾರ್ವತ್ರಿಕರಿಸುವುದು. ಮೂರನೆಯ ಆರೋಪವಾಗಿದೆ. ಈ ಆರೋಪಗಳೇ ಇಂದು ಬಹುತೇಕ ಸಾರ್ವಜನಿಕ ಅಭಿಪ್ರಾಯದಲ್ಲಿ ಪ್ರತಿಧ್ವನಿಸುತ್ತಿವೆ. ಯಾವುದೇ ಧರ್ಮದ ಮೇಲೆ ಮಾಡುವ ಆರೋಪಗಳು ಅಥವಾ ಅಭಿಪ್ರಾಯಗಳು ಜನಸಾಮಾನ್ಯರ ನಡುವಿನಿಂದ ಬಂದಿರುವಂತಹವುಗಳಲ್ಲ. ಅವು ಸಾಮಾಜಿಕ,

ಆರ್ಥಿಕ, ರಾಜಕೀಯ ಲಾಭಗಳಿಂದ ಕೆಲವು ಮತಾಂಧರಿಂದ ಸೃಷ್ಟಿಯಾಗುವಂತಹವು. ಕೆಲವು ಮತಾಂಧರು ಮಾಡುವ ತಪ್ಪು ಕೆಲಸಗಳನ್ನು ಇಡೀ ಸಮುದಾಯದ ಜನರಿಗೆ ಅನ್ವಯಿಸುವುದರಿಂದ ಅಮಾಯಕರು, ನಿರಪರಾಧಿಗಳೆಲ್ಲರೂ ಪರಕೀಯತೆಯನ್ನು ಅನುಭವಿಸುವುದು ಕಂಡುಬರುತ್ತದೆ. ಈ ಪರಕೀಯತೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ 'ಧಾರ್ಮಿಕ ಅಸ್ಪೃಶ್ಯತೆ' ಎಂಬ ಅರ್ಥದಲ್ಲಿ ಬಳಸಲಾಗಿದೆ. ದಲಿತರನ್ನು ಹೇಗೆ ಜಾತಿ ಕಾರಣಕ್ಕಾಗಿ ದೂರ ನಿಲ್ಲಿಸುವ ಹಾಗೂ ನಿಂದಿಸುವ ಸಂಗತಿಗಳು ಕಂಡುಬರುತ್ತವೆಯೋ, ಆ ಪ್ರಮಾಣದಲ್ಲಿ ಅಲ್ಲದೇ ಇದ್ದರೂ ಧಾರ್ಮಿಕ ಮೂಲಭೂತವಾದಿಗಳು ಇತರೆ ಧರ್ಮೀಯರನ್ನು ದೂಷಿಸುವ ಸಂಗತಿಗಳನ್ನು ಕಾಣುತ್ತೇವೆ. ಆತ್ಮಕಥೆಗಳಲ್ಲಿ ಕಂಡುಬರುವ ಇಂತಹ ಸನ್ನಿವೇಶಗಳನ್ನು ಬಳಸಿಕೊಂಡು ವಿಮರ್ಶಾತ್ಮಕ ಅಧ್ಯಯನ ಮಾಡಲಾಗುತ್ತದೆ.

'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಎಂಬ ಆತ್ಮಕಥೆಯಲ್ಲಿ ಸಂವಿಧಾನ ಬದ್ಧವಾಗಿ ನೇಮಕವಾದ ಅಧಿಕಾರಿಗಳೇ ನಿರಪರಾಧಿಯಾದ ವ್ಯಕ್ತಿಯನ್ನು ಭಯೋತ್ಪಾದಕನಂತೆ ಆರೋಪಿಸಿ ಶಿಕ್ಷಿಸುವುದು, ಪ್ರಜಾಪ್ರಭುತ್ವ ಮತ್ತು ಸಂವಿಧಾನದ ಆಶಯಗಳು ಅಪಾಯದ ಕಡೆ ಚಲಿಸುವ ಸೂಚನೆಯಾಗಿದೆ. ಕೋಮುವಾದವು ಸೃಷ್ಟಿಯಾಗುವುದರ ಹಿಂದೆ ಆರ್ಥಿಕ, ಸಾಮಾಜಿಕ ಕಾರಣಗಳಿರುತ್ತವೆ. ಇತ್ತೀಚಿನ ದಿನಗಳಲ್ಲಿ ಕೋಮುವಾದವು ವ್ಯಾಪಾರ, ಕೃಷಿ, ಮೀನುಗಾರಿಕೆ ಮುಂತಾದ ಆರ್ಥಿಕ ವಲಯಗಳನ್ನೂ ಆವರಿಸಿ ಉದ್ಯೋಗ ಅವಕಾಶಗಳ ಮೇಲೆ ಪ್ರಭಾವ ಬೀರಿದೆ. ಉದ್ಯೋಗ ಕ್ಷೇತ್ರದಲ್ಲೂ ಕೋಮುವಾದ ಸೃಷ್ಟಿಯಾಗಿ ಮುಸ್ಲಿಂ ಯುವಕರಿಗೆ ಸ್ಥಳೀಯವಾಗಿ ಉದ್ಯೋಗದ ಅವಕಾಶ ಸಿಗದೆ ಹೋದಾಗ, ಕೊಲ್ಲಿ ರಾಷ್ಟ್ರಗಳತ್ತ ಮುಖಮಾಡುವಂತಹ ಸನ್ನಿವೇಶಗಳು ನಿರ್ಮಾಣವಾಗಿವೆ. ಹಿಂದುತ್ವವಾದಿ ಶಕ್ತಿಗಳು ಬೆಳೆದು ಆಕ್ರಮಣಕಾರಿಯಾಗುತ್ತ ಹೋದಂತೆ ಮುಸ್ಲಿಂ ಮೂಲಭೂತವಾದಿ ಶಕ್ತಿಗಳು ಕೂಡ ಇದನ್ನು ಎದುರಿಸುವ ಉದ್ದೇಶದಿಂದ ಬೆಳೆಯತೊಡಗಿವೆ. ಜಾತ್ಯತೀತ, ಪ್ರಗತಿಪರ ರಾಜಕೀಯ ಪಕ್ಷಗಳಿಂದ ತಮಗೆ ರಕ್ಷಣೆ ದೊರೆಯದು ಎಂಬ ಅಭಿಪ್ರಾಯ ಬೆಳೆದು ಅಲ್ಪಸಂಖ್ಯಾತರು ಕೂಡ ಕೋಮುವಾದಿ ರಾಜಕೀಯದ ಆಶ್ರಯ ಪಡೆದು ಸಮಸ್ಯೆಯನ್ನು, ಎದುರಿಸಬೇಕೆಂದು ಕೆಲವರು ಸಂಘಟಿತರಾಗುತ್ತಿರುವರು. ಇದರಿಂದ ಎರಡೂ ಕಡೆಯು ಕೋಮುವಾದಿ ಮನೋಭಾವನೆಯುಂಟಾಗಿ ಅಮಾಯಕರು ಅವಮಾನಕ್ಕೆ ಒಳಗಾಗುತ್ತಾ ಬಲಿಯಾಗುತ್ತಿದ್ದಾರೆ.

ಹೀಗೆ ಒಂದು ಧರ್ಮದ ನೆಲೆಯಲ್ಲಿ ಬರುವ ಅಭಿಪ್ರಾಯಗಳು ಮತ್ತೊಂದು ಧರ್ಮದವರನ್ನು ಅನ್ಯ ಮನಸ್ಕರನ್ನಾಗುವಂತೆ ಮಾಡುತ್ತವೆ. ಮುಸ್ಲಿಮರಿಗೆ ಹೋಲಿಸಿದರೆ ಕ್ರೈಸ್ತರು ಪರಕೀಯತೆಯನ್ನು ಅನುಭವಿಸುವುದು ಕಡಿಮೆ. ಆದರೆ ಮತಾಂತರ ಮಾಡುತ್ತಾರೆಂಬ ಆರೋಪ ಅವರ ಮೇಲಿದೆ. ಅವರ ಮೇಲೂ ಹಲ್ಲೆ ಮಾಡುವ ಕೆಲವು ಘಟನೆಗಳು ನಡೆದರೂ ಅವು ಕಡಿಮೆ ಪ್ರಮಾಣದಲ್ಲಿವೆ. ಮುಸ್ಲಿಂ ಸಮುದಾಯದ ಮೇಲೆ ಆರೋಪಗಳನ್ನು ಹೊರೆಸಿದಷ್ಟು ಸುಲಭವಾಗಿ ಕ್ರೈಸ್ತರ ಮೇಲೆ

ಹೊರಿಸಲು ಬರುವುದಿಲ್ಲ. ಶಿಕ್ಷಿತರು, ಕಾನೂನಿನ ಅರಿವುಳ್ಳ, ಅಲ್ಪಮಟ್ಟಿನ ಸುಧಾರಣೆಗಳನ್ನು ಮಾಡಿರುವ ಹಾಗೂ ಜಾಗತಿಕ ಮಟ್ಟದಲ್ಲಿ ದೊಡ್ಡ ಬಂಡವಾಳಶಾಹಿಗಳಾಗಿರುವ ಕ್ರೈಸ್ತ ಸಮುದಾಯದ ಮೇಲಿನ ದಬ್ಬಾಳಿಕೆ ಸುಲಭವಾದದ್ದಲ್ಲ. ಯಾರೂ ಹುಟ್ಟುವಾಗ ಇದೇ ಧರ್ಮದಲ್ಲಿ ಹುಟ್ಟಬೇಕೆಂದು ಅರ್ಜಿ ಹಾಕಿಕೊಂಡು ಹುಟ್ಟಿರುವುದಿಲ್ಲ. ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬರು ಭಾರತೀಯರೇ ಆಗಿರುತ್ತಾರೆ. ಅವರನ್ನು ಧರ್ಮದ ಆಧಾರದಲ್ಲಿ ಭಾರತೀಯರಲ್ಲವೆಂದು ಹೇಳುವುದು, ಶಂಕೆ ಪಡುವುದು ಹಾಗೂ ಕಾಶ್ಮೀರದಲ್ಲಿ ಅಲ್ಪಸಂಖ್ಯಾತರಾದ ಪಂಡಿತರನ್ನು ಮುಸ್ಲಿಂ ಮೂಲಭೂತವಾದಿಗಳು ಭಯಗೊಳಿಸಿ ಪಲಾಯನವಾಗುವಂತೆ ಮಾಡುವುದು ಕೂಡ ಅವರೆಲ್ಲರಿಗೂ ಮಾಡುವ ಅವಮಾನವಾಗಿದೆ. ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ಆರೋಪದ, ಶಂಕೆಯ, ಅನುಮಾನದ ಪರಕೀಯತೆಯು ಆತ್ಮ ನಿವೇದನಾತ್ಮಕ ಬರಹಗಳಲ್ಲಿ ವ್ಯಕ್ತವಾಗಿವೆ.

ಮೇಲಿನ ಅವಮಾನಗಳು ಇತರೆ ಧರ್ಮದವರಿಂದಾದರೆ ಈಗ ಹೇಳುವ ಅವಮಾನಗಳು ಸ್ವಧರ್ಮಿಯರಿಂದಲೇ ಆಗುವಂತಹವು. ಒಂದೇ ಧರ್ಮದೊಳಗೆ ಇರುವ ಒಳ ಪಂಗಡಗಳೊಳಗಿನ ಶ್ರೇಣೀಕರಣ ಕೂಡ ಅವಮಾನಗಳಿಗೆ ಕಾರಣವಾಗುತ್ತವೆ. ಹಿಂದೂ ಧರ್ಮದೊಳಗಿನ ಜಾತಿ ವ್ಯವಸ್ಥೆಯಿಂದ ಹಲವಾರು ಸಮುದಾಯಗಳು ಧರ್ಮ ಒಂದೇ ಆದರೂ ಅವಮಾನಗಳನ್ನು ಅನುಭವಿಸುವುದನ್ನು ಕಾಣಬಹುದು. ಇಂತಹ ಸಂಗತಿಗಳ ಕುರಿತು ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಮುಸ್ಲಿಂ, ಕ್ರೈಸ್ತ, ಧರ್ಮದೊಳಗಿನ ಶ್ರೇಣೀಕರಣಗಳು ಮತ್ತು ಅವುಗಳಿಂದ ಉಂಟಾಗುವ ಅವಮಾನ ಮತ್ತು ಪ್ರತಿರೋಧಗಳ ಕುರಿತು ಆತ್ಮಕಥೆಗಳ ಮೂಲಕ ಚರ್ಚಿಸಲಾಗುವುದು. ಮುಸ್ಲಿಂ ಧರ್ಮದವರೆಂದು ಕರೆಯಲಾಗುವ ಆದರೆ ವೃತ್ತಿಯ ಹಿನ್ನೆಲೆ ಹೊಂದಿರುವ ಪಿಂಜಾರ, ನದಾಫ ಹಾಗೂ ಬಾಗವಾನರು ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವಿನ ಸೇತುವೆಯಂತಿದ್ದಾರೆ. ನಿಷ್ಠ ಮುಸ್ಲಿಮರು ಇವರನ್ನು ಸಂಪೂರ್ಣವಾಗಿ ತಮ್ಮವರೆಂದು ಒಪ್ಪಿಕೊಂಡಿಲ್ಲ. ಪಿಂಜಾರರಿಗೆ ಹೆಣ್ಣು ಕೊಡದಿರುವುದು, ಅವರನ್ನು ಅನ್ಯರಂತೆ ಕಾಣುವುದು  ನಡೆಯುತ್ತಿದೆ. ಒಂದು ವೇಳೆ ಪಿಂಜಾರರು ಆರ್ಥಿಕವಾಗಿ ಸಬಲರಾಗಿದ್ದು ಸಂಪೂರ್ಣ ಇಸ್ಲಾಮೀಕರಣಕ್ಕೆ ಒಳಗಾದರೆ ಮಾತ್ರ (ಗಡ್ಡ ಬಿಡುವುದು, ಪ್ರಾರ್ಥನೆ ಮಾಡುವುದು, ಉರ್ದು ಮಾತನಾಡುವುದು) ತಮ್ಮವರಂತೆ ನಡೆಸಿಕೊಳ್ಳುವ, ಹೆಣ್ಣು ಕೊಡುವ ವಿದ್ಯಮಾನ ಕಾಣಸಿಗುತ್ತವೆ. ಸಾಮಾನ್ಯವಾಗಿ ಯಾವುದೇ ಧರ್ಮ ಮತ್ತು ಜಾತಿಯ ಮಹಿಳೆಯರೇ ಇರಲಿ, ಅವರು ಒಂದಲ್ಲಾ ಒಂದು ಕಾರಣಕ್ಕೆ ಅವಮಾನಗಳನ್ನು ಅನುಭವಿಸಿರುತ್ತಾರೆ. ಆದರೂ ಇತರೆ ಧರ್ಮಗಳಿಗೆ ಹೋಲಿಸಿದರೆ ಮುಸ್ಲಿಂ ಧರ್ಮದಲ್ಲಿ ಮಹಿಳೆಯರು ತಲಾಖ್, ಪರದಾ ಪದ್ಧತಿ ಹಾಗೂ ಇನ್ನಿತರ ಪದ್ಧತಿಗಳ ಮೂಲಕ ಅವಮಾನಗಳನ್ನು ಇಂದಿಗೂ ಅನುಭವಿಸುತ್ತಿದ್ದಾರೆ.

ಇತ್ತೀಚೆಗೆ ತಲಾಖ್ ಹಾಗೂ ಪರದಾ ಪದ್ಧತಿಗಳಲ್ಲಿ ಅಲ್ಪಮಟ್ಟಿಗೆ ಸುಧಾರಣೆ ಕಂಡುಬಂದಿದೆ. ಆದರೂ ಇನ್ನೂ ಮಹಿಳೆಯರ ಮೇಲಿನ ನಿರ್ಬಂಧಗಳು ಸಂಪೂರ್ಣವಾಗಿ ಸಡಿಲಗೊಂಡಿಲ್ಲ.

ಇನ್ನೂ ಕೆಲವು ಅವಮಾನಗಳು ಸ್ವಧರ್ಮದಲ್ಲಿರುವ ಮೂಢನಂಬಿಕೆಗಳನ್ನು ವಿಮರ್ಶೆ ಮಾಡುವುದರಿಂದ ಆಗುವಂತಹವು. ಮುಸ್ಲಿಂ ಧರ್ಮದಲ್ಲಿನ ತಲಾಖ್ ಹಾಗೂ ಇತರೆ ಸಮಸ್ಯೆಗಳನ್ನು ವಿಮರ್ಶೆ ಮಾಡಿದ್ದಕ್ಕಾಗಿ ಸ್ವಧರ್ಮಿಯರಿಂದಲೇ ಧರ್ಮ ಭ್ರಷ್ಟರೆನಿಸಿಕೊಳ್ಳುವುದು ಕೂಡ ಒಂದು ತರಹದ ಪರಕೀಯತೆಯನ್ನು ಸೃಷ್ಟಿ ಮಾಡುತ್ತದೆ. ಬೊಳುವಾರು ಮಹಮದ್ ಕುಂಞ ಅವರು ಮುಸ್ಲಿಂ ಧರ್ಮದಲ್ಲಿನ ಮೂಲಭೂತವಾದಗಳನ್ನು ವಿಮರ್ಶಿಸಿದ್ದಕ್ಕಾಗಿ ತನ್ನ ತಾಯಿಯನ್ನು ಮಣ್ಣು ಮಾಡಲು ಸ್ವಧರ್ಮಿಯರೇ ಜಾಗ ನೀಡದೆ, ಮತ್ತೂರಲ್ಲಿ ಕಲ್ಲು ತೂರಿದ್ದರ ಬಗ್ಗೆ ಬರೆಯುತ್ತಾರೆ. ಇಲ್ಲಿ ಅನ್ಯ ಧರ್ಮಿಯರಿಂದಲೂ ಅವಮಾನಕ್ಕೆ ಒಳಗಾಗಿ ಸ್ವಧರ್ಮಿಯರಿಂದಲೂ ಸ್ವೀಕಾರಗೊಳ್ಳದೆ ಪರಕೀಯತೆಯನ್ನು ಅನುಭವಿಸುತ್ತಾರೆ.

ಹಿಂದೂ ಧರ್ಮದಲ್ಲಿರುವಂತೆ ಕ್ರೈಸ್ತ ಧರ್ಮದೊಳಗೂ ಆಂತರಿಕ ಶ್ರೇಣೀಕರಣ ವ್ಯವಸ್ಥೆ ಇದೆ. ಕ್ರೈಸ್ತ ಧರ್ಮದೊಳಗೆ ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟಂಟ್‌ನವರ ಮಧ್ಯೆಯೇ ಹಲವಾರು ಅಂತರಗಳಿವೆ. ಇದಷ್ಟೇ ಅಲ್ಲದೆ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಮೇಲ್ಜಾತಿಯವರಿಗೂ ಮತ್ತು ತಳ ಸಮುದಾಯದವರ ನಡುವೆಯೂ ಹಲವು ತರತಮಗಳಿವೆ. ಹಿಂದೂ ಧರ್ಮದಲ್ಲಿನ ಜಾತಿ ಅಸಮಾನತೆಯ ಪ್ರಭಾವವು ಕ್ರೈಸ್ತ ಮತದಲ್ಲಿಯೂ ಮುಂದುವರಿಯುವುದನ್ನು 'ತಾಳೇಗರಿ'ಯಲ್ಲಿ ಕಾಣಬಹುದು. ಭಾರತೀಯ ಸಮಾಜದಲ್ಲಿ ಭಾಷಿಕ ಅವಮಾನಗಳು ಕಂಡುಬರುತ್ತವೆ. ಇವು ಮೇಲ್ನೋಟಕ್ಕೆ ಭಾಷಿಕ ಅವಮಾನಗಳಷ್ಟೇ ಆಗದೆ, ಸಾಮುದಾಯಿಕ ಹಿನ್ನೆಲೆಯನ್ನು ಹೊಂದಿವೆ. ಕನ್ನಡ ಭಾಷಿಕ ಕ್ರೈಸ್ತರನ್ನು ಕಂಡರೆ ತಮಿಳು ಕ್ರೈಸ್ತರು ಸಹಿಸದೆ ಇರುವುದನ್ನು ಗಮನಿಸಬಹುದು. ಇಲ್ಲಿ ಕನ್ನಡ ಕ್ರೈಸ್ತರನ್ನು ಅವಮಾನಗೊಳಿಸುವುದು ಎಂದರೆ, ಮತಾಂತರಗೊಂಡ ದಲಿತರನ್ನು ಅವಮಾನಿಸುವುದೇ ಆಗಿದೆ. ಮುಸ್ಲಿಮರು ಕನ್ನಡ ಭಾಷೆ ಮಾತಾಡುವುದನ್ನು ಕೆಲವರು ಆಶ್ಚರ್ಯ ಪಡುವುದು, ಅದೇ ಕಾಲಕ್ಕೆ ಕನ್ನಡ ಮಾತಾಡುವ ಮುಸ್ಲಿಮರನ್ನು, ಸ್ವಧರ್ಮಿಯರೇ ಕಾಫೀರ್‌ರೆಂದು ಅವಮಾನಗೊಳಿಸುವುದು; ಮುಸ್ಲಿಮರು ಕನ್ನಡಿಗರಲ್ಲವೆಂಬ ಹಾಗೂ ಕನ್ನಡ ಮಾತಾಡಬಾರದೆಂಬ ಎರಡೂ ಧೋರಣೆಗಳನ್ನು ಸೂಚಿಸುತ್ತಿವೆ. ಭಾರತದಲ್ಲಿ ಹಿಂದೂಗಳು ಬಹುಸಂಖ್ಯಾತರಾದರೂ ಇತರೆ ಧರ್ಮಿಯರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಪರಕೀಯತೆ ಅನುಭವಿಸಿರುವ ಸಾಧ್ಯತೆಗಳಿವೆ. ಮೊಹಿದೀನ್ ಅವರ 'ನನ್ನೊಳಗಿನ ನಾನು' ಆತ್ಮಕಥೆಯಲ್ಲಿ ಮುಲ್ಲಾಗಳು ಹಿಂದೂಗಳ ಬಗ್ಗೆ ಹೊಂದಿರುವ ಅಸಹನೆಯನ್ನು ಉದಾಹರಣೆಯಾಗಿ ನೋಡಬಹುದು. ಆದರೂ ಇಂತಹ ಉಲ್ಲೇಖಗಳು ಹೆಚ್ಚು ಕಾಣುವುದಿಲ್ಲ. ಹಿಂದೂ ಧರ್ಮದ ಕೆಲವರು ಮಾತ್ರ ಹಿಂದೂಸ್ಥಾನದಲ್ಲಿ ದೇವಸ್ಥಾನಗಳನ್ನು ನಿರ್ಮಿಸಲು, ಆಚರಣೆಗಳನ್ನು ಮಾಡಲು ಹಾಗೂ ಇತರ ಸಂಗತಿಗಳಿಗೆ ನಾವು ಪರಕೀಯರಾಗಿದ್ದೇವೆ ಎಂಬ ಆರೋಪ ಮಾಡುತ್ತಿದ್ದರೂ, ಇದು ಕೆಲವು ಮತಾಂಧರ ಆಶಯವಾಗಿದೆಯೇ ಹೊರತು ಜನಸಾಮಾನ್ಯರ ಅಭಿಪ್ರಾಯ ಆಗಿರುವುದಿಲ್ಲ.

ಮತೀಯವಾದಗಳನ್ನು ಮೀರಿದ ಧಾರ್ಮಿಕ ಮತ್ತು ಸಾಮಾಜಿಕ ಐಕ್ಯತೆಯನ್ನು ಹೇಳುವ ಸೂಫಿ ಹಾಗೂ ತತ್ವಪದಗಳು ಕನ್ನಡ ಸಾಹಿತ್ಯದಲ್ಲಿ ರಚನೆಗೊಂಡಿವೆ. ಸ್ವಾಮಿ ವಿವೇಕಾನಂದರು ಅಮೆರಿಕಾದಲ್ಲಿ ಸೇರಿದ್ದ ಇತರೆ ಧರ್ಮದವರನ್ನುದ್ದೇಶಿಸಿ 'ನನ್ನ ಸೋದರ, ಸೋದರಿಯರೆ' ಎಂದು ಹೇಳಿರುವುದು ಐತಿಹಾಸಿಕ ಸಂಗತಿಯಾಗಿದೆ. ಇದು ಧಾರ್ಮಿಕ ಮೂಲಭೂತವಾದಕ್ಕೆ ನೀಡಿದ ಆಧ್ಯಾತ್ಮಿಕ ಪ್ರತಿರೋಧವೂ ಆಗಿವೆ. ಇಷ್ಟೆಲ್ಲವುಗಳ ನಡುವೆಯೂ ಭಾರತದಲ್ಲಿ ಧಾರ್ಮಿಕ ಪರಕೀಯತೆಯು ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ. ಈ ಪರಕೀಯತೆಯಿಂದಾಗುವ ಅವಮಾನಗಳನ್ನು ಈ ಕೆಳಗಿನಂತೆ ಉಪ ಅಧ್ಯಾಯಗಳನ್ನಾಗಿ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

**ಅ. ಧರ್ಮಾಧಾರಿತ ಪರಕೀಯತೆಯಿಂದ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:**

ಈ ಹಿಂದೆ ಚರ್ಚಿಸಿದಂತೆ ಕೆಲವು ಮೂಲಭೂತವಾದಿಗಳ ಧೋರಣೆಗಳಿಂದ ಮುಸ್ಲಿಮರು ಭಾರತೀಯರಲ್ಲ ಎಂಬ ಆರೋಪಕ್ಕೆ ಒಳಗಾಗುತ್ತಿದ್ದರೆ, ಮುಸ್ಲಿಮರೇ ಬಹುಸಂಖ್ಯಾತರಾಗಿರುವ ಪ್ರದೇಶಗಳಲ್ಲಿ ಹಿಂದೂಗಳು ಪರಕೀಯತೆಯನ್ನು ಅನುಭವಿಸುವ ಸಾಧ್ಯತೆಗಳಿರುತ್ತವೆ. ಮುಸ್ಲಿಮರು ತಮ್ಮ ದೇಶಾಭಿಮಾನವನ್ನು ಪ್ರದರ್ಶನ ಮಾಡಬೇಕಾದ ಅನಿವಾರ್ಯತೆಗಳಿವೆ. ಈ ಕಾರಣಕ್ಕಾಗಿಯೇ ಪೀರ್‌ಬಾಷ ಅವರ 'ಅಕ್ಕ ಸೀತಾ ನಿನ್ನಂತೆ ನಾನು ಶಂಕಿತ', ರಂಜಾನ್ ದರ್ಗಾ ಅವರ, 'ಪರಕೀಯತೆ', ಮೊಹಿದೀನ್ ಅವರ 'ನನ್ನೊಳಗಿನ ನಾನು', ಸನಾವುಲ್ಲಾ ಅವರ 'ನಾನು ನಿಮ್ಮವನೆ' ಎಂಬ ಆತ್ಮನಿವೇದನಾತ್ಮಕ ಬರಹಗಳು ಇವ ನಮ್ಮವ ಎಂದು ಒಪ್ಪಿಕೊಳ್ಳದ ಈ ವ್ಯವಸ್ಥೆಯನ್ನು ಪ್ರಶ್ನಿಸುತ್ತಾ, ಅಪಮಾನಗಳನ್ನು ಮೀರುವ ಪ್ರತಿರೋಧಗಳನ್ನು ತೋರುತ್ತವೆ.

**ಆ. ಸ್ವಧರ್ಮಿಯರಿಂದಲೇ ಆಗುವಂತಹ ಅವಮಾನ ಮತ್ತು ಪ್ರತಿರೋಧ**

ಹಿಂದೂ ಧರ್ಮದಲ್ಲಿರುವಂತೆ ಮುಸ್ಲಿಂ, ಕ್ರೈಸ್ತ ಧರ್ಮದಲ್ಲೂ ಹಲವು ತರತಮಗಳಿವೆ. ಅವು ಹಲವಾರು ಅವಮಾನಗಳಿಗೆ ಕಾರಣವಾಗಿವೆ. ಧಾರ್ಮಿಕ ಮೂಲಭೂತವಾದವನ್ನು ಖಂಡಿಸುವವರನ್ನು ಸ್ವ ಧರ್ಮಿಯರೂ ಸಹ ದೂರ ಇಡುವ ಪ್ರಸಂಗಗಳು ಕಂಡುಬರುತ್ತವೆ. ಈ ದೂರ ಇಡುವ ಪ್ರಕ್ರಿಯೆಯೇ ಅವಮಾನವಾಗಿದ್ದು ಇಂತಹ ಮೂಲಭೂತವಾದವನ್ನು ಸಾಹಿತ್ಯದ ಮೂಲಕ ವಿಮರ್ಶಿಸುತ್ತಲೇ ಬಂದಿರುವುದು ಪ್ರತಿರೋಧವೇ ಆಗಿದೆ. ಎಂ.ಡಿ.ಗೋಗೇರಿಯವರ 'ಹಬ್ಬಿದ ಹೂಬಳ್ಳಿ' ಆತ್ಮಕಥೆಯು ಇದಕ್ಕೆ ಉದಾಹರಣೆಯಾಗಿದೆ. ಇದರೊಂದಿಗೆ ಧರ್ಮದೊಳಗಿನ ಶ್ರೇಣೀಕರಣಗಳು ಸಹ ಹಲವು ಅವಮಾನ ಮತ್ತು ಪ್ರತಿರೋಧಗಳಿಗೆ ಕಾರಣಗಳಾಗಿವೆ.

**ಇ. ಅಭಿವ್ಯಕ್ತಿ ಸ್ವರೂಪ**

ಪ್ರಸ್ತುತ ಅಧ್ಯಯನದಲ್ಲಿ ಕನ್ನಡದಲ್ಲಿ ಮುಸ್ಲಿಂ ಮತ್ತು ಕ್ರೈಸ್ತರ ಆತ್ಮಕಥೆಗಳು ಅಲ್ಪ ಪ್ರಮಾಣದಲ್ಲಿ ಇರುವ ಕಾರಣ, ಲಭ್ಯವಿರುವ ಆತ್ಮಕಥೆಗಳ ಜೊತೆಗೆ ಇತರೆ ಸಾಹಿತ್ಯ ಪ್ರಕಾರದಲ್ಲಿರುವ ಆತ್ಮನಿವೇದನಾತ್ಮಕ

ಬರಹಗಳನ್ನು ಪೂರಕವಾಗಿ ತೆಗೆದುಕೊಂಡು ಆಕರಗಳಲ್ಲಿರುವ ವಿಶಿಷ್ಟತೆಗಳನ್ನು ಮತ್ತು ಅಭಿವ್ಯಕ್ತಿ ಶೈಲಿಯನ್ನು ವಿಶ್ಲೇಷಣೆ ಮಾಡಲಾಗುತ್ತದೆ.

**೭.೧. ಧರ್ಮಾಧಾರಿತ ಪರಕೀಯತೆಗಳಿಂದ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು:**

ಪ್ರಸ್ತುತ ಅಧ್ಯಾಯವು ಧರ್ಮವನ್ನು ಸೀಮಿತ ಅರ್ಥದಲ್ಲಿ ಬಳಸಿಕೊಂಡು ಹಲವಾರು ತರತಮಗಳನ್ನು ಸೃಷ್ಟಿಸುವುದರ ಮೂಲಕ ಮಾಡುವಂತಹ ಆರೋಪಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ. ಭಾರತ ದೇಶದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ಕೆಲವು ಮೂಲಭೂತವಾದಿಗಳಿಂದ ಧಾರ್ಮಿಕ ಸಮುದಾಯಗಳ ನಡುವೆ ಹಲವು ಸಂಘರ್ಷಗಳು ಸುಮಾರು ವರ್ಷಗಳಿಂದ ನಡೆಯುತ್ತಲೇ ಬಂದಿವೆ. ಎರಡೂ ಧರ್ಮಿಯರಲ್ಲಿ ಈ ಮನೋಭಾವನೆಯು ಏಕಾಏಕಿ ಬಂದಿರುವುದಲ್ಲ, ಬರುವಂತೆ ಮಾಡಿರುವುದು.

೭.೧.೧. ಧಾರ್ಮಿಕ ಅಸ್ಪೃಶ್ಯತೆಗಳು ಮತ್ತು ಅವಮಾನ : ಜಾತಿ ವ್ಯವಸ್ಥೆಯ ವ್ಯಾಪ್ತಿಯಲ್ಲಿ ಮುಸ್ಲಿಂ ಧರ್ಮವು ಸೇರಿಕೊಂಡು ಧಾರ್ಮಿಕ ಅಸ್ಪೃಶ್ಯತೆಗೆ ಒಳಗಾಗುವುದನ್ನು, ರಂಜಾನ್ ದರ್ಗಾ ಅವರ 'ನನ್ನ ಪರಿಸರ ಮತ್ತು ಕಾವ್ಯ' ಹಾಗೂ ಸಾರಾ ಅಬೂಬಕ್ಕರ್ ಅವರ 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಎಂಬ ಆತ್ಮಕಥನಾತ್ಮಕ ಬರಹಗಳಲ್ಲಿ ಗಮನಿಸಬಹುದಾಗಿದೆ.

ಅ. "ಹಿಂದೂಗಳು ಬಡ ಮುಸ್ಲಿಮರನ್ನು ಅನೇಕ ಪ್ರಸಂಗಗಳಲ್ಲಿ ಹರಿಜನರನ್ನು ನೋಡುವಂತೆಯೆ ನೋಡುವ ಹಳ್ಳಿಯ ಪರಿಸರದಲ್ಲಿ ನನ್ನ ಬಾಲ್ಯ ಕಳೆಯಿತು. ಈ ಪರಿಸರದ ತೀವ್ರವಾದ ಪರಿಣಾಮದಿಂದಾಗಿ ನನ್ನ ಬದುಕು ಉದ್ವೇಗದಲ್ಲೇ ಸಾಗಿತು. ನೆನಪುಗಳಲ್ಲಿ ಕೈ ಹಾಕಿದಾಗ ಮೊದಲು ಸಿಗುವ ನೆನಪು ಈ ಜಾತಿಯ ಕರಾಳತನಕ್ಕೆ ಸಂಬಂಧಿಸಿದುದು. ನಮ್ಮ ಮನೆಯ ಸಮೀಪದಲ್ಲಿ ಇದ್ದಂಥ ಎರಡು ಹಿಂದೂ ಹುಡುಗರು ಮತ್ತು ನಾನು ಸದಾ ಕೂಡಿ ಆಡುತ್ತಿದ್ದೆವು. ಒಂದು ದಿನ ಬೆಳಿಗ್ಗೆ ಎದ್ದೊಡನೆ ಕಣ್ಣುಜ್ಜಿಕೊಳ್ಳುತ್ತ ಅವರ ಮನೆಗಳ ಕಡೆಗೆ ಹೊರಟೆ. ಅವರೊಡನೆ ಮಾತನಾಡಿದಾಗ; ಅವರೆಲ್ಲ ಕೂಡಿ ಸವದತ್ತಿ ಎಲ್ಲಮ್ಮನ ಜಾತ್ರೆಗೆ ಹೊರಟ್ಟಿದ್ದು ಗೊತ್ತಾಯಿತು. ತೀರ ಭಯದಿಂದ ನಿಮ್ಮ ಸಂಗಾಟ ನಾನೂ ಬರ್ಲೀ? ಎಂದು ಕೇಳಿದ್ದಕ್ಕೆ ಅವರಲ್ಲೊಬ್ಬ 'ನೀ ಬಂದ್ರ ಎಲ್ಲವ್ವ ನಿನ್ನ ಮೂಗ್ ಕೊಯ್ತಾಳ್, ಯಾಕಂದ್ರ ನೀ ಮುಸಲರಂವಾ' ಎಂದು ಹೇಳಿಬಿಟ್ಟ. ಆತ ಹೇಳುವುದು ಸುಳ್ಳು ಅನ್ನಿಸಿತು. ನನ್ನ ವಿಶ್ವಕೋಶವಾಗಿದ್ದ ಅಮ್ಮನಿಗೆ ಹೋಗಿ ಕೇಳಿದಾಗ 'ಹೌದು' ಎಂದು ಹೇಳಿಬಿಡಬೇಕೆ!"[೧]

ಆ. "ರಮಜಾನ ನಮ್ಮ ಜಾತಿಯವನಾಗಿದ್ದರೆ ನಮ್ಮ ಮಗಳನ್ನೇ ಕೊಡುತ್ತಿದ್ದೆವು. ಎಂದು ಎಷ್ಟೋ ಜನ ಗೆಳೆಯರ ತಾಯಂದಿರು ಹೇಳಿದ್ದು ಇಂದೂ ಧ್ವನಿಸುತ್ತಿದೆ."[೨]

ಇ. "ಅಯ್ಯೋ, ಮುಸ್ಲಿಂ ಹುಡುಗಿ, ಮುಟ್ಟಿಸಿಕೊಳ್ಳಬೇಡ. ಎಂದು ಹೇಳಿ ದೂರ ಸರಿಯುವ ಬ್ರಾಹ್ಮಣ ಮತ್ತು ಕೊಂಕಣಿ ಹುಡುಗಿಯರು ಆಗಲೂ ನನ್ನ ತರಗತಿಯಲ್ಲಿದ್ದರು"[೩] ಎನ್ನುವ ಸನ್ನಿವೇಶವಿದೆ. ಮೇಲಿನ ಎಲ್ಲಾ ಸನ್ನಿವೇಶಗಳು ರಂಜಾನ್ ದರ್ಗಾ ಮತ್ತು ಸಾರಾ ಅಬೂಬಕ್ಕರ್ ಅವರ ಬದುಕಲ್ಲಿ ನಡೆದಿರುವ ಘಟನೆಗಳಾದರೂ ಅವು ಕೇವಲ ಅವರಿಗೆ ಸೀಮಿತವಾಗದೆ ಬಹುಪಾಲು ಮುಸ್ಲಿಮರೇ ಅನುಭವಿಸುವಂತಹ ಸಮಸ್ಯೆಗಳಾಗಿವೆ. ಮೇಲಿನ ಮೂರೂ ಸನ್ನಿವೇಶಗಳಲ್ಲಿ ಮುಸ್ಲಿಂ ಎಂಬುದು ಜಾತಿ ಎಂಬ ಅರ್ಥದಲ್ಲಿಯೇ ಬಳಕೆಯಾಗಿದೆ. ಕೋಮುವಾದ ಹೆಚ್ಚು ಪ್ರಚಾರಕ್ಕೆ ಬಾರದ ದಿನಗಳಲ್ಲಿ ಮುಸ್ಲಿಂ ಎಂಬುದು ಜಾತಿ ಎಂಬ ಅರ್ಥದಲ್ಲಿಯೇ ಬಳಕೆಯಾಗುತ್ತಿತ್ತು. ಮೊದಲ ಸನ್ನಿವೇಶದಲ್ಲಿ ಮುಸ್ಲಿಮರನ್ನು ಹರಿಜನರಿಗೆ ಹೋಲಿಸಿರುವುದು ಇದನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ. ಸಾಂಸ್ಕೃತಿಕವಾಗಿ ಇರುವ ಭಿನ್ನತೆಗಳು ಮನುಷ್ಯ ಮನುಷ್ಯನನ್ನೇ ಅವಮಾನಿಸುವಂತಹ ಮಟ್ಟಕ್ಕೆ ಹೋಗಿವೆ. ಇದೇ ಬಗೆಯಲ್ಲಿ ರಂಜಾನ್ ದರ್ಗಾ ಅವರು ಅವಮಾನಕ್ಕೆ ಒಳಗಾಗಿದ್ದಾರೆ. ಬ್ರಾಹ್ಮಣರು ಧಾರ್ಮಿಕವಾಗಿ ಬಹುಸಂಖ್ಯಾತ ಹಿಂದೂ ಧರ್ಮದ ಒಂದು ಪಂಗಡ. ಇಂತಹ ಒಂದು ಪಂಗಡದಲ್ಲಿನ ಕೆಲವು ಬ್ರಾಹ್ಮಣ್ಯ ಮನಸ್ಥಿತಿಗಳು ಆಹಾರದ ಕಾರಣಕ್ಕಾಗಿ, ಧರ್ಮದ ಕಾರಣಕ್ಕಾಗಿ ಸಾರಾ ಅಬೂಬಕ್ಕರ್ ಅವರನ್ನು ಮುಟ್ಟಿಸಿಕೊಳ್ಳದೆ ಇರುವುದು ಧಾರ್ಮಿಕ ಅಸ್ಪೃಶ್ಯತೆಗೆ ಉದಾಹರಣೆಯಾಗಿದೆ. ಈ ಎರಡೂ ಸನ್ನಿವೇಶಗಳಲ್ಲಿ ಲೇಖಕರು ಬಾಲ್ಯದಲ್ಲಿಯೇ ಜಾತಿ ವ್ಯವಸ್ಥೆಗೆ ಮುಖಾಮುಖಿಯಾದ ಬಗೆಯನ್ನು ಆತ್ಮಕಥೆಗಳು ಅತ್ಯಂತ ಮುಗ್ಧವಾಗಿ ಪ್ರಕಟಪಡಿಸುತ್ತವೆ. ಜೊತೆಗೆ ಭಾರತ ದೇಶದಲ್ಲಿ ಜಾತ್ಯಾಧಾರಿತ ಅವಮಾನಗಳಿರುವುದಷ್ಟೇ ಅಲ್ಲದೆ ಧರ್ಮಾಧಾರಿತ ಅವಮಾನಗಳಿವೆ ಎಂಬುದನ್ನು ಮೇಲಿನ ಸಂಗತಿಗಳು ಪುಷ್ಟಿಗೊಳಿಸುತ್ತವೆ.

**೭.೧.೨.** ಹೆಸರು ಮತ್ತು ಅವಮಾನ: ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ವ್ಯಕ್ತಿಯ ಹೆಸರಿನ ಜೊತೆಗೆ ಅಡ್ಡ ಹೆಸರುಗಳು ಜಾತಿಯನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸದ್ಯದ ಸ್ಥಿತಿಯಲ್ಲಿ ಈ ಗುಣವು ಉತ್ತರ ಕರ್ನಾಟಕಕ್ಕೆ ಮಾತ್ರ ಸೀಮಿತವಾಗದೇ ಕರ್ನಾಟಕದ ಉಳಿದ ಭಾಗಗಳಲ್ಲಿಯೂ ಕಾಣುತ್ತದೆ. ಹೆಸರುಗಳ ಮೂಲಕ ಜಾತಿಯನ್ನು ಮತ್ತು ಧರ್ಮವನ್ನು ಗುರುತಿಸುವ ಚಾಕಚಕ್ಯತೆ ಸಹಜವಾಗಿ ಕಾಣುವ ಲಕ್ಷಣವಾಗಿದ್ದೂ, ಈ ಲಕ್ಷಣವು ವ್ಯಕ್ತಿಗಳಿಗೆ ಕೆಲವೊಮ್ಮೆ ವರವಾಗಿದ್ದರೆ, ಮತ್ತೆ ಕೆಲವೊಮ್ಮೆ ಶಾಪವಾಗಿ ಕಾಡುತ್ತವೆ. ಸಂದರ್ಶನದ ಸಂದರ್ಭದಲ್ಲಿ ನಜ್ಮಾ ಅವರು "ನಾನೊಬ್ಬಳು ಡಬ್ಬಿಂಗ್ ಆರ್ಟಿಸ್ಟ್, ನನ್ನ ಹೆಸರು ನಜ್ಮಾ ಅಲ್ಲದೆ ಕೇವಲ ನನ್ನ ಧ್ವನಿ ಇದ್ದಿದ್ದರೆ ಪ್ರಾಯಶ: ನನಗಿವತ್ತು ಎರಡು ಸಿನಿಮಾಗೆ ಸ್ಟೇಟ್ ಅವಾರ್ಡ ಬರಬೇಕಿತ್ತು ಆದರೆ ಯಾಕೆ ಬರಲಿಲ್ಲ ಅಂದ್ರೆ ನನ್ನ ಹೆಸರು ನಜ್ಮಾ ಎಂಬುದು. ನಾನು ಧರ್ಮ ಅನುಸರಿಸುತ್ತೀನೊ ಇಲ್ಲವೋ ನನ್ನ ಮುಸ್ಲಿಂ ಹಿನ್ನೆಲೆಯ ಹೆಸರೇ ಸಾಕು ನನ್ನನ್ನು ಆಯ್ಕೆ ಮಾಡದಿರಲು"[೪] ಎಂದು ಬರೆದುಕೊಳ್ಳುತ್ತಾರೆ. ಮೇಲಿನ ಸಂಗತಿಯೂ ಮುಸ್ಲಿಂ ಯುವತಿ ಎಂಬ ಕಾರಣಕ್ಕೆ ಆಗುವಂತಹದ್ದು.

ಇಲ್ಲಿ ಹೆಸರಿನ ಮೂಲಕ ಮುಸ್ಲಿಂ ಯುವತಿ ಎಂಬುದನ್ನು ಕಂಡುಕೊಳ್ಳಲಾಗಿದೆ. ಈ ಹೆಸರು ಕೇಂದ್ರಿತ ತರತಮವು ಅಪಮಾನಕ್ಕೂ ಹಾಗೂ ಅವಕಾಶವಂಚಿತಳಾಗಿರುವುದಕ್ಕೂ ಕಾರಣವಾಗಿರುವುದರ ಕುರಿತು ಲೇಖಕಿಯಲ್ಲಿ ವಿಷಾದತೆ ಇದೆ.

೭.೧.೩. ಧಾರ್ಮಿಕ ಪರಕೀಯತೆ: ಭಾರತೀಯತೆ, ದೇಶಾಭಿಮಾನಗಳು ಇಂದು ಹೆಚ್ಚು ಪ್ರಚಲಿತವು, ಪರೀಕ್ಷಿಸುವ ಸಂಗತಿಗಳು ಆಗಿವೆ. ಇಂತಹ ಹಲವು ಸಂಗತಿಗಳನ್ನು ರಂಜಾನ್ ದರ್ಗಾ ಅವರ 'ನನ್ನ ಪರಿಸರ ಮತ್ತು ಕಾವ್ಯ' ಹಾಗೂ ಸಾರಾ ಅಬೂಬಕ್ಕರ್ ಅವರ 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಎಂಬ ಆತ್ಮಕಥನಾತ್ಮಕ ಬರಹಗಳಲ್ಲಿ ಕಾಣಬಹುದಾಗಿದೆ.

ಅ. "ನಾನು ೭ನೇ ತರಗತಿಯಲ್ಲಿ ಓದುತ್ತಿದ್ದಾಗ ಯುದ್ಧ ಆರಂಭವಾಗಿತ್ತು. ಪ್ರತಿ ಯುದ್ಧದ ಸಮಯದಲ್ಲಿ ಇಲ್ಲಿಯ ಮುಸ್ಲಿಮರು ಅಪರಾಧಿಗಳಂತೆ ಕಾಣುತ್ತಾರೆ. ಆಗ ಚಿಕ್ಕ ಹುಡುಗನಾದ ನಾನೂ ಇದಕ್ಕೆ ಅಪವಾದವಾಗಿರಲಿಲ್ಲ. ನನ್ನ ಗೆಳೆಯರನೇಕರು ನನಗೆ ದೇಶಪ್ರೇಮದ ಸವಾಲು ಹಾಕುತ್ತಿದ್ದರು, ನಾನು ಅವರಿಗಿಂತ ಬೇರೆ ಹೇಗೆ? ಎಂಬ ಪ್ರಶ್ನೆ ಕಾಡುತ್ತಿತ್ತು, ದೇಶಪ್ರೇಮವೆಂದರೆ ಸೈನ್ಯ ಸೇರಿ, ಯುದ್ಧ ಮಾಡಿ ಪಾಕಿಸ್ತಾನ ಮತ್ತು ಚೀನೀ ಸೈನಿಕರನ್ನು ಕೊಲ್ಲುವುದು ಎಂಬ ಭಾವನೆ ನಮಗಿತ್ತು. ನನ್ನ ದೇಶಾಭಿಮಾನವನ್ನು ಪ್ರಶ್ನಿಸುವವರ ದೇಶಾಭಿಮಾನವನ್ನು ಪ್ರಶ್ನಿಸಲಿಕ್ಕಾಗುತ್ತಿರಲ್ಲಿಲ್ಲ. ಅವರ ಧರ್ಮ ಅವರನ್ನು ಪಾಕಿಸ್ತಾನದ ವಿರೋಧಿಗಳೆಂದು ಸಾಬೀತುಪಡಿಸುತ್ತಿತ್ತು. ನನ್ನ ಜಾತಿ 'ನಾನು ಪಾಕಿಸ್ತಾನದ ಪರ' ಎಂದು ಸಾರುವಂತೆ ಅನಿಸುತ್ತಿತ್ತು. ಈ ಘಟ್ಟದಲ್ಲಿ ನಾನು ಮುಸ್ಲಿಮರ ಬಗ್ಗೆ ಬೇಸರಪಟ್ಟುಕೊಂಡೆ. ನಿಜವಾದ ದೇಶಾಭಿಮಾನಿಗಳು ಆರ್.ಎಸ್.ಎಸ್‌ನವರೆಂದು ತಿಳಿದುಕೊಂಡೆ. ಕೀಳರಿಮೆಯಿಂದಾಗಿ ತೊಳಲಾಡುತ್ತಿದ್ದೆ. ಅಲ್ಲದೆ ಲಾಠಿ ಮತ್ತು ಕರಿಟೊಪ್ಪಿಗೆಗಳ ಮಧ್ಯ ಮುಖಗಳು ಭಯಾನಕವಾಗಿ ಕಾಣುತ್ತಿದ್ದವು. ಒಂದೊಂದು ಸಲ ದೂರದಲ್ಲಿ ನಿಂತು ಅವರ ಹಾಗೆಯೇ ಧ್ವಜವಂದನೆ ಮಾಡುತ್ತಿದ್ದೆ ಇಂಥ ದೇಶಾಭಿಮಾನದ ಬೂಟಾಟಿಕೆ ಗೊತ್ತಾದದ್ದು ನಾನು ದೊಡ್ಡವನಾದ ಮೇಲೆಯೇ!"[೫]

ಆ. "೧೯೬೫ರಲ್ಲಿ ಭಾರತ ಪಾಕಿಸ್ತಾನದ ನಡುವೆ ಯುದ್ಧ ಪ್ರಾರಂಭವಾಗಿ, ತನ್ನನ್ನು ದೆಹಲಿಗೆ ವರ್ಗಾಯಿಸಿದಾಗ, 'ನಾನು ಸೇನೆಗೆ ಸೇರಿರುವುದು ತಾಯ್ನಾಡಿನ ರಕ್ಷಣೆಗಾಗಿ ದೆಹಲಿಯಲ್ಲಿ ಅಡಗಿರುವುದಕ್ಕಲ್ಲ. ನೀವು ಈಗ ನನ್ನನ್ನು ಗಡಿನಾಡಿಗೆ ವರ್ಗ ಮಾಡದೆ ಹೋದರೆ ದಯವಿಟ್ಟು ನನ್ನ ರಾಜೀನಾಮೆಯನ್ನು ಸ್ವೀಕರಿಸಿ' ಎಂದು ಕೆಚ್ಚೆದೆಯಿಂದ ವರ್ಗ ಮಾಡಿಸಿಕೊಂಡು ಹೋರಾಡಿ ಕಣ್ಮರೆಯಾದನು"[೬] ಎಂದು ಲೇಖಕಿ ಬರೆದುಕೊಳ್ಳುತ್ತಾರೆ. ಮೇಲಿನ ಎರಡೂ ಸನ್ನಿವೇಶಗಳಲ್ಲಿ ಮೂರು ಸಂಗತಿಗಳು ಮುಖ್ಯವಾಗಿವೆ. ಪಾಕಿಸ್ತಾನವನ್ನು ವಿರೋಧಿಸುವುದು ದೇಶಾಭಿಮಾನವಾಗಿ ಮೊದಲನೆಯ ಸಂಗತಿಯಾದರೆ, ಮುಸ್ಲಿಮರು ದೇಶಕ್ಕೆ ಎಷ್ಟು ಪ್ರಾಮಾಣಿಕವಾಗಿ ಅಭಿಮಾನ ತೋರಿಸುತ್ತಾರೆ ಎಂಬುದು ಎರಡನೆಯ ಸಂಗತಿಯಾಗಿದೆ. ಈ ಕಾರಣಗಳಿಗಾಗಿಯೇ ರಂಜಾನ್

ದರ್ಗಾ ಅವರು ಯುದ್ಧ ಸಂದರ್ಭದಲ್ಲಿ ಪರಕೀಯತೆ ಅನುಭವಿಸುತ್ತಾರೆ. ಇನ್ನೂ ಸಾರಾ ಅಬೂಬಕ್ಕರ್ ಅವರ ಅಣ್ಣ ಗಡಿನಾಡಿಗೆ ವರ್ಗ ಮಾಡಿಸಿಕೊಳ್ಳುವುದು ಮೂರನೆಯ ಸಂಗತಿಯಾಗಿದೆ. ಇತ್ತೀಚೆಗೆ ದೇಶಪ್ರೇಮದ ಮಾನದಂಡ ಬದಲಾಗಿದ್ದು, ಕೆಲವು ಸಮುದಾಯಗಳು ಅದನ್ನು ಮತ್ತೆ ಮತ್ತೆ ತೋರ್ಪಡಿಸಬೇಕಾದ ಒತ್ತಡಗಳು ನಿರ್ಮಾಣವಾಗಿವೆ. ಈ ಮೇಲಿನ ಮೂರೂ ಸಂಗತಿಗಳು ರಾಜಕೀಯ ಪ್ರೇರಿತ ಧರ್ಮಾಧಾರಿತ ದೇಶ ವಿಭಜನೆಯ ಫಲಗಳಾಗಿದ್ದು, ಭಾರತ ಹಿಂದೂಗಳದ್ದು, ಪಾಕಿಸ್ತಾನ ಮುಸ್ಲಿಮರದ್ದು ಎಂಬ ಸ್ಥಾಪಿತ ಅಭಿಪ್ರಾಯಗಳು ಲೇಖಕರಲ್ಲಿ ಪರಕೀಯತೆಯನ್ನುಂಟು ಮಾಡಿವೆ. ರಂಜಾನ್ ಮತ್ತು ಸಾರಾ ಅವರ ಅಣ್ಣ ಇಂತಹ ಒತ್ತಡಗಳ ಕಾರಣಕ್ಕಾಗಿಯೇ ಗೊಂದಲಗಳಿಗೆ ಒಳಗಾಗಿದ್ದರೂ, ನಿಜವಾದ ದೇಶಭಕ್ತಿಯ ಸ್ವರೂಪವನ್ನು ವೈಚಾರಿಕ ಅರಿವಿನ ಮೂಲಕ ಕಂಡುಕೊಂಡಿರುವುದನ್ನು ತಮ್ಮ ಆತ್ಮಕಥನಾತ್ಮಕ ಬರಹಗಳಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

**೭.೧.೪.** ಮುಸ್ಲಿಂ ಮೂಲಭೂತವಾದ: ಮುಸ್ಲಿಂ ಪುರೋಹಿತಶಾಹಿ ವ್ಯವಸ್ಥೆಯಲ್ಲಿನ ಮತಾಂಧತೆಯೂ ಹಿಂದೂಗಳನ್ನು ಪರಕೀಯವಾಗಿ ಕಾಣುವ ಸನ್ನಿವೇಶವನ್ನು ಕುರಿತು 'ನನ್ನೊಳಗಿನ ನಾನು' ಪಠ್ಯದಲ್ಲಿ ಮೊಹಿದೀನ್ ಅವರು "ಕೆಲವು ಮಸೀದಿಗಳವರು ಮದ್ರಸಾಗಳಲ್ಲಿ ನರ್ಸರಿ ಶಾಲೆಗಳನ್ನು ಪ್ರಾರಂಭಿಸಲು ಮುಂದಾದರು. ಈ ವಿಷಯ ಎಲ್ಲಾ ಮುಲ್ಲಾ, ಮೌಲ್ವಿಗಳಿಗೆ ಗೊತ್ತಾಯಿತು. ಅವರು 'ಅದೆಲ್ಲ ಪಾಡ್‌ಲೆಲ್ಲೊ'(ಅದು ಸಮ್ಮತವಲ್ಲ) ಎಂದರು. ನಮ್ಮ ಮದ್ರಸಾಗಳಲ್ಲಿ ಒಂದು ಹಿಂದೂ ಟೀಚರ್ ಬಂದು ಮಕ್ಕಳ ಬಾಯಲ್ಲಿ ಹಾಡು ಹೇಳಿಸುವುದು, ಕುಣಿಸುವುದು, ಆಟ ಆಡಿಸುವುದು ಮಾಡಿದರೆ ಮದ್ರಸಾದ ಪಾವಿತ್ರ್ಯ ಹಾಳಾಗುತ್ತದೆ"[೭] ಎಂದು ದಾಖಲಿಸುತ್ತಾರೆ. ಮುಸ್ಲಿಂ ಮೂಲಭೂತವಾದಿಗಳು ಹಿಂದೂಗಳು ತಮ್ಮ ಶಾಲೆಗೆ ಬಂದು ಕಲಿಸುವುದನ್ನು ಸಹಿಸದೆ ಇರುವುದು ಕೂಡ ಒಂದು ಬಗೆಯ ಪರಕೀಯತೆಯನ್ನುಂಟು ಮಾಡುವ ಸಂಗತಿಯಾಗಿದೆ. ತಮ್ಮ ಮದ್ರಸಾದ 'ಪಾವಿತ್ರ್ಯತೆ' ಉಳಿಸಿಕೊಳ್ಳುವುದು ಎಂಬುದು ತಮ್ಮ ಧರ್ಮಾಂಧತೆಯನ್ನು ಮತ್ತು ವೈಯಕ್ತಿಕ ಹಿತಾಸಕ್ತಿಯನ್ನು ಉಳಿಸಿಕೊಳ್ಳುವುದೇ ಆಗಿದೆ. ಈ ಧೋರಣೆ ಮುಸ್ಲಿಂ ಮೂಲಭೂತವಾದಿಗಳದ್ದೇ ಹೊರತು ಜನಸಾಮಾನ್ಯರದ್ದಲ್ಲ. ಮುಸ್ಲಿಂ ಮೂಲಭೂತವಾದಿಗಳು ಹಿಂದೂಗಳನ್ನು ಪರಕೀಯವಾಗಿ ನೋಡುತ್ತಾರೆ ಹಾಗೂ ಇತರೆ ಸಾಮಾನ್ಯ ಮುಸ್ಲಿಮರಿಗೂ ಹಾಗೆಯೇ ನೋಡುವುದಕ್ಕೆ ಪ್ರೇರೇಪಿಸುತ್ತಾರೆ ಎಂಬುದನ್ನು ಮೇಲ್ಕಂಡ ಸನ್ನಿವೇಶದ ಮೂಲಕ ಗುರುತಿಸಬಹುದಾಗಿದ್ದರೂ, ಪಠ್ಯವು ಈ ಧೋರಣೆಯನ್ನು ನಿರಾಕರಿಸುವುದನ್ನು ಕಾಣಬಹುದಾಗಿದೆ.

**೭.೧.೫.** ಆಹಾರ ಮತ್ತು ಇತಿಹಾಸದ ಭಾರಗಳು: ಆಹಾರ ಸಾಂಸ್ಕೃತಿಕ ಭಿನ್ನತೆಯನ್ನು ಬಂಡವಾಳವಾಗಿ ಮಾಡಿಕೊಳ್ಳುವ ಭಾಗವಾಗಿ ಹುಟ್ಟಿದ ಧಾರ್ಮಿಕ ಮೂಲಭೂತವಾದದ ಉತ್ಪನ್ನವಾದರೆ, ಇತಿಹಾಸದ ಭಾರ ರಾಜಕಾರಣದ ಭಾಗವಾಗಿ ಹುಟ್ಟಿದ ದ್ರುವೀಕರಣವಾಗಿದೆ. ಇವೆರಡೂ ಸಂಗತಿಗಳನ್ನು ಕುರಿತು ಫಕೀರ್ ಮುಹಮ್ಮದ್ ಕಟ್ಪಾಡಿಯವರ 'ಮುಸ್ಲಿಂ ಸಂವೇದನೆಯ ಕಥಾ ಪ್ರಪಂಚ' ಹಾಗೂ ಕಲೀಂ ಉಲ್ಲಾ ಅವರು ಸಂದರ್ಶನದಲ್ಲಿ ಅಭಿವ್ಯಕ್ತಿಸಿರುವ ಅಭಿಪ್ರಾಯಗಳು ಕೆಳಗಿನಂತಿವೆ.

ಅ. "ಈ ಪೇಟೆ ಶಾಲೆಯಲ್ಲಿ ನನಗೆ ಅಚ್ಚರಿಯ ಸಂಗತಿಯೊಂದು ತಿಳಿದು ಬಂತು. ಅದೆಂದರೆ ನಾನು 'ಬ್ಯಾರಿ' ಎಂಬ ನಿಕೃಷ್ಟ ಜಾತಿಗೆ ಸೇರಿದವನೆಂಬುದು! ನನ್ನ ಸಹಪಾಠಿಗಳಲ್ಲಿ ಮೇಲ್ಜಾತಿಗೆ ಸೇರಿದ ಹುಡುಗನೊಬ್ಬ ಅವನು ನಂಬರ್ ಒಂದನೆಯ ಜಾತಿ, ಇವನು ನಂಬರ್ ಎರಡನೆಯ ಜಾತಿ, ಹೀಗೆ ಜಾತಿಗಳನ್ನು ಹೇಳುತ್ತಾ ನೀವು ದನ ತಿನ್ನುವವವರು ಆರನೆಯ ಜಾತಿ, ಕೊನೆಯದ್ದು ಎನ್ನುತ್ತಿದ್ದ. ನನ್ನ ಹಳ್ಳಿಯಲ್ಲಿ ನಮ್ಮದೂ ಸೇರಿದಂತೆ ಮುಸ್ಲಿಮರ ಮೂರು ಮನೆಗಳನ್ನು ಬಿಟ್ಟರೆ ಹೆಚ್ಚು ಕಮ್ಮಿ ಮುನ್ನೂರರಷ್ಟು ಹಿಂದೂಗಳ ಮನೆಗಳು ಇದ್ದರೂ ಯಾರೂ ಕೂಡ ಈ ರೀತಿ ಹೇಳಿರಲಿಲ್ಲ. ನಾನು ದಂಗಾಗಿದ್ದೆ. ಕ್ಲಾಸಿನಲ್ಲಿ ನಾನೊಬ್ಬನೇ ಮುಸ್ಲಿಮನಾಗಿದ್ದೆ. ಇತಿಹಾಸದ ಪಾಠದಲ್ಲಿ ಮ್ಲೇಚ್ಛರ ದಾಳಿ ಎಂಬ ಪದಬರುವಾಗ, ಔರಂಗಜೇಬನ ಪಾಠ ಬಂದಾಗ ಎಲ್ಲರೂ ನನ್ನ ಮುಖವನ್ನೇ ನೋಡುತ್ತಿದ್ದರು. ನಾನು ಅಪರಾಧಿಯಾಗಿದ್ದೆ!"[೮]

ಆ. ಶಿವಮೊಗ್ಗದ ಒಂದು ಕಾರ್ಯಕ್ರಮದಲ್ಲಿ ಲೇಖಕರಾದ ಕಲೀಂ ಉಲ್ಲಾ ಮತ್ತು ಕನ್ನಡದ ವಿದ್ವಾಂಸರಾದ ಮಲ್ಲೇಪುರಂ ಜಿ. ವೆಂಕಟೇಶ್ ಅವರು ಭೇಟಿಯಾಗುವ ಸನ್ನಿವೇಶವನ್ನು ಕಲೀಂ ಅವರು ತಮ್ಮ ಸಂದರ್ಶನದಲ್ಲಿ ಹೀಗೆ ಹಂಚಿಕೊಳ್ಳುತ್ತಾರೆ. ಭೇಟಿಯಾದ ಸಂದರ್ಭದಲ್ಲಿ ಸಹಜವಾಗಿ ಕಲೀಂ ಉಲ್ಲಾರವರು ಮಲ್ಲೇಪುರಂ ಅವರನ್ನು "ಸರ್ ಮನೆ ಇಲ್ಲೆ ಇದೆ ಬನ್ನಿ ಎಂದೆ,' ಆಗ ಅವರು 'ಓ ಮನೆ ಇಲ್ಲೆ ಇದೆಯ. ಮಗಳ ಕಾರ್ಯಕ್ರಮ ಇದೆ ಅದಕ್ಕೆ ಬಂದಿದ್ದೆ.' ಎಂದರು ಸಾಮಾನ್ಯವಾಗಿ ಮಲ್ಲೇಪುರಂ ಶಾಖಾಹಾರಿಗಳಾದ ಕಾರಣ ನಾನು ಬನ್ನಿ ಸರ್ ಬಿರಿಯಾನಿ ತಿನ್ನುವಂತ್ರಿ ಎಂದೆ. ಆಗ ಮಾಂಸಾಹಾರದ ಕುರಿತು ಅವರು 'ಮುಸ್ಲಿಂ ನೀವು ಬಿರಿಯಾನಿಯನ್ನು ಚೆನ್ನಾಗಿ ಮಾಡ್ತೀರಿ' ಎಂದು ಹೇಳುತ್ತಿದ್ದರು. ಆ ತಕ್ಷಣ ಮಲ್ಲೇಪುರಂ ಅವರೊಂದಿಗೆ ಇದ್ದ ಮೊಮ್ಮಗಳು 'ಮುಸ್ಲಿಮರೆಂದರೆ ಸಾಬ್ರಲ್ವ ಅಂದಳು' ಅದಕ್ಕೆ ಮಲ್ಲೇಪುರಂ 'ಹೌದು' ಅಂದಾಗ 'ಥೂ ಸಾಬ್ರು ಗಲೀಜು ಜನ' ಎಂದಳು."[೯] ಮೇಲಿನ ಎರಡೂ ಪ್ರಸಂಗಗಳಲ್ಲಿ ನಮಗೆ ಮುಖ್ಯವಾಗಿ ಕಂಡುಬರುವುದು ಮಕ್ಕಳಲ್ಲಿ ಹುದುಗಿಸಲಾಗಿರುವ ಭಾವನೆಗಳು. ಇವು ನಮ್ಮ ಸಮಾಜದೊಳಗಿನ ಸ್ಥಾಪಿತ ಮೌಲ್ಯ ವ್ಯವಸ್ಥೆಯನ್ನು ಸಾಧಾರಣೀಕರಿಸುವಂತಿದೆ. ಮಕ್ಕಳ ಈ ಅಭಿಪ್ರಾಯಗಳು ಮಕ್ಕಳ ಅನುಭವದಿಂದ ಬಂದಿರುವಂತಹದಲ್ಲ; ಅವು ಮಕ್ಕಳ ಮನಸ್ಸಿನಲ್ಲಿ ತುಂಬಿರುವುದಾಗಿದೆ. ಮುಸ್ಲಿಮರೆಂದರೆ ಸಾಬ್ರಲ್ವ ಎಂದು ಮಗು ಕೇಳಿರುವುದು ಮಗುವು ಅನುಭವದಿಂದ ಅದನ್ನು ಕಂಡುಕೊಳ್ಳದೆ ಅದನ್ನು ಮತ್ತೊಬ್ಬರಿಂದ ಕಲಿತುಕೊಂಡಿರುವುದಕ್ಕೆ ಸಾಕ್ಷಿಯಾಗಿದೆ. ಆಹಾರದ ವಿಷಯ ಬಂದಾಗ ದಲಿತರು ಮತ್ತು ಮುಸ್ಲಿಮರು ಸಮಾನವಾದ ಅವಮಾನಗಳನ್ನು ಅನುಭವಿಸುತ್ತಿದ್ದಾರೆ. ಕಟ್ಪಾಡಿಯವರು ಬ್ಯಾರಿ ಜಾತಿಯವನೆಂದು ಹಾಗೂ 'ನೀವು ದನ ತಿನ್ನುವವವರು ಆರನೆಯ ಜಾತಿ,' ಎಂದು ಅವಮಾನಕ್ಕೆ ಒಳಗಾಗಿರುವುದು ಸಾಂಪ್ರದಾಯಿಕ ತರತಮದ ಭಾಗವಾಗಿದ್ದು, ಜಾತಿ ಮತ್ತು ಆಹಾರ ಕೇಂದ್ರಿತ ಶ್ರೇಣೀಕರಣದ ತರಮದ ಪಟ್ಟಿಯನ್ನು ಸೂಚಿಸುತ್ತದೆ. ಇಲ್ಲಿಯೇ

ಎನ್.ಕೆ ಹನುಮಂತಯ್ಯರವರ 'ಗೋವು ತಿಂದು ಗೋವಿನಂತಾದವರು' ಎಂಬ ಕವನ ನೆನಪಿಗೆ ಬರುತ್ತದೆ. ಆಹಾರ ಕುರಿತ ಮಕ್ಕಳ ಮಾತು ಕೂಡ ಮಕ್ಕಳ ಮನಸ್ಸನ್ನು ರೂಪಿಸಿರುವ ಜಗತ್ತಿನ ಫಲಿತವಾಗಿವೆ. ದನ ತಿನ್ನುವ ಜಾತಿ ಎಂದು ಹಿಂದಿನಿಂದಲೂ ಅದನ್ನು ಆಹಾರವಾಗಿ ಒಳಗೊಂಡ ಸಮುದಾಯಗಳಿಗೆ ಕೇವಲವಾಗಿ ನೋಡುತ್ತ ಅವರ ಆಹಾರವನ್ನು ಅನುಮಾನಿಸುತ್ತಾ ಬರಲಾಗಿದೆ. ಇಲ್ಲಿಯೂ ಸಹ ಕಟ್ಪಾಡಿಯವರು ಇಂತಹದ್ದೇ ಅವಮಾನಗಳಿಗೆ ಒಳಗಾಗಿದ್ದಾರೆ. ಇತಿಹಾಸದಲ್ಲಿ ಯಾವುದೇ ಜಾತಿ, ಧರ್ಮ, ವರ್ಗದ ಹಿನ್ನೆಲೆಯಿರುವ ಪ್ರಭುತ್ವವು ತನ್ನ ಅಧಿಕಾರದ ಅವಕಾಶ, ಸಂಪತ್ತು ಹಾಗೂ ಇನ್ನಿತರ ಸಂಗತಿಗಳಿಗೆ ಕೆಲವು ಒಪ್ಪು ತಪ್ಪುಗಳನ್ನು ಮಾಡಿರುತ್ತದೆ. ಆದರೆ ಈ ಒಪ್ಪು ತಪ್ಪುಗಳನ್ನೇ ತಮ್ಮ ಅಧಿಕಾರದ ಉಳಿಯುವಿಕೆಗಾಗಿ ಬ್ರಿಟಿಷರು ಹಿಂದೂ, ಮುಸ್ಲಿಮರ ನಡುವಿನ ಒಗ್ಗಟ್ಟು ಮುರಿಯಲು ರಾಜಕೀಯ ಸೂತ್ರವನ್ನಾಗಿ ಬಳಸಿಕೊಂಡರು. ಇತಿಹಾಸವನ್ನು ಸಾಧ್ಯವಾದಷ್ಟು ಮಟ್ಟಿಗೆ ತಿರುಚಿ ಮುಸ್ಲಿಂ ದೊರೆಗಳನ್ನೆಲ್ಲ ಮತೀಯವಾದಿಗಳು, ಹಿಂದೂ ವಿರೋಧಿಗಳೆಂಬಂತೆ ಚಿತ್ರಿಸಿ, ಈಗಿರುವ ಮುಸ್ಲಿಂ ಸಮುದಾಯ ಕೂಡ ಅದರ ಮುಂದುವರಿದ ಭಾಗ ಎಂಬಂತೆ ಆರೋಪಿಸಲಾಯಿತು. ಇತಿಹಾಸ ಪಾಠದ ಸಂದರ್ಭದಲ್ಲಿ ಕಟ್ಪಾಡಿಯವರು ಅನುಭವಿಸುವ ಅಪಮಾನ ಇದರ ಭಾಗವಾಗಿದೆ. ಹೀಗೆ ಔರಂಗಜೇಬ್, ಅಲ್ಲಾವುದ್ದೀನ್ ಖಿಲ್ಜಿ ದೊರೆಗಳ ಪ್ರಸ್ತಾಪವಾದಾಗ ತಮ್ಮನ್ನು ಅಪರಾಧಿಗಳಂತೆ ಕಾಣುವ ವಿಷಮ ಮನಸ್ಥಿತಿಗಳನ್ನು ಕಟ್ಪಾಡಿಯವರು ತಣ್ಣನೆಯ ಧ್ವನಿಯಲ್ಲಿ ವ್ಯಕ್ತಪಡಿಸಿದ್ದಾರೆ.

**೭.೧೬.** ಪ್ರಭುತ್ವ ಮತ್ತು ಭಯೋತ್ಪಾದಕತೆಯ ಆರೋಪ: ಅಧಿಕಾರಿ ವರ್ಗ ತಮ್ಮ ಸ್ವಾರ್ಥಕ್ಕಾಗಿ ಸಾಮಾಜಿಕ ವ್ಯವಸ್ಥೆಯಲ್ಲಿರುವ ಸ್ಥಾಪಿತ ಅಭಿಪ್ರಾಯಗಳನ್ನು ಬಳಸಿಕೊಂಡು ಕೆಲವೊಮ್ಮೆ ನಿರಪರಾಧಿಗಳನ್ನು ಅಪರಾಧಿಗಳನ್ನಾಗಿಸುತ್ತೆ. 'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಪಠ್ಯದಲ್ಲಿನ ಕೆಳಗಿನ ಸನ್ನಿವೇಶಗಳಲ್ಲಿ ಆಮಿರ್‌ಖಾನ್ ಇದೇ ಮಾದರಿಯ ಅಪಮಾನಗಳಿಗೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ.

**ಅ.** "ಕರೋಲ್ ಬಾಗಿನಲ್ಲಿ ಬಾಂಬ್ ಇಟ್ಟವನು ನಾನೇ ಮತ್ತು ನನ್ನನ್ನು ದಯವಿಟ್ಟು ಕ್ಷಮಿಸಿಬಿಡಿ ಎಂದು. ಇದೇ ರೀತಿಯ ಸುಳ್ಳು ಹೇಳಿಕೆಗಳನ್ನು ಇನ್ನಿತರರ ಎದುರು ಹೇಳಿ ತಪ್ಪೊಪ್ಪಿಕೊಳ್ಳುವಂತೆ ಹಲವು ಬಾರಿ ಮಾಡಲಾಯಿತು."[೧೧]

**ಆ.** "ಇಂಥ ಸಂಕೋಲೆ ಮತ್ತು ಆಯುಧಗಳನ್ನು ಮೊಘಲರ ಕಾಲದಲ್ಲಿ ಬಳಸುತ್ತಿದ್ದರು ಎಂದು ಪೋಲಿಸರು ನೇರವಾಗಿ ಸ್ಪಷ್ಟವಾಗಿ ಹೇಳುತ್ತಿದ್ದರು: 'ತುಮ್ಹಾರೆ ಜಮಾನೆ ಕಾ ಹೈ. ಮುಘಲ್ ಜಮಾನೆ ಕಾ ಹೈ.' ('ನಿಮ್ಮ ಕಾಲದ್ದೆ ಇವುಗಳು. ಮೊಘಲ್ ದೊರೆಗಳೊಂದಿಗೆ ಸಮೀಕರಿಸಿ ನೋಡುತ್ತಿದ್ದರು. ನಾನು ಒಬ್ಬ ಮುಸ್ಲಿಮನಾದ್ದರಿಂದ ಹಿಂಸಾಚಾರವನ್ನು ಮೊಘಲರಿಂದ ಬಳುವಳಿಯಾಗಿ ಪಡೆದಿದ್ದೇನೆ. ಎಂಬುದು ಅವರ ಮಾತಿನ ಆಂಬೋಣವಾಗಿತ್ತು.)"[೧೧]

ಇ. "ನಂತರ ಒಬ್ಬ ನಾನು ಉಟ್ಟ ಬಟ್ಟೆಯನೆಲ್ಲ ಕಳಚುವಂತೆ ಆದೇಶಿಸಿದ. ನಾನು ಒಳ ಉಡಪನ್ನು ಧರಿಸದಿರುವುದನ್ನು ಕಂಡು 'ಸಾಲೇ ಯೆ ಅಂಡರ್ವೇರ್ ಭಿ ನಹೀ ಪಹೆನ್ತೇ' (ಕಳ್ಳ ನನ್ ಮಕ್ಕಳು, ಇವರು ಒಳಗೆ ಅಂಡರ್ವೇರ್ ಅನ್ನೂ ಕೂಡ ಉಡುವುದಿಲ್ಲ) 'ಇವರು' ಎಂಬ ಪದವನ್ನು ಮುಸ್ಲಿಮರು ಎಂಬ ಅರ್ಥದಲ್ಲಿ ಅವನು ಬಳಸಿರುವಿರುವುದೆಂದು ಗ್ರಹಿಸಿದೆ."[೧೨] "ನನ್ನ ಮೈಮೇಲೆ ಉಚ್ಚೆ ಹೊಯ್ಯುವುದು ನಡೆಯುತ್ತಲೇ ಇತ್ತು. ಒಂದು ಸಂದರ್ಭದಲ್ಲಿ ನನ್ನ ಕೈಮೇಲೆ ಕುರ್ಚಿಯನ್ನಿಟ್ಟು ಅದರ ಮೇಲೆ ಒಬ್ಬ ಕೂತ"[೧೩] ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಮೇಲಿನ ಸನ್ನಿವೇಶಗಳು ಪೀರ್‌ಬಾಷಾರ 'ಅಕ್ಕ ಸೀತಾ ನಿನ್ನಂತೆ ನಾನೂ ಶಂಕಿತ' ಕವನವನ್ನು ನೆನಪಿಸುತ್ತವೆ. ಆಮಿರ್‌ಖಾನ್ ಅವರ ಮೇಲಿನ ಮಾತುಗಳು ಆರ್ತನಾದವನ್ನು ವ್ಯಕ್ತಪಡಿಸುತ್ತವೆ.

ಭಾರತದಲ್ಲಿ ಒಬ್ಬ ಮುಸ್ಲಿಮನನ್ನು ಭಯೋತ್ಪಾದಕನೆಂದು ನಂಬಿಸುವುದು ಅತೀ ಸುಲಭವಾದ ಕೆಲಸವಾಗಿದೆ. ಜಗತ್ತಿನಾದ್ಯಂತ ಭಯೋತ್ಪಾದನೆಯೂ ಅತೀ ಗಂಭೀರವಾದ ಸಮಸ್ಯೆಯಾಗಿದೆ. ಇದರಲ್ಲಿ ಕೆಲವು ಮುಸ್ಲಿಂ ಸಂಘಟನೆಗಳ ಕೈವಾಡವಿರುವುದು ಸತ್ಯವಾದರೂ ಇಡೀ ಮುಸ್ಲಿಂ ಸಮುದಾಯವನ್ನು ಭಯೋತ್ಪಾದಕರೆಂದು ಆರೋಪಿಸುವುದು ಅಮಾನವೀಯವಾಗುತ್ತದೆ. ನಿರಪರಾಧಿಯಾಗಿದ್ದ ಆಮಿರ್‌ಖಾನ್ ಈ ರೀತಿಯ ಅಮಾನವೀಯ ಆರೋಪ ಮತ್ತು ಹಲ್ಲೆಗಳಿಂದ ಅವಮಾನಿತನಾಗುತ್ತಾನೆ. ಪ್ರಜೆಗಳ ರಕ್ಷಕರೇ ತಮ್ಮ ಉದ್ಯೋಗದ ಬಡ್ತಿಗಾಗಿ, ಪ್ರಶಸ್ತಿಗಾಗಿ ನಿರಪರಾಧಿಯಾಗಿದ್ದ ಆಮಿರ್‌ಖಾನ್‌ನನ್ನು ಭಯೋತ್ಪಾದಕನೆಂದು ಆರೋಪಿಸಿ, ಮೈಮೇಲೆ ಉಚ್ಚೆ ಹೊಯ್ಯುವುದು. ಇದರ ಜೊತೆಗೆ ಸಮುದಾಯ ಕೇಂದ್ರಿತವಾಗಿ ಅವಮಾನಿಸುವುದು ಕಂಡುಬರುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿನ ಸ್ಥಾಪಿತ ಅಭಿಪ್ರಾಯಗಳನ್ನು ಬಳಸಿಕೊಂಡು ಅಮಾಯಕರನ್ನು ಬಲಿಪಶುವಾಗಿಸುವ ಅಧಿಕಾರಿ ವರ್ಗದ ಶೋಷಕ ಮನಸ್ಥಿತಿಯನ್ನು ಆತ್ಮಕಥೆಯು ಅಸಹಾಯಕವಾಗಿ ಕಾಣಿಸುತ್ತದೆ.

**೭.೧.೭.** ಮತಾಂಧತೆಯ ಕುರುಡು ಉನ್ಮಾದಗಳು: ಮತಾಂಧತೆಯ ಉನ್ಮಾದವು ಮನುಷ್ಯನನ್ನು ಕುರುಡಾಗಿಸಿ ಮಿತ್ರರನ್ನು ಶತ್ರುವನ್ನಾಗಿಸುತ್ತದೆ. ಇಂತಹ ಉನ್ಮಾದಗಳು ಮಾಡುವ ಅಪಾಯಗಳನ್ನು ಮೊಹಿದೀನ್‌ರ 'ನನ್ನೊಳಗಿನ ನಾನು' ಆತ್ಮಕಥೆಯ ಕೆಳಗಿನ ಉಲ್ಲೇಖಗಳಲ್ಲಿ ಕಾಣಬಹುದಾಗಿದೆ. ಕರಾವಳಿ ಭಾಗದಲ್ಲಿನ ಕೋಮುಗಲಭೆಗಳನ್ನು ಕುರಿತು ಮೊಹಿದೀನ್ ಅವರು ಹೀಗೆ ಹೇಳುತ್ತಾರೆ. "ಈ ರೀತಿಯ ಗುಂಪು ದಾಳಿಗಳು ಹಲವು ಕಡೆ ನಡೆದಿವೆ. ಎಳ್ಳಷ್ಟೂ ಕರುಣೆ ಇಲ್ಲದೆ ಕತ್ತಿ. ತಲವಾರು, ರಾಡ್ ಹಿಡಿದುಕೊಂಡು ಅನಿರೀಕ್ಷಿತವಾಗಿ 'ಗೆರಿಲ್ಲಾ' ರೀತಿಯ ದಾಳಿ ಮಾಡುತ್ತಿದ್ದ ಇವರಿಗೆ ನೆರೆಹೊರೆಯವರು, ದಿನಾ ಮುಖ ನೋಡುವವರು, ಗೆಳೆಯರು ಎಂಬ ಯಾವ ಮುಲಾಜು ಕೂಡಾ ಇರಲಿಲ್ಲ. ಯಾರು ಬೇಕಾದರಾಗಲಿ, ಮುಸ್ಲಿಮರಾದರೆ ಸಾಕು. ಆ ಮನೆಗೆ ನುಗ್ಗಿ ಬಿಡುತ್ತಿದ್ದರು. ಮಕ್ಕಳು, ಮಹಿಳೆಯರು, ವೃದ್ಧರು, ರೋಗಿಗಳು ಎಂಬುದನ್ನು ನೋಡದೆ

ಅಟ್ಟಾಡಿಸಿಕೊಂಡು ಹೊಡೆಯುತ್ತಿದ್ದರು. ಕೊಲ್ಲುತ್ತಿದ್ದರು ಕೆಲವು ಕಡೆ ಮುಸ್ಲಿಂ ಹುಡುಗರು ಕೂಡಾ ಪ್ರತಿಕಾರವಾಗಿ ಕೆಲವು ಮನೆಗಳಿಗೆ ಬೆಂಕಿ ಹಚ್ಚುವ, ದಾಳಿ ಮಾಡುವ ಕೆಲಸವನ್ನೂ ಮಾಡಿದ್ದರು."[೧೪] ಲೇಖಕರ ಈ ಸಾಲುಗಳು ಭೀಕರ ಸನ್ನಿವೇಶದ ಚಿತ್ರಣವಾಗಿವೆ. ಮನುಷ್ಯನು ಒಂಟಿಯಾಗಿದ್ದಾಗ ಒಳ್ಳೆಯದು, ಕೆಟ್ಟದರ ಕುರಿತು ಯೋಚಿಸುತ್ತಾನೆ. ಗುಂಪಿನಲ್ಲಿದ್ದಾಗ ಅದರಲ್ಲೂ ಮತಾಂಧತೆಯ ಉನ್ಮಾದದಲ್ಲಿರುವಾಗ, ಯಾವುದನ್ನು ಗಮನಿಸದೇ ಅಮಾನವೀಯವಾಗಿ ವರ್ತಿಸುತ್ತಾನೆ. ಆಗ ನೆರೆಹೊರೆ, ಗೆಳೆತನಗಳಾಗಲಿ ಮುಖ್ಯವಾಗದೆ 'ಧರ್ಮ'ವೇ ಮುಖ್ಯವಾಗಿ ಕೊಲ್ಲುವ ಹಂತಕ್ಕೆ ಹೋಗುತ್ತಾರೆ. ಇವೆಲ್ಲವೂ ಆರ್ಥಿಕ, ಸಾಮಾಜಿಕ ಲಾಭಗಳ ಉತ್ಪನ್ನವಾದರೂ ಧರ್ಮಾಂಧತೆಯ ಮುಖವಾಡ ತೊಟ್ಟಿರುವುದನ್ನು ಆತ್ಮಕಥೆಯ ಮೂಲಕ ಗಮನಿಸಬಹುದಾಗಿದೆ.

**೭.೧.೮.** ಭಾಷಿಕ ಮತ್ತು ಸಾಮುದಾಯಿಕ ಅವಮಾನಗಳು: ಭಾಷಿಕವಾಗಿ ನಡೆಯುವ ಅವಮಾನಗಳು ಕೇವಲ ಭಾಷಿಕ ಅವಮಾನಗಳಷ್ಟೇ ಆಗದೆ, ಏಕಕಾಲಕ್ಕೆ ಸಾಮುದಾಯಿಕ ಅವಮಾನಗಳೂ ಆಗಿರುತ್ತವೆ. ಈ ರೀತಿಯ ಅವಮಾನಗಳು ಎರಡು ಬಗೆಯಲ್ಲಿವೆ. ಒಂದನೆಯದು ಮುಸ್ಲಿಮರು ಕನ್ನಡ ಮಾತಾಡುವುದನ್ನು ಕುರಿತ ಅಸಹಿಷ್ಣುತೆ. ಎರಡನೆಯದು ಮುಸ್ಲಿಮರು ಮಾತಾಡುವ ಬ್ಯಾರಿ ಭಾಷೆಯನ್ನು ಅವಮಾನಿಸುವುದು ಇದಕ್ಕೆ ಸಂಬಂಧಿಸಿದ ವಿವರಗಳನ್ನು ರಂಜಾನ್ ದರ್ಗಾ ಅವರ 'ಸಾಹಿತ್ಯ ಮತ್ತು ಸಮಾಜ' ಮತ್ತು ಅಬ್ಬಾಸ್ ಮೇಲಿನಮನಿಯವರ ಸಂದರ್ಶನದಲ್ಲಿ ಕಾಣಬಹುದು.

**ಅ.** "ಈ ದೇಶದ ಎಂಥ ಪ್ರಜ್ಞಾವಂತ ಮುಸ್ಲಿಮನೂ ಒಂದಲ್ಲ ಒಂದು ರೀತಿಯಲ್ಲಿ ಅಗ್ನಿ ಪರೀಕ್ಷೆಗಳಿಗೆ ಒಳಗಾಗಿಯೇ ಇರುತ್ತಾನೆ. ದ್ವಿತೀಯ ಬಿ.ಎ ದ ಪರಿಣಾಮ ತಿಳಿದಾಗ ಪ್ರಧಾನ ವಿಷಯವಾದ ಕನ್ನಡದಲ್ಲಿ ನನಗಿಂತ ಯಾರೂ ಹೆಚ್ಚಿಗೆ ಅಂಕಗಳನ್ನು ಪಡೆದಿಲ್ಲವೆಂಬುದು ತಿಳಿಯಿತು. ಇದನ್ನು ಕಂಡ ಅನೇಕ ಅಧ್ಯಾಪಕರು ಆಶ್ಚರ್ಯ ವ್ಯಕ್ತಪಡಿಸಿದರು. ಕಾರಣ ನಾನು ಮುಸ್ಲಿಂ ಎಂಬುದು. ಇಂಥ ಅನೇಕ ಪ್ರಸಂಗಗಳು ನನ್ನನ್ನು ಘಾಸಿಗೊಳಿಸಿದ್ದುಂಟು. ಮುಸ್ಲಿಮರೊಡನೆ ವ್ಯವಹರಿಸಬೇಕೆಂದರೆ ಅವರ ಭಾಷೆ ಸರಿಯಾಗಿ ಬರದೆ ಮತ್ತು ಅವರೊಡನೆ ವ್ಯವಹರಿಸಿ ಅಭ್ಯಾಸವಿಲ್ಲದೆ ಅಸಹಜವೆನಿಸುತ್ತಿತ್ತು. ಇಂಥ ತ್ರಿಶಂಕು ಸ್ಥಿತಿಯಲ್ಲಿ ದಿನಗಳು ಉರುಳುತ್ತಲೇ ಹೋದವು. ಪರಕೀಯತೆ ಕಾಡುತ್ತಲೇ ಇತ್ತು."[೧೫]

**ಆ.** ಅಬ್ಬಾಸ್ ಮೇಲಿನಮನಿ ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ ಮಾಡುವ ಸಂದರ್ಭದಲ್ಲಿ ಆದ ಅವಮಾನವನ್ನು ಹೀಗೆ ಹೇಳಿಕೊಳ್ಳುತ್ತಾರೆ. "ಒಂದು ಮತ್ತು ಎರಡನೇ ಸೆಮಿಸ್ಟರ್‌ನ ಫಲಿತಾಂಶ ಬಂದಾಗ ಶೇಕಡ ೬೪ ಅಂಕಗಳನ್ನು ತೆಗೆದುಕೊಂಡಿದ್ದೆ. ಮೂರನೇ ಸೆಮಿಸ್ಟರ್ ಬಂದಾಗ ಉಪನ್ಯಾಸಕರು ನನ್ನನ್ನು ಕರೆಸಿ 'ಏನ್ ಮೇಲಿನಮನಿ ನೀನು ಮುಸ್ಲಿಮ?' ಎಂದು ಕೇಳಿದರು. ನಾನು 'ಹೌದು ಎಂದು ಏಕೆ ಸರ್' ಎಂದು ಕೇಳಿದೆ. 'ಏನಿಲ್ಲ ಇಷ್ಟೊಂದು

ಅಂಕಗಳನ್ನು ತೆಗೆದುಕೊಂಡಿದೀಯ' ಎಂದರು. ಆಗ ನಾನು 'ಯಾಕೆ ಸರ್ ತೆಗೆಯಬಾರದ' ಎಂದೆ. 'ಸರಿ' ಎಂದರು. ನಂತರದ ಪರೀಕ್ಷೆಗಳಲ್ಲಿ ನನಗೆ ಕಡಿಮೆ ಅಂಕಗಳನ್ನು ಕೊಟ್ಟರು."[೧೬]

ಮುಸ್ಲಿಮರು ವಲಸೆ ಬಂದಿರುವವರು ಈ ನೆಲದವರಲ್ಲವೆಂಬ ಸ್ಥಾಪಿತ ಅಭಿಪ್ರಾಯ ಹಾಗೂ ಮುಸ್ಲಿಮರೂ ಸಹ ಕನ್ನಡದವರು ಎಂಬ ತಿಳುವಳಿಕೆಯು ಯಾವ ಮೂಲದಿಂದಲೂ, ಜನಸಾಮಾನ್ಯರಿಗೆ ತಲುಪದಿರುವುದರಿಂದ ಲೇಖಕರು ಪರಕೀಯತೆ ಅನುಭವಿಸುವಂತಾಗಿದೆ. ರಂಜಾನ್ ದರ್ಗಾ ಹಾಗೂ ಅಬ್ಬಾಸ್ ಮೇಲಿನಮನಿ ಅವರು ಈ ಬಗೆಯ ಸಾಂಸ್ಕೃತಿಕ ಪರಕೀಯತೆಗೆ ಒಳಗಾಗಿರುವವರು. ಇಲ್ಲಿ ಭಾಷಿಕ ಪರಕೀಯತೆಯೂ ಸಾಮುದಾಯಿಕ ಹಿನ್ನೆಲೆಯನ್ನು ಹೊಂದಿದೆ. ಲೇಖಕರು  ಕನ್ನಡದಲ್ಲಿ ಅತಿ ಹೆಚ್ಚು ಅಂಕ ತೆಗೆದಿದ್ದಾರೆ ಎಂದರೆ ಅದು ಭಾಷೆಯನ್ನು ತಮ್ಮದೆಂದು ಭಾವಿಸಿದ ಮೇಲೆಯೇ ಸಾಧ್ಯವಾಗಿರುವಂತಹದ್ದು. ಇದರ ಅರಿವು ಇಲ್ಲದೆ ಅವಮಾನಿಸುವುದು ಮತ್ತು ಅತಿ ಹೆಚ್ಚು ಅಂಕ ತೆಗೆದದ್ದಕ್ಕಾಗಿ ನಂತರದ ಪರೀಕ್ಷೆಯಲ್ಲಿ ಕಡಿಮೆ ಅಂಕ ನೀಡುವುದು ಧರ್ಮಾಧಾರಿತವಾಗಿಯೇ ಆಗುವ ಅವಮಾನವಾಗಿವೆ. ಭಾಷೆಗೆ ಜಾತಿ, ಧರ್ಮ, ಲಿಂಗದ ಮಡಿವಂತಿಕೆಯನ್ನು ಆರೋಪಿಸಿರುವ ಸಾಮಾಜಿಕ ವ್ಯವಸ್ಥೆಗೆ 'ಯಾಕ್ ಸರ್ ತೆಗೆಯಬಾರದ' ಎಂಬ ಮೇಲಿನಮನಿಯವರ ಮರು ಪ್ರಶ್ನೆಯು ಪ್ರತಿರೋಧದ ಭಾಗವಾಗಿದ್ದರೂ, ಈ ಘಟನೆಯನ್ನು ಲೇಖಕರು ಅನುಭವಿಸುವ ಮತ್ತು ಅಭಿವ್ಯಕ್ತಿಸುವ ಕಾಲದಲ್ಲೂ ಅಸಹಾಯಕತೆ ಮಡುಗಟ್ಟಿರುವುದು ನಿಚ್ಚಳವಾಗಿದೆ.

**೭.೧.೯.** ಬ್ಯಾರಿ ಮತ್ತು ಅವಮಾನಗಳು: ಹಿಂದೂಗಳಲ್ಲಿಯೂ ಸಹ ತಳಸಮುದಾಯಗಳ ಹೆಸರುಗಳನ್ನು ಏಕಕಾಲಕ್ಕೆ ಜಾತಿಸೂಚಕವಾಗಿಯೂ ಹಾಗೂ ಜಾತಿ ನಿಂದಕವಾಗಿಯೂ ಬಳಸಿರುವುದು ಬಿ.ಎಂ ಬಶೀರ್ ಅವರ 'ಬಾಡೂಟದೊಂದಿಗೆ ಗಾಂಧಿ ಜಯಂತಿ' ಪಠ್ಯದಲ್ಲಿ ಉಲ್ಲೇಖವಾಗಿದೆ. "ಕಳೆದ ಮೂರು ದಶಕಗಳಲ್ಲಿ 'ಬ್ಯಾರಿ' ಎನ್ನುವ ಶಬ್ದ ಬಳಕೆಯಾಗುತ್ತಿದ್ದುದು ಕರಾವಳಿ ಮುಸ್ಲಿಮರನ್ನು ಅವಮಾನಗೊಳಿಸುವುದಕ್ಕಾಗಿ ಮಾತ್ರವಾಗಿತ್ತು. 'ಬ್ಯಾರಿ ಬುದ್ಧಿ ತೋಜ್ಪಾವೊಡ್ಚಿ(ಬ್ಯಾರಿ ಬುದ್ಧಿ ತೋರಿಸಬೇಡ), 'ಮಲ್ಲ ಬ್ಯಾರಿ ಮಾರಾಯ(ಭಯಂಕರ ಬ್ಯಾರಿ ಮಾರಾಯ)' ದಾನೆಂಬೆ ಬ್ಯಾರಿ(ಏನೋ ಬ್ಯಾರಿ)' ಮೊದಲಾದ ಪದಗಳು ಕರಾವಳಿಯ ಜನಜೀವನದ ಭಾಗವಾಗಿದ್ದವು"[೧೭] ಎನ್ನುವ ವಿವರವಿದೆ. ಈ ವಿವರಗಳ ಜೊತೆಗೆ ಅದೇ ಆತ್ಮಕಥೆಯಲ್ಲಿ ಲೇಖಕರು "ಎಲ್ಲಕ್ಕಿಂತ ಮುಖ್ಯವಾಗಿ ಮಲಯಾಳಿಗಳಿಂದ ಈ ಸಮುದಾಯ ಮತ್ತು ಅವರು ಆಡುವ ಭಾಷೆ ತಿರಸ್ಕೃತವಾಗಿದ್ದವು. ಕರಾವಳಿಯ ಮುಸ್ಲಿಮರನ್ನು ನಿಂದಿಸಲು 'ಸೂ.. ಮಗ, ಬೇ.. ಬೋ..ಮಗ' ಇತ್ಯಾದಿಗಳನ್ನು ಬಳಸಬೇಕೆಂದಿರಲಿಲ್ಲ. 'ಬ್ಯಾರಿ!' ಎಂದರೆ ಸಾಕಿತ್ತು"[೧೮] ಎಂದು ಬರೆದುಕೊಳ್ಳುತ್ತಾರೆ. ಭಾಷೆ ಕೇವಲ ಒಂದು ಮಾಧ್ಯಮವಲ್ಲ, ಅದು ಸಮುದಾಯದ ಸಾಂಸ್ಕೃತಿಕ ಅಸ್ತಿತ್ವವೂ ಆಗಿದೆ. ಮೇಲ್ಕಂಡ ಸನ್ನಿವೇಶದಲ್ಲಿ ಬ್ಯಾರಿ ಎಂಬ ಪದವು ಕರಾವಳಿ ಮುಸ್ಲಿಮರ ಭಾಷೆಯನ್ನು ಹಾಗೂ ಸಮುದಾಯವನ್ನು ಅವಮಾನಿಸುವುದರ ಭಾಗವಾಗಿ

ಬಳಕೆಯಾಗಿದೆ. ಲೇಖಕರು ಬ್ಯಾರಿ ಎನ್ನುವುದನ್ನು ನಿಕೃಷ್ಟ ಬೈಗುಳಗಳಿಗೆ ಹೋಲಿಸುವುದು ಬ್ಯಾರಿ ಸಮುದಾಯ ಅನುಭವಿಸುವ ನಿಂದನೆಗಳ ಪ್ರಮಾಣವನ್ನು ಓದುಗರ ಅರಿವಿಗೆ ತರುತ್ತದೆ. ಇದರ ಜೊತೆಗೆ 'ನನ್ನನ್ನು ಬ್ಯಾರಿ ಎಂದು ಕರೆದರೆ ಹುಷಾರ್' ಎಂಬ ಶೀರ್ಷಿಕೆಯನ್ನಿಟ್ಟಿರುವುದು ಸ್ವಾಭಿಮಾನದ ಸಂಕೇತವಾಗಿಯೂ ಮತ್ತು ಅಪಮಾನಿಸುವವರಿಗೆ ಎಚ್ಚರಿಸುವ ಭಾಗವಾಗಿಯೂ ಇರುವುದನ್ನು ಕಾಣಬಹುದಾಗಿದೆ.

೭.೧.೧೦. ಅವಮಾನಗಳಿಗೆ ಲೇಖಕರು ತೋರಿದ ಪ್ರತಿರೋಧಗಳು: ಅವಮಾನಗಳಿವೆ ಎಂದಾದ ಮೇಲೆ ಪ್ರತಿರೋಧಗಳು ಕೂಡ ಇರುತ್ತವೆ. ಇವು ಕೆಲವೊಮ್ಮೆ ನೇರವಾಗಿರಬಹುದು ಅಥವಾ ಪರ್ಯಾಯ ರೂಪಗಳಲ್ಲಿಯೂ ಇರಬಹುದು. ಅವಮಾನಗಳಿಗೆ ಒಳಗಾದ ಆಯಾ ಸಮುದಾಯಗಳು ತೋರಿದ ವಿಭಿನ್ನ ಬಗೆಯ ಪ್ರತಿರೋಧಗಳನ್ನು ಈ ಕೆಳಗಿನಂತೆ ಚರ್ಚಿಸಲಾಗುತ್ತದೆ.

ಅ. ಕಾಲ ಮತ್ತು ಪ್ರತಿರೋಧ: ಕೆಲವೊಮ್ಮೆ ಪ್ರತಿರೋಧಗಳು ಅಪಮಾನಿತರಿಂದಲೇ ಆಗಬೇಕೆಂದೇನು ಇರುವುದಿಲ್ಲ. ಕಾಲವೇ ಅನುಮಾನಿಸುವವರಿಗೆ ತಕ್ಕ ಪ್ರತ್ಯುತ್ತರ ಕೊಡುತ್ತಿರುತ್ತದೆ. ಇದಕ್ಕೆ ಪೂರಕವಾಗಿ ಅಬ್ಬಾಸ್ ಮೇಲಿನಮನಿಯವರು ತಮ್ಮ ಸಂದರ್ಶನದಲ್ಲಿ "ನನ್ನ ಒಂದು ಕೃತಿಗೆ ಮುಸ್ಲಿಂ ಲೇಖಕ ಪ್ರಶಸ್ತಿ ಬಂದಾಗ ಊರಿನವರು ಸಂಭ್ರಮಿಸಿದರು. ನನ್ನ ಗೆಳೆಯ 'ಅಂತು ಮುಸ್ಲಿಂ ಅಂತ ಗುರುತಿಸಿಕೊಂಡ್ಯಪ ಅಬ್ಬಾಸ. ಇಷ್ಟು ದಿನ ಬ್ಯಾರೆನೆ ತಿಳ್ಕಂಡಿದ್ವಿ, ಈಗ ಬರೋಬ್ಬರಿ ಗುರುತಿಸಿಕೊಂಡಿ' ಎಂದು ಅಪಮಾನಗೊಳಿಸಿದರು. ಮುಸ್ಲಿಮನಾಗಿರುವುದಕ್ಕೆ ನಿನಗೆ ಈ ಪ್ರಶಸ್ತಿ ಬಂದಿದೆ ಎಂದರು. ಕೆಲವು ದಿನಗಳ ನಂತರ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಪ್ರಶಸ್ತಿ ಬಂದಾಗ ಅವರ ಆರೋಪಗಳಿಗೆ ಸರಿಯಾದ ಉತ್ತರ ದೊರಕಿತು"[೧೯] ಎಂದು ಹೇಳಿಕೊಳ್ಳುತ್ತಾರೆ. ಅವಮಾನಗಳು ಹೇಗೆ ಹಲವು ರೂಪಗಳಲ್ಲಿ ಕಂಡುಬರುತ್ತದೆಯೊ ಹಾಗೆಯೇ ಪ್ರತಿರೋಧಗಳು ಕೂಡ ಹಲವು ಬಗೆಯಲ್ಲಿ ವ್ಯಕ್ತವಾಗುತ್ತವೆ. ಮುಸ್ಲಿಂ ಸಂಘಟನೆಯಿಂದ ಅಬ್ಬಾಸ್‌ರವರಿಗೆ ಪ್ರಶಸ್ತಿ ಬಂದಾಗ ಅವಮಾನಿಸಿದವರಿಗೆ ಗೊರೂರು ರಾಮಸ್ವಾಮಿ ಪ್ರಶಸ್ತಿ ಬಂದಿದ್ದು ಪ್ರತಿರೋಧ ತೋರಿದಂತಾಗಿದೆ. ಸಾಧನೆ ಎನ್ನುವುದು ಧರ್ಮಾತೀತವಾದದ್ದು ಎಂಬುದನ್ನು ಅಬ್ಬಾಸ್ ಅವರಿಗೆ ಬಂದ ಪ್ರಶಸ್ತಿಯೇ ಸಾಕ್ಷೀಕರಿಸುತ್ತದೆ. ಇಲ್ಲಿನ ಲೇಖಕರ ಅಭಿವ್ಯಕ್ತಿಯಲ್ಲಿ ಭರವಸೆ ಇದ್ದು, ಈ ಭರವಸೆಯೂ ಪ್ರತಿರೋಧದ ಅಂತಃಶಕ್ತಿಯೂ ಆಗಿದೆ.

ಆ. ಬರೆಹ ಮತ್ತು ಪ್ರತಿರೋಧ : ಬರಹ ಕೂಡ ಪ್ರತಿರೋಧದ ಅತ್ಯಂತ ಸಮರ್ಥ ಪ್ರತಿರೋಧಗಳಲ್ಲಿ ಒಂದಾಗಿದೆ. ಆತ್ಮಕಥನಕಾರರು ಅವಮಾನ ಅನುಭವಿಸಿದ ಸಂದರ್ಭಗಳಲ್ಲಿ ಎಷ್ಟೋ ಬಾರಿ ಪ್ರತಿಕ್ರಿಯೆ ಕೊಟ್ಟಿರಲು ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಬರಹವೇ ಪ್ರತಿರೋಧವಾಗಿರುತ್ತದೆ. 'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಪಠ್ಯದಲ್ಲಿ ಆಮಿರ್‌ಖಾನ್ ಅವರು "ನನ್ನ ತಾಯಿನ ನಾನು ತಾಯಿ ಎಂದು ಹೇಳಿಕೊಳ್ಳುತ್ತೇನೆ. ಪಾಕಿಸ್ತಾನ ನೋಡಿಲ್ಲ"[೨೦]

ಎಂದು ವಿಷಾದಿಸುತ್ತಾರೆ. ನೀನು ಭಾರತೀಯ ಅಲ್ಲ, ನೀನು ದೇಶದ್ರೋಹಿ ಎಂದು ಅವಮಾನಿಸುವ ಮತಾಂಧರಿಗೆ, ಇಲ್ಲ ಭಾರತ ನನ್ನ ತಾಯಿ ಎಂದು ಸಮರ್ಥಿಸಿಕೊಳ್ಳುವುದು ಅನುಮಾನಿಸುವ, ಅನಾವಶ್ಯಕವಾಗಿ ಆರೋಪಿಸುವ ಮತಾಂಧರಿಗೆ ತೋರಿದ ಪ್ರತಿರೋಧವಾಗಿದೆ. ಅಪಮಾನಿತರು ತಮ್ಮ ಅಸಹಾಯಕತೆಯ ಕಾರಣಕ್ಕೆ ವಾಸ್ತವ ಬದುಕಿನಲ್ಲಿ ಪ್ರತಿರೋಧಿಸಲಾಗದ ಎಷ್ಟೋ ಸಂಗತಿಗಳಿಗೆ ಆತ್ಮಕಥೆಗಳ ಮೂಲಕ ಉತ್ತರಿಸುತ್ತಾರೆ. ಇಲ್ಲಿನ ನನ್ನ ತಾಯಿ ಮತ್ತು ಪಾಕಿಸ್ತಾನ ನೋಡಿಲ್ಲ ಎನ್ನುವ ಅಭಿವ್ಯಕ್ತಿಗಳು ದೇಶಭಕ್ತಿಯ ಹೆಸರಲ್ಲಿ ಅಪಮಾನಿಸುವವರಿಗೆ ಸಮರ್ಥವಾಗಿ ನೀಡಿದ ಪ್ರತಿರೋಧವಾಗಿರುವುದನ್ನು ಗುರುತಿಸಬಹುದು.

ಇ. ನ್ಯಾಯಕ್ಕೆ ಸಿಕ್ಕ ಜಯ: ಅಮಾಯಕನಾದ ಆಮಿರ್‌ಖಾನ್ ಅಧಿಕಾರದ ಆಸೆಗಾಗಿ ಪ್ರಭುತ್ವ ಆರೋಪಿಸಿದ್ದ ಭಯೋತ್ಪಾದಕನೆಂಬ ಹಣೆಪಟ್ಟಿಯಿಂದ ನ್ಯಾಯವಾದ ಮಾರ್ಗದಲ್ಲಿ ಹೊರಬರುವುದು ಆರೋಪಿಸುವ ವ್ಯವಸ್ಥೆಗೆ ತೋರಿದ ಪ್ರತಿರೋಧವಾಗಿದೆ. 'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಪಠ್ಯದಲ್ಲಿ ಬರುವ ಕೆಳಗಿನ ಸನ್ನಿವೇಶಗಳನ್ನು ಗಮನಿಸಬಹುದು.

"೧೯೯೨ರ ಬಾಬ್ರಿ ಮಸೀದಿ ಧ್ವಂಸದ ಸಂದರ್ಭದಲ್ಲಿ ಆದ ಮುಂಬೈ ಹಿಂಸಾಚಾರದಲ್ಲಿ ಶಾಹಿದ್ ಆಜ್ಮಿಯನ್ನು ಬಂಧಿಸಲಾಯಿತು. ಡಿಸೆಂಬರ್ ೧೯೯೪ರಲ್ಲಿ ಟಾಡಾ ಕಾಯ್ದೆಯಡಿ ಶಿವಸೇನೆ ಮುಖಂಡ ಬಾಳಾ ಠಾಕ್ರೆ ಹತ್ಯೆಗೆ ಸಂಚು ರೂಪಿಸಿದ್ದ ಎಂದು ಈತನನ್ನು ಬಂಧಿಸಲಾಯಿತು. ಆದರೆ ಅಂತಿಮವಾಗಿ ಸರ್ವೋಚ್ಚ ನ್ಯಾಯಾಲಯವು ದೋಷಮುಕ್ತನೆಂದು ಈತನ ಬಿಡುಗಡೆಗೆ ಆದೇಶಿಸಿತು. ತನ್ನ ಬದುಕಿನ ಏಳು ವರ್ಷಗಳನ್ನು ಈತ ಜೈಲಿನಲ್ಲಿ ಕಳೆಯುವ ಸಂದರ್ಭದಲ್ಲಿ ಕಾನೂನು ವಿದ್ಯಾರ್ಥಿಯಾದ ಜೈಲಿನಿಂದ ಬಿಡುಗಡೆಗೊಳ್ಳುವ ಹೊತ್ತಿಗೆ ವಕೀಲನಾಗಿ ಹೊರಬಂದು ಭಯೋತ್ಪಾದಕ ಎಂಬ ಹಣೆಪಟ್ಟಿ ಹೊತ್ತು ಜೈಲಿನಲ್ಲಿ ಕೊಳೆಯುವ ಅಮಾಯಕರಿಗೆ ನ್ಯಾಯ ದೊರಕಿಸುವಲ್ಲಿ ಹೋರಾಡುತ್ತಿದ್ದವನು."[೨೧]

"ನ್ಯಾಯಾಧೀಶರು 'ಆರೋಪಿ ಆಮಿರ್‌ಖಾನ್ ಯಾವುದೇ ರೀತಿಯ ಸ್ಫೋಟಕ ವಸ್ತುಗಳನ್ನು ಹುಸೇನ್ ಅಂಗಡಿಯ ಸೋ ಕೇಸ್ನಲ್ಲಿ ಇಟ್ಟಿರುವುದಕ್ಕೆ ಯಾವುದೇ ಪುರಾವೆಗಳು ದಾಖಲಾಗಿರುವುದಿಲ್ಲ' ಎಂದು ನನ್ನನ್ನು ಖುಲಾಸೆಗೊಳಿಸಿದರು."[೨೨] ಮೇಲಿನ ಸನ್ನಿವೇಶಗಳಲ್ಲಿನ ಶಾಹಿದ್ ಅಜ್ಮಿ ಹಾಗೂ ಆಮಿರ್‌ಖಾನ್ ಅವರ ಹೋರಾಟಗಳು ಪ್ರತಿರೋಧದ ಸ್ವರೂಪಗಳಾಗಿವೆ. ಸತತವಾಗಿ ಏಳು ವರ್ಷಗಳ ಶಿಕ್ಷೆ ಅನುಭವಿಸಿದ್ದ ಶಾಹಿದ್ ಆಜ್ಮಿ ಹಾಗೂ ೧೪ ವರ್ಷಗಳ ಕಾಲ ಭಯೋತ್ಪಾದಕನೆಂಬ ಅವಮಾನವನ್ನು ಅನುಭವಿಸಿದ್ದ ಆಮಿರ್‌ಖಾನ್; ಇವರಿಬ್ಬರೂ ನ್ಯಾಯಾಂಗ ವ್ಯವಸ್ಥೆಯ ತೀರ್ಪಿನ ಮೂಲಕ ತಮಗೆ ಅವಮಾನಗೊಳಿಸಿದ್ದ ಈ ಅವ್ಯವಸ್ಥೆಗೆ ನಿರಪರಾಧಿಗಳೆಂದು ಸಾಬೀತು ಪಡಿಸಿದ್ದು, ಅವಮಾನಿಸುವ ವ್ಯವಸ್ಥೆಗೆ ತೋರಿದ ಪ್ರತ್ಯುತ್ತರವಾಗಿದೆ. ಆದರೆ ಲೇಖಕರು ತನ್ನನ್ನು ಭಯೋತ್ಪಾದಕನೆಂದು ಆರೋಪಿಸಿದ ವ್ಯವಸ್ಥೆಯ ಕುರಿತು ಆಕ್ರೋಶವನ್ನು ವ್ಯಕ್ತಪಡಿಸದೆ ತಣ್ಣನೆಯ ಧಾಟಿಯಲ್ಲಿಯೇ

ನಿರೂಪಿಸುತ್ತಾರೆ. ಇಲ್ಲಿ ಆರೋಪಗಳಿಗೆ ತಕ್ಷಣ ಪ್ರತಿರೋಧಿಸಲು ಸಾಧ್ಯವಾಗದಿದ್ದರೂ ಕಾಲಾಂತರದಲ್ಲಿ ತಕ್ಕ ಪ್ರತಿರೋಧ ತೋರಿರುವುದನ್ನು ಆತ್ಮಕಥೆಯಲ್ಲಿ ಗುರುತಿಸಬಹುದಾಗಿದೆ.

**ಈ.** ಸ್ವಾಭಿಮಾನ ಮತ್ತು ಪ್ರತಿರೋಧ : ಭಾಷಿಕವಾಗಿ ಬಂದಂತಹ ಜಾಗೃತಿಯೂ ಸಾಮುದಾಯಿಕ ಎಚ್ಚರಿಕೆಯೂ ಆಗಿದೆ. ಜಾತಿ ಅಸ್ಮಿತೆಯು ಸ್ವಾತಂತ್ರ್ಯ ಬಂದ ನಂತರ ಭಾರತದಲ್ಲಿ ತೀವ್ರ ಸ್ವರೂಪವನ್ನು ಪಡೆಯಿತು. ಹೀಗಾಗಿ ಜಾತಿ ಅಸ್ಮಿತೆ ಜೊತೆ ಭಾಷಿಕ ಅಸ್ಮಿತೆಯೂ ಪ್ರಭಾವ ಬೀರಿತು. 'ನನ್ನನ್ನು 'ಬ್ಯಾರಿ' ಎಂದು ಕರೆದರೆ ಹುಷಾರ್' ಎಂಬ ಆತ್ಮಕಥನಾತ್ಮಕ ಬರಹದಲ್ಲಿ ಬಿ.ಎಂ.ಬಶೀರ್ ಅವರು "ಇಂತಹ ಒಂದು ಭಾಷೆ ಏಕಾಏಕಿ ಆತ್ಮವಿಶ್ವಾಸದೊಂದಿಗೆ ತಲೆ ಎತ್ತಿ ನಿಂತಿದ್ದು, ೯೦ರ ದಶಕದಲ್ಲಿ. ಕೆಲವು ಬ್ಯಾರಿ ಸಾಹಿತಿಗಳು. ಮುಖಂಡರು ಒಂದಾಗಿ 'ನಾವೆಲ್ಲ ಬ್ಯಾರಿಗಳು' ಎಂದು ಘೋಷಿಸಿಕೊಂಡರು. ಬ್ಯಾರಿ ಸಮಾವೇಶದಲ್ಲಿ ಸರ್ವ ಬ್ಯಾರಿಗಳು ಒಂದಾಗಿ ತಮ್ಮ ಸಾಹಿತ್ಯ, ಸಂಸ್ಕೃತಿಯನ್ನು ಅಭಿವ್ಯಕ್ತಿಗೊಳಿಸಿದಾಗ ಕರಾವಳಿಯ ಇತರ ಮೇಲ್ವರ್ಣೀಯ ತುಳುವರು 'ಅಪರಾಧಿಗಳಂತೆ' ತಲೆ ತಗ್ಗಿಸಿದರು. ಆ ಒಂದು ಸಮ್ಮೇಳನದಲ್ಲಿ ಬ್ಯಾರಿ ಭಾಷೆ, ಸಮುದಾಯ ತನ್ನ ಅವಮಾನ, ಕೀಳರಿಮೆ ಇತ್ಯಾದಿಗಳನ್ನು ಕೊಡವಿ ತಲೆಯೆತ್ತಿ ನಿಂತಿತು"[೨೩] ಎಂದು ಬರೆದುಕೊಳ್ಳುತ್ತಾರೆ.

ವೈಚಾರಿಕ ಶಿಕ್ಷಣ ಮತ್ತು ಕಾಲ ಏನನ್ನಾದರೂ ಬದಲಾಯಿಸುತ್ತದೆ ಎಂಬುದಕ್ಕೆ ಒಂದು ಕಾಲದಲ್ಲಿ ಕೀಳಿರಿಮೆಯಿಂದ ನರಳುತ್ತಿದ್ದ ಬ್ಯಾರಿ ಸಮುದಾಯವು ವೈಚಾರಿಕ ಜಾಗೃತಿಯ ಮೂಲಕ ಸ್ವಾಭಿಮಾನವನ್ನು ಗಳಿಸಿಕೊಂಡಿರುವುದೇ ಉದಾಹರಣೆಯಾಗಿದೆ. ಅಪಮಾನಿತ ಪದವಾಗಿದ್ದ ಬ್ಯಾರಿ ಪದವು ಸಾಂಸ್ಕೃತಿಕವಾಗಿ ಮುಂದುವರಿಯುವುದರ ಕಡೆ ಚಲಿಸುತ್ತಿರುವುದು ಮೇಲ್ವರ್ಗದ ತುಳುವರ ಶೋಷಣೆಗೆ ನೀಡಿದ ಪ್ರತಿರೋಧವಾಗಿದೆ. ನಿಕೃಷ್ಟತೆಗೆ ಒಳಗಾಗಿದ್ದ ಬ್ಯಾರಿ ಭಾಷೆ ಮತ್ತು ಸಮುದಾಯ ಇಂದು ಸ್ವತಂತ್ರವಾದ ಅಕಾಡೆಮಿಯನ್ನು ಹೊಂದಿದ್ದು, ಲೇಖಕರು 'ನನ್ನನ್ನು ಬ್ಯಾರಿ ಎಂದು ಕರೆದರೆ ಹುಷಾರ್' ಎಂದು ಬರೆದುಕೊಳ್ಳುವುದು ಸ್ವಾಭಿಮಾನ ಮತ್ತು ಅಪಮಾನಗಳಿಂದ ಹೊರಬರುವುದರ ಸಂಕೇತವಾಗಿರುವುದನ್ನು ಧ್ವನಿಸುತ್ತಿದೆ.

### ೭.೨. ಸ್ವಧರ್ಮೀಯರಿಂದಲೇ ಆಗುವಂತಹ ಅವಮಾನ ಮತ್ತು ಪ್ರತಿರೋಧ:

ಶ್ರೇಣೀಕರಣವು ಪ್ರವೇಶ ಪಡೆಯದ ಕ್ಷೇತ್ರಗಳು ಬಹುತೇಕ ಇಲ್ಲವೆನ್ನಬಹುದು. ಅದರಂತೆ ಧರ್ಮಗಳೂ ಕೂಡ ಹಲವು ಶ್ರೇಣೀಕರಣಗಳನ್ನು ಒಳಗೊಂಡಿದೆ. ಹಿಂದೂ ಧರ್ಮವು ಜಾತಿ ಹೈರಾರ್ಕಿಗಳನ್ನು ಒಳಗೊಂಡಿರುವಂತೆ ಜಗತ್ತಿನ ಇತರೆ ಧರ್ಮಗಳು ಸಹ ಜಾತಿ ಅಸಮಾನತೆಯನ್ನು ಒಳಗೊಂಡಿವೆ. ಕ್ರೈಸ್ತ ಧರ್ಮದಲ್ಲಿ ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟಂಟ್ ಎಂಬ ಶ್ರೇಣೀಕರಣಗಳಷ್ಟೇ ಅಲ್ಲದೆ. ಮತಾಂತರ ಹೊಂದಿದವರು ತಮ್ಮ ಪೂರ್ವಾಶ್ರಮ ಧರ್ಮದ ಜಾತಿ ಅಸಮಾನತೆಗಳ ಪ್ರಭಾವಗಳಿಂದ ಅವಮಾನಗಳನ್ನು ಅನುಭವಿಸುವುದನ್ನು ಕಾಣುತ್ತೇವೆ.

### ೭.೨.೧ ಕ್ರೈಸ್ತ ಧರ್ಮದೊಳಗಿನ ಶ್ರೇಣೀಕರಣ

ಧಾರ್ಮಿಕ ವ್ಯವಸ್ಥೆಯಲ್ಲಿ ಶ್ರೇಣೀಕರಣವು ಸಹಜವಾದ ಸಂಗತಿಯಾಗಿದ್ದರೂ ಈ ಶ್ರೇಣೀಕರಣವು ಧರ್ಮದ ಆಚೆಗೂ ಪ್ರಭಾವ ಬೀರುವುದನ್ನು ಭಾಮ ಅವರ 'ತಾಳೇಗರಿ'ಯ ಕೆಳಗಿನ ಸನ್ನಿವೇಶಗಳಲ್ಲಿ ಕಾಣಬಹುದು.

ಅ. ಪೂರ್ವಾಶ್ರಮದ ಪ್ರಭಾವ ಮತ್ತು ಅವಮಾನಗಳು: "ಇವತ್ತು ಚರ್ಚನ್ನ ನೋಡಿದ್ರೆ ಅದು ಪಾದ್ರಿಗಳು, ನನ್‌ಗಳು ಮತ್ತೆ ಅವರ ನೆಂಟರಿಷ್ಟರಿಂದ ತುಂಬೋಗಿದೆ. ಅವರ್‍ಯಾರು ಅಂತ ನೋಡಿದ್ರೆ ಎಲ್ಲ ಮೇಲ್ಜಾತಿಯೋರೇ. ಅವರೇ ಅಧಿಕಾರದ ಸ್ಥಾನಗಳಲ್ಲಿ ಇರೋದು. ಆದರೆ ಇಡಿ ಕ್ರೈಸ್ತ ಸಮುದಾಯನ ನೋಡಿದ್ರೆ ಅದ್ರಲ್ಲಿ ಬಹಳಷ್ಟು ಜನ ಕೆಳವರ್ಗದೋರು ಮತ್ತೆ ದಲಿತರು ಇದ್ದಾರೆ. ಮೇಲ್ಜಾತಿ ಜನ ಕೆಲವರೇ ಇದ್ರು ಅಧಿಕಾರ ಹಿಡಿದಿದ್ದಾರೆ."[೨೪]

"ಅವರನ್ನೆಲ್ಲಾ ನಮ್ಮನೆಗಳ ಒಳಗೆ ಹೇಗೆ ಬಿಡಕ್ಕೆ ಸಾಧ್ಯ? ಕೊನೆಗೆ ನಾವೇ ಬಿಟ್ಕೊಬೇಕು ಅಂತ ಕರೆದ್ರೂ, ಅವರೇ ನಮ್ಮನೆ ಒಳಗೆ ಬರಲ್ಲ. ಅವರಿಗೇ ತಮ್ಮ ಜಾಗ ಯಾವ್ದು ಅಂತ ಗೊತ್ತಿದೆ."[೨೫]

"ಆ ಸ್ಮಶಾನದಲ್ಲಿ ನಾವು ದಲಿತ ಕ್ರಿಶ್ಚಿಯನ್ನರಷ್ಟೆ ಹೆಣ ಹೂಳ್ತಾ ಇದ್ವಿ, ಮೇಲ್ಜಾತಿ ಕ್ರಿಶ್ಚಿಯನ್ನರ ಸ್ಮಶಾನ ಬೇರೆ ಕಡೆಗಿತ್ತು."[೨೬]

"ಚರ್ಚಲ್ಲಿ ಸಂಖ್ಯೆಯಿಂದ ದಲಿತರೇ ಅತಿ ಹೆಚ್ಚು ಆದ್ರೆ ಉಳಿದಿದ್ದಕ್ಕೆ ಅವರು ಲೆಕ್ಕಕ್ಕೆ ಇಲ್ಲ. ಮೇಲ್ಜಾತಿ ಕ್ರಿಶ್ಚಿಯನ್ನರಷ್ಟೆ ಚರ್ಚಿನ ಎಲ್ಲ ಸವಲತ್ತು ಸೌಭಾಗ್ಯ ಪಡಕಂಡಿರೋರು. ಪಾದ್ರಿ, ನನ್‌ಗಳ ವಿಷಯಕ್ಕೆ ಬಂದ್ರೂ ಎಲ್ಲ ಮೇಲ್ಜಾತಿಯೋರೆ ಆಯಕಟ್ಟಿನ ಜಾಗದಲ್ಲಿ ಕೂತಿರೋರು. ದಲಿತರೇನಾದ್ರೂ ಪಾದ್ರಿನೋ, ನನ್ನೋ ಆದರೆ ಮೂಲೆಗೆ ಹಾಕಿ ಬದಿಗೆ ಸರಿಸಿಬಿಡ್ತಾರೆ."[೨೭]

ಹಿಂದೂ ಧರ್ಮದೊಳಗಿರುವ ಜಾತಿ ಅಸಮಾನತೆಯ ಪ್ರಭಾವ ಇತರೆ ಧರ್ಮಕ್ಕೆ ಮತಾಂತರವಾದರೂ ಮುಂದುವರಿದು ಕ್ರೈಸ್ತ ಧರ್ಮದೊಳಗೂ ಹಲವು ತರತಮಗಳನ್ನುಂಟು ಮಾಡಿರುವುದರ ಕುರಿತು ಲೇಖಕರಲ್ಲಿ ಒಂದು ಬಗೆಯ ಅಸಮಧಾನವಿದೆ. ಈ ಅಸಮಧಾನವು ವೈಯಕ್ತಿಕ ಲಾಭಗಳ ನಿರೀಕ್ಷೆಯಿಂದ ಬಂದಿರುವಂತಹದ್ದಲ್ಲ, ಅದು ಸಾಮುದಾಯಿಕ ಪ್ರಜ್ಞೆಯ ಹಿನ್ನೆಲೆಯನ್ನು ಒಳಗೊಂಡಿದೆ. ದಲಿತ ಕ್ರೈಸ್ತರ ಮೇಲೆ ಮೇಲ್ಜಾತಿ ಕ್ರೈಸ್ತರು ಮಾಡುತ್ತಿರುವ ಶೋಷಣೆಯ ವಿರುದ್ಧವಾಗಿದೆ. ಕ್ರೈಸ್ತ ಧರ್ಮದೊಳಗೆ ಕ್ಯಾಥೊಲಿಕ್ ಪಂಥವು ಬಹುತೇಕ ಬ್ರಾಹ್ಮಣ, ಬಂಟ್‌ರಿಂದ ಮತಾಂತರಗೊಂಡ ಮೇಲ್ಜಾತಿಯವರಿಂದ ಕೂಡಿದ ಗುಂಪಾದರೆ, ಪ್ರಾಟೆಸ್ಟಂಟ್ ವರ್ಗವು ತಳಸಮುದಾಯದವರ ಮತಾಂತರದಿಂದ ಕೂಡಿದ ಗುಂಪಾಗಿದೆ. ಈ ಗುಂಪುಗಳಲ್ಲಿ ಧರ್ಮಾಧಾರಿತ ಪದವಿ, ಅಧಿಕಾರಗಳಲ್ಲಿ ಮೇಲ್ಜಾತಿ ಕ್ರೈಸ್ತರು ಪ್ರಮಾಣಾತ್ಮಕವಾಗಿ ಹೆಚ್ಚಾಗಿದ್ದು,

ಗುಣಾತ್ಮಕವಾಗಿ ದಲಿತ ಕ್ರೈಸ್ತರಿಗೆ ಶೋಷಕರಾಗಿರುವುದನ್ನು ಲೇಖಕರು ಇಲ್ಲಿ ವ್ಯಕ್ತಪಡಿಸಿದ್ದಾರೆ. ಈ ಶ್ರೇಣೀಕರಣದ ಮುಂದುವರಿಕೆಯೂ ಸಮಾಧಿ ಸ್ಥಳದಲ್ಲೂ ಕಂಡುಬರುವುದು ಅಪಮಾನಿತ ಬದುಕಿನ ಸಾಂಕೇತಿಕವಾಗಿದೆ. ಜೊತೆಗೆ ಈ ಮೇಲಿನ ಕೊನೆಯ ಉಲ್ಲೇಖದಲ್ಲಿನ 'ನಾವೇ ಬಿಟ್ಕೊಬೇಕು ಅಂತ ಕರೆದ್ರೂ, ಅವರೇ ಬರಲ್ಲ' ಎನ್ನುವ ಮಾತು ಮೇಲ್ಜಾತಿಗಳ ಜಾಣ ತಂತ್ರವಾಗಿರುವುದರ ಸಾಂಕೇತಿಕವಾಗಿದೆ. ತಲೆತಲಾಂತರದಿಂದ ಬಂದಿರುವ ಜಾತಿ ಶ್ರೇಣೀಕರಣಕ್ಕೆ ಸಾಂಪ್ರದಾಯಿಕ ಆಯಾಮವಿದೆ. ಮೇಲ್ಜಾತಿಯವರ ಮನೆ, ಗುಡಿ ಒಳಗೆ ದಲಿತರು ಹೋದರೆ ದೇವರು ಕ್ಷಮಿಸಲ್ಲ, ಊರಿಗೆ ಒಳ್ಳೆಯದಾಗಲ್ಲ ಎನ್ನುವುದೇ ಮೂಢನಂಬಿಕೆಯಾಗಿದೆ. ಇಂತಹ 'ನಂಬಿಕೆ'ಗಳ ಕಾರಣದಿಂದ ಅಸ್ಪೃಶ್ಯರು ಪ್ರವೇಶಿಸಲು ನಿರಾಕರಿಸುತ್ತಾರೆ. ಈ ಸತ್ಯ ಗೊತ್ತಿರುವ ಮೇಲ್ಜಾತಿಯವರು ತಮ್ಮ ತಪ್ಪನ್ನು ಮತ್ತೆ ಅಸ್ಪೃಶ್ಯರ ಮೇಲೆಯೇ ಹೊರಿಸುವ ಪ್ರಯತ್ನ ಮಾಡುತ್ತಾರೆ. ತರತಮಗಳನ್ನು ಉಳಿಸಿಕೊಳ್ಳುವ ಇಂತಹ ಮೇಲ್ಜಾತಿಗಳ ಜಾಣತಂತ್ರಗಳನ್ನು ಪ್ರಸ್ತುತ ಆತ್ಮಕಥೆಯು ವಿಷಾದೀಕರಿಸುತ್ತದೆ.

ಆ. ಸ್ವಧರ್ಮ ಮತ್ತು ಭಾಷಿಕ ಅವಮಾನಗಳು: ಪೂರ್ವೋಕ್ತ ಉಪ ಅಧ್ಯಾಯಗಳಲ್ಲಿ ಅನ್ಯ ಧರ್ಮಿಯರ ನಡುವೆ ನಡೆಯುವ ಭಾಷಿಕ ಅವಮಾನಗಳ ಕುರಿತು ಚರ್ಚಿಸಿದ್ದರೆ, ಪ್ರಸ್ತುತ ಉಪ ಅಧ್ಯಾಯವು ಒಂದೇ ಧರ್ಮಿಯರ ನಡುವೆ ನಡೆಯುವಂತಹದ್ದಾಗಿದೆ. 'ಸ್ಮೃತಿ ಶಿಲ್ಪಿ ಫಾದರ್ ಅಂತಪ್ಪ' ಪಠ್ಯದಲ್ಲಿ ಅಂತಹ ಪ್ರಸ್ತಾವಗಳಿದ್ದು, ಅವುಗಳು ಹೀಗಿವೆ. "ಕನ್ನಡ ಎಂಬ ಮೂರಕ್ಷರಗಳು ಕಿವಿಗೆ ಬಿದ್ದರೆ ಕಿವಿ ಮುಚ್ಚಿಕೊಳ್ಳುತ್ತಿದ್ದರು ಬಿಷಪ್ ಲೂರ್ದುಸ್ವಾಮಿಯವರು. ಅದಕ್ಕೆ ಅವರು ಹೂಡಿದ ಉಪಾಯತಂತ್ರವೆಂದರೆ, ಬೆಂಗಳೂರಿನ ನಕ್ಷೆಯನ್ನು ತಾವೇ ಸಿದ್ಧಪಡಿಸಿ ತಮಿಳುನಾಡಿನ ಭೂಗೋಳಕ್ಕೆ ಅಂಟಿಸಿದ್ದು. ಮಾತ್ರವಲ್ಲ ಪ್ರಾದೇಶಿಕ ಭಾಷೆ ತಮಿಳಿನಲ್ಲಿ ಪೂಜ ವಿಧಿಗಳು ಜರುಗುವಂತೆ ಪರೋಕ್ಷವಾಗಿ ಆದೇಶಿಸಿದ್ದರು. ಹೀಗೆ ಕನ್ನಡ ನಾಡಿನ ಹೃದಯ 'ಬೆಂಗಳೂರು' ತಮಿಳುನಾಡಿಗೆ ಸೇರಿತು. ತಮಿಳು ಭಾಷೆ ಬಳಕೆಗೆ ಎಲ್ಲಾ ದ್ವಾರಗಳು ಮುಕ್ತವಾಗಿ ತೆರೆದವು. ಬೆಂಗಳೂರು ನಗರ ಮತ್ತು ಕೆಜಿಎಫ್‌ನಲ್ಲಿ ತಮಿಳು ಚರ್ಚಿನ 'ಪ್ರಧಾನ ಭಾಷೆ' ಎಂದು ಆದೇಶಿಸಿದರು. ತಮಿಳಿನಲ್ಲಿ ಪೂಜಾಪುಸ್ತಕ, ವಾಚನ ಪುಸ್ತಕ ಮುಂತಾದವು ಭಾಷಾಂತರಗೊಂಡವು."[೨೮]

"ಕನ್ನಡ ಅನುಷ್ಠಾನದ ಬಗ್ಗೆ ಇದ್ದ ಕಾಳಜಿ ಮತ್ತು ಬದ್ಧತೆಯನ್ನು ಗಮನಿಸುತ್ತಿದ್ದ ಬಿಷಪ್ ಲೂರ್ದುಸ್ವಾಮಿ ಒಮ್ಮೆ ಹೀಗೆ ಉವಾಚಿಸಿದ್ದರು, "ದಿಸ್ ಫೆಲೋ ಈಸ್ ಬ್ಯೂಸಿ, ಆಲ್ ದಿ ಟೈಮ್ ವಿತ್ ಕನ್ನಡ" (ಈ ಮನುಷ್ಯ ಹಗಲು ರಾತ್ರಿ ಕನ್ನಡ ಕನ್ನಡ ಎಂದು ಬೊಬ್ಬೆ ಹಾಕುತ್ತಾನೆ.)[೨೯]

ಫಾದರ್ ಪಾಲ್ ಡಿಸೋಜಾ ರೆಕ್ಟರ್ ಆಗಿದ್ದರು. ಕನ್ನಡ ಹಳ್ಳಿಗಳಿಂದ ಬಂದವರೆಂದರೆ ಇವರಿಬ್ಬರೇ. ಅಲ್ಲಿಯೂ ಕೊಂಕಣಿ ಅಭ್ಯರ್ಥಿಗಳು ಇವರನ್ನು ಅಸ್ಪೃಶ್ಯರಂತೆ ನಡೆಸಿಕೊಂಡಿದ್ದಾರೆ. ಕೊಂಕಣಿಯವರಿಗೆ ಹಳ್ಳಿಯವರೆಂದರೆ ದಡ್ಡರು, ಅಯೋಗ್ಯರು, ಹಳ್ಳಿಯವರನ್ನು ಲಂಗ್ಡಾಸ್ ಎಂದು ಕರೆಯುತ್ತಿದ್ದರು. ಹಳ್ಳಿಯವರು ತಿನ್ನಲು ಮಾತ್ರ ಸೆಮಿನೆರಿಗೆ ಬರುತ್ತಾರೆ"[೩೦] ಎನ್ನುವ ವಿವರಗಳಿವೆ.

ಮೇಲಿನ ಮೂರೂ ವಿದ್ಯಮಾನಗಳು ಮೇಲ್ನೋಟಕ್ಕೆ ಭಾಷೆಯ ಕಾರಣಕ್ಕಾಗಿ ಆಗುವಂತಹ ಅವಮಾನಗಳಂತೆ ಕಂಡುಬಂದರೂ ಅವು ಕನ್ನಡ ಮಾತೃಭಾಷೆಯಾಗಿ ಹೊಂದಿರುವ ಅಸ್ಪೃಶ್ಯ ಹಿನ್ನೆಲೆಯ ಪ್ರಾಟೆಸ್ಟಂಟ್‌ರಿಗೂ ಹಾಗೂ ಸವರ್ಣೀಯ ಹಿನ್ನೆಲೆಯ ಕ್ಯಾಥೊಲಿಕರಿಗೂ ಇರುವ ತರತಮದಿಂದ ಉಂಟಾದ ಅವಮಾನಗಳಾಗಿವೆ. ಇಲ್ಲಿಯೂ ಸಹ ಹಿಂದೂ ಧರ್ಮದೊಳಗಿನ ತರತಮಗಳು ಕ್ರೈಸ್ತ ಧರ್ಮದೊಳಗಿನ ಶ್ರೇಣೀಕರಣಗಳಿಗೆ ಕಾರಣವಾಗಿ ಹಲವು ಅವಮಾನಗಳುಂಟಾಗಿವೆ. ಕೊಂಕಣಿಗಳು ಮೇಲ್ಜಾತಿ, ಮೇಲ್ವರ್ಗದವರಾಗಿದ್ದಾರೆ. ಕನ್ನಡ ಹಿನ್ನೆಲೆಯ ಸಮುದಾಯಗಳು ಜಾತಿ ಮತ್ತು ವರ್ಗಗಳೆರಡರಲ್ಲೂ ಕನಿಷ್ಠತೆಯ ಹಿನ್ನೆಲೆಯನ್ನು ಹೊಂದಿದ್ದು, ಗ್ರಾಮೀಣ ಪ್ರದೇಶದವರೇ ಹೆಚ್ಚಾಗಿರುತ್ತಾರೆ. ಇವರುಗಳಿಗೆ ಹಸಿವು ನೀಗಿಸಿಕೊಳ್ಳಲು ವಸತಿ ನಿಲಯಗಳು ಸೂಕ್ತವಾದಂತಹ ಸ್ಥಳಗಳಾಗಿದ್ದು, ಬಡವರ ಈ ಅಪೇಕ್ಷೆಯನ್ನು ಕೊಂಕಣಿಗರು ಹಳ್ಳಿಯವರು ತಿನ್ನಲು ಮಾತ್ರ ಬರುತ್ತಾರೆ ಎಂದು ನಿಂದಿಸುವುದು ಅಪಮಾನದ ಸಾಂಕೇತಿಕವಾಗಿದೆ. ಹೀಗೆ ಕ್ರೈಸ್ತ ಧರ್ಮದೊಳಗು ಇರುವ ವರ್ಗ ಮತ್ತು ಜಾತಿ ಸಂಘರ್ಷಗಳನ್ನು ಮೇಲ್ಕಾಣಿಸಿದ ಪಠ್ಯಗಳು ಚರ್ಚಿಸುತ್ತವೆ.

ಇ. ಕ್ರಿಶ್ಚಿಯಾನಿಟಿ ಮತ್ತು ಚರ್ಚಿಯಾನಿಟಿ: ಧರ್ಮ ಕೆಲವರಿಗೆ ನಂಬಿಕೆ, ಆಚರಣೆಯಾದರೆ, ಮತ್ತೆ ಕೆಲವರಿಗೆ ಉದ್ಯಮವಾಗಿರುತ್ತದೆ. ಜನಸಾಮಾನ್ಯರದು ನಂಬಿಕೆಗಳಾದರೆ, ಪುರೋಹಿತಶಾಹಿ ವ್ಯವಸ್ಥೆಯದು ಉದ್ಯಮವಾಗಿದೆ. ಇಂತಹದ್ದೇ ಸಂಗತಿಗಳು 'ಕ್ರೈಸ್ತರ ಕಣ್ಮಣಿ'ಯ ನಾ.ಡಿಸೋಜ ಅವರ ಬರಹದಲ್ಲಿ ಕೆಳಗಿನಂತೆ ಅಭಿವ್ಯಕ್ತಿಗೊಂಡಿದೆ. "ಒಂದು ವೇಳೆ ಓರ್ವ ಕ್ರೈಸ್ತ ಚರ್ಚಿಯಾನಿಟಿ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸಿದರೆ ಕೂಡಲೇ ಪಾದರಿಗಳು ಅವನನ್ನು ಕಮ್ಯುನಿಸ್ಟನೆಂದೋ, ಇಗರ್ಜಿ ಮಾತೆಯ ದ್ರೋಹಿಯೆಂದೋ, ನಾಸ್ತಿಕನೆಂದೋ ಬ್ರಾಂಡ್ ಮಾಡುವುದರಿಂದ ಈ ಬಗೆಯ ಬಿರುದು ಗಳಿಸಲು ಯಾರೂ ಮುಂದಾಗುವುದಿಲ್ಲ."[೩೧]

"ಕ್ರಿಶ್ಚಿಯಾನಿಟಿಯ ಮೇಲೆ ಇಂದು ಚರ್ಚಿಯಾನಿಟಿ ಸವಾರಿ ಮಾಡುತ್ತಿದೆ. ಹಲವು ಮೌಢ್ಯಗಳು ಧರ್ಮದ ಹೆಸರಲ್ಲಿ ಜನರ ಶೋಷಣೆ ಮಾಡುತ್ತಿವೆ. ಬಡ ಕ್ರೀಸ್ತುವರು ಪುರೋಹಿತರ ದಬ್ಬಾಳಿಕೆಗೆ ಬಲಿಯಾಗುತ್ತಿದ್ದಾರೆ. ನಾಮಕರಣ, ದೃಢೀಕರಣ, ಮದುವೆ ಮೊದಲಾದ ಧಾರ್ಮಿಕ ಕ್ರಿಯೆಗಳು ಕಿರುಕುಳದಿಂದ ನಡೆಯುತ್ತವೆ."[೩೨] ಮೇಲಿನ ಎರಡೂ ಸನ್ನಿವೇಶಗಳಲ್ಲಿ ಗಮನಿಸಬೇಕಾದದ್ದು ಕ್ರಿಶ್ಚಿಯಾನಿಟಿ ಮತ್ತು ಚರ್ಚಿಯಾನಿಟಿ ಎಂಬ ಪದಗಳು. ಕ್ರಿಶ್ಚಿಯಾನಿಟಿ ಎಂಬುದು ಧರ್ಮವಾದರೆ, ಚರ್ಚಿಯಾನಿಟಿ ಎಂಬುದು ಮೂಲಭೂತವಾದಿ ಧೋರಣೆಯ ಪ್ರತೀಕವಾಗಿದೆ. ಚರ್ಚಿಯಾನಿಟಿ ಧರ್ಮದ ಹೆಸರಿನಲ್ಲಿ ಜನರ ನಂಬಿಕೆಗಳನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುತ್ತದೆ. ಮೇಲಿನ ಸನ್ನಿವೇಶಗಳಲ್ಲಿ ನಾಮಕರಣ, ದೃಢೀಕರಣ ಮದುವೆ ಮುಂತಾದವುಗಳ ಹೆಸರಲ್ಲಿ ಕ್ರೈಸ್ತ ಪುರೋಹಿತರು ನಡೆಸುತ್ತಿದ್ದ ದೌರ್ಜನ್ಯವೇ ಇದಕ್ಕೆ ಉದಾಹರಣೆಗಳಾಗಿವೆ. ಧರ್ಮದ ಅಲ್ಲಿನ ಮೂಢಾಚರಣೆಗಳನ್ನು ವಿಮರ್ಶಿಸುವವರು ದೇಶದ್ರೋಹಿ, ಧರ್ಮದ್ರೋಹಿ, ಕಾಫೀರ್, ಇಗರ್ಜಿ ಮಾತೆಯ ದ್ರೋಹಿ ಎಂಬ ಅವಮಾನಗಳನ್ನು

ಎದುರಿಸಬೇಕಾಗುತ್ತದೆ. ಎನ್ನುವ ವಿವರಗಳು ಲೇಖಕರ ಬರೆಹದಲ್ಲಿ ಕಂಡುಬಂದಿದೆ. ಸ್ವತಃ ಡಿಸೋಜಾ ಅವರು ಸಹ ಕ್ರೈಸ್ತ ಧರ್ಮದೊಳಗಿನ ಮೂಢಾಚರಣೆಗಳನ್ನು ವಿರೋಧಿಸುವ ಕಾರಣದಿಂದ ತಮಗೆ ಬಂದ ಆರೋಪಗಳನ್ನು ಇಲ್ಲಿ ಹೇಳಿಕೊಂಡಿರುವುದು. ಕಂಡುಬಂದಿದೆ. ಆದರೆ ಈ ಅವಮಾನಗಳಾವುವು ವೈಚಾರಿಕ ಚಿಂತನೆಗಳನ್ನು ಮೊಟುಕುಗೊಳಿಸಲಾಗಿಲ್ಲ ಎನ್ನಬಹುದು. ನಾ.ಡಿಸೋಜ ಅವರ ಬರಹವೂ ಕೂಡ ಇಂತಹ ವೈಚಾರಿಕ ಆಲೋಚನೆಯ ಫಲವೇ ಆಗಿರುವುದನ್ನು ಆತ್ಮಕಥನಾತ್ಮಕ ಬರೆಹದಲ್ಲಿ ಗುರುತಿಸಬಹುದಾಗಿದೆ.

**ಈ.** ಕನ್ನಡ ಭಾಷಿಕ ಸಮುದಾಯದ ಅಸ್ತಿತ್ವ : ದಲಿತ ಕ್ರೈಸ್ತರ ಭಾಷೆ ಕನ್ನಡವಾದರೆ, ಮೇಲ್ಜಾತಿ ಕ್ರೈಸ್ತರು ತಮಿಳು ಮಾತನಾಡುವುದು ಕಂಡುಬರುತ್ತದೆ. ಈ ಕಾರಣಕ್ಕಾಗಿ ಕನ್ನಡದಲ್ಲಿ ಪ್ರಾರ್ಥಿಸುವುದನ್ನು ತಡೆಯುವ ಪ್ರಯತ್ನವನ್ನು ಮೀರುವುದು ಪ್ರತಿರೋಧದ ಭಾಗವಾಗಿದೆ. ಸ್ಮೃತಿ ಶಿಲ್ಪಿ ಫಾದರ್ ಅಂತಪ್ಪ' ಕೃತಿಯಲ್ಲಿ ಪ್ರಸ್ತಾವವೊಂದು ಹೀಗೆ ಬರುತ್ತದೆ. "ಫಾದರ್ ಅಂತಪ್ಪ ಅಧಿಕಾರ ಸ್ವೀಕರಿಸುವುದನ್ನು ತಡೆಯಲು ತಂತ್ರಗಳನ್ನು ರೂಪಿಸಿದರು. ಆದರೆ ಕನ್ನಡ ಅಭಿಮಾನಿಗಳೊಂದಿಗೆ ಅಂತಪ್ಪನವರನ್ನು ಮೆರವಣಿಗೆಯಲ್ಲಿ ತರಲಾಯಿತು. ಆಗಿನ ಕನ್ನಡ ಜ್ವರದ ಪರಿಸ್ಥಿತಿಯಲ್ಲಿ ಯಾವೊಬ್ಬ ತಮಿಳನು ಏನೂ ಮಾಡಲಾಗಲಿಲ್ಲ"[೩೩] ಎನ್ನುವ ವಿವರವಿದೆ. ಕನ್ನಡ ಭಾಷೆಯಲ್ಲಿ ಪ್ರಾರ್ಥನೆ ಮಾಡುವುದಕ್ಕೆ ಹಾಗೂ ಹಳ್ಳಿಯವರು ವಿದ್ಯಾಭ್ಯಾಸ ಮಾಡಲು ಲೂರ್ದುಸ್ವಾಮಿ ಅವಕಾಶ ಕೊಡದಿರುವುದು ಕಂಡುಬರುತ್ತದೆ. ಇದಕ್ಕೆ ಪ್ರತಿಕ್ರಿಯೆಯಾಗಿ ಕನ್ನಡದಲ್ಲಿ ಪ್ರಾರ್ಥನೆ ಮಾಡುವ ಹಾಗೂ ಉನ್ನತ ವ್ಯಾಸಂಗವನ್ನು ಪಡೆದು ಅಧಿಕಾರವನ್ನು ಹೋರಾಟ ಮಾಡಿ ಪಡೆದದ್ದು ಪ್ರಭುತ್ವಕ್ಕೆ ನೀಡಿದ ಪ್ರತಿರೋಧವಾಗಿದೆ. ಸಂಘಟನಾತ್ಮಕ ಹೋರಾಟವು ಇಲ್ಲಿನ ಪ್ರತಿರೋಧವು ಯಶಸ್ವಿಯಾಗಲು ಕಾರಣವಾಗಿರುವುದನ್ನು ಪಠ್ಯದಲ್ಲಿ ಗುರುತಿಸಬಹುದಾಗಿದೆ.

ಉ. ಕಟ್ಟುಪಾಡುಗಳನ್ನು ಮುರಿಯುವುದು: 'ತಾಳೆಗರಿ'ಯಲ್ಲಿನ ಪ್ರಸಂಗವು ವೈಚಾರಿಕ ಅರಿವು ಪಡೆದುಕೊಂಡ ಭಾಮ ಅವರು ತೋರಿದ ಪ್ರತಿರೋಧವನ್ನು ಈ ಕೆಳಗಿನಂತೆ ಅಭಿವ್ಯಕ್ತಿಸುತ್ತದೆ. ಲೇಖಕರು "ಅಂತೂ ಒಂದಿನ ನನ್ನ ತಲೆ ಮೇಲಿನ ಬಟ್ಟೇಲಿ ಮಕ ಹುದುಗಿಸ್ಕಂಡು ಯಾರ್ಗ ಕಾಣದಂಗೆ ಬೆರಳಲ್ಲಿ ಮುಟ್ಟೆಬಿಟ್ಟೆ, ಆದರೆ ನನ್ನ ಕೈಯಿಂದ ರಕ್ತ ಸುರಿದು ಹರಿಯುತ್ತೆ ಅಂದಿದ್ರು ಬೆರಳು ತೆಗೆದು ನೋಡ್ತೀನಿ, ಏನಿಲ್ಲ! ನಂಗೆ ನಾನೆ ಅಂದ್ಕೊಂಡೆ, ಈ ಸಿಸ್ಟರುಗಳು ಹೇಳಿದ್ದು ಸುಳ್ಳು"[೩೪] ಎಂದು ಬರೆದುಕೊಳ್ಳುತ್ತಾರೆ. ಧರ್ಮದ ಹೆಸರಲ್ಲಿ ಇದ್ದಂತಹ ಮೂಢನಂಬಿಕೆಗಳನ್ನು ಕುರುಡಾಗಿ ಒಪ್ಪಿಕೊಳ್ಳದೆ ಮೂಢನಂಬಿಕೆಗಳನ್ನು ಪರೀಕ್ಷಿಸಿದ್ದು ಹುಸಿ ಕಟ್ಟು ಪಾಡುಗಳಿಗೆ ಲೇಖಕರು ತೋರಿದ ಪ್ರತಿರೋಧವಾಗಿದೆ. ಈ ಪ್ರತಿರೋಧವು ವೈಚಾರಿಕ ಅರಿವನ್ನು ಪಡೆದಿರುವುದರ ಭಾಗವಾಗಿ ಬಂದಿರುವಂತಹದ್ದು. ಪ್ರತಿಯೊಂದು ಧರ್ಮವು ಸ್ಥಾಪನೆಯಾದ ಸಂದರ್ಭದಲ್ಲಿ ಇದ್ದಂತಹ ಆಚರಣೆಗಳು ಕಾಲಕ್ರಮೇಣ ಬದಲಾಗಿವೆ. ಅದಕ್ಕೆ ಕಾರಣ ವೈಚಾರಿಕ ಆಲೋಚನೆಗಳು ಮತ್ತು ಆಯಾ ಕಾಲಕ್ಕೆ

ಆಗಿರುವ ಪಲ್ಲಟಗಳು. ಇಲ್ಲಿಯೂ ಸಹ ಪರಂಪರೆಯಿಂದ ಬಂದಂತಹ ನಿರ್ಬಂಧವನ್ನು ಮೀರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ ಇಂತಹ ಕಟ್ಟುಪಾಡುಗಳಿಂದ ಹೊರಬರಬೇಕಾದ ಅನಿವಾರ್ಯತೆಯನ್ನು ದಮನಿತರಲ್ಲಿ ಉಂಟು ಮಾಡುವ ಉದ್ದೇಶ ಆತ್ಮಕಥನಕಾರದಾಗಿರುವುದನ್ನು ಆತ್ಮಕಥೆಯಲ್ಲಿ ಕಾಣಬಹುದಾಗಿದೆ.

**ಊ.** ನಿರಾಕರಣೆಯ ಪ್ರತಿರೋಧ: ಸ್ವಾಭಿಮಾನಕ್ಕೆ ಧಕ್ಕೆ ತರುವಂತಹ ಸನ್ನಿವೇಶಗಳನ್ನು ನಿರಾಕರಿಸುವುದು ಕನ್ನಡ ಆತ್ಮಕಥೆಗಳಲ್ಲಿ ಸಹಜವಾಗಿ ಕಾಣುವ ಪ್ರತಿರೋಧವಾಗಿದೆ. 'ತಾಳೀಗರಿ'ಯಲ್ಲಿನ ಅಂತಹ ಒಂದು ಸನ್ನಿವೇಶವನ್ನು ಇಲ್ಲಿ ಉಲ್ಲೇಖಿಸಲಾಗಿದೆ. "ಆ ಶಾಲೇಲಿ ಎಷ್ಟು ದಿನದ ತಂಕ ಎಣ್ಣೆ ನೀರು ಸೇರಿ ಒಟ್ಟೊಟ್ಟು ಬದುಕಬಲ್ಲವು? ಆರನೇ ತಿಂಗಳಿಗೆ ನಂಗಿನ್ನು ಸಾಕೆನಿಸಿ ನನ್ನ ಸಾಮಾನು ಪ್ಯಾಕ್ ಮಾಡಿ ಕಾನ್ವೆಂಟನಿಂದ ಹೊರಬಂದೆ"[೩೫] ಎಂದು ಬರೆದುಕೊಳ್ಳುತ್ತಾರೆ. ಪ್ರತಿರೋಧಗಳು ಯಾವಾಗಲೂ ಏಕರೂಪದಲ್ಲಿ ವ್ಯಕ್ತಗೊಳ್ಳುವುದಿಲ್ಲ. ತನ್ನ ಸ್ವಾಭಿಮಾನಕ್ಕೆ ಬೆಲೆ ಕೊಡದ ಹಾಗೂ ದಲಿತ ನನ್‌ಗಳಿಗೆ ಮಾತ್ರ ಪ್ರತ್ಯೇಕ ವ್ಯವಸ್ಥೆ ಮಾಡುವ ಕ್ರಿಶ್ಚಿಯನ್ ಶಾಲೆಯ ಆಡಳಿತ ನೀತಿಯನ್ನು ವಿರೋಧಿಸಿ ತನ್ನ ಹುದ್ದೆಯನ್ನು ತ್ಯಜಿಸಿದ್ದು ಲೇಖಕರು ಶೋಷಕ ವ್ಯವಸ್ಥೆಗೆ ನೀಡಿದ ಪ್ರತಿರೋಧವಾಗಿದ್ದು, ಇಲ್ಲಿ ಲೇಖಕರು ಶೋಷಕರು, ಶೋಷಿತರನ್ನು ಎಣ್ಣೆ ನೀರು ಎಂಬ ಭೇದಗಳ ರೂಪದಲ್ಲಿ ಅಭಿವ್ಯಕ್ತಿಸಿದ್ದಾರೆ. ಹೀಗೆ ಆತ್ಮಕಥೆಯು ದಮನಿತರಲ್ಲಿನ ಸ್ವಾಭಿಮಾನದ ಎಚ್ಚರವು ಹೇಗೆ ಪ್ರತಿರೋಧಕ್ಕೆ ಕಾರಣವಾಗುತ್ತದೆ ಎಂಬುದನ್ನು ಸಾಂಕೇತಿಸುತ್ತದೆ.

**೬.೨.೨. ಮುಸ್ಲಿಂ ಧರ್ಮದೊಳಗಿನ ಶ್ರೇಣೀಕರಣಗಳು**

**ಅ.** ಸ್ವಧರ್ಮ ಮತ್ತು ಪರಕೀಯತೆ: ಅನಕ್ಷರತೆ ಮತ್ತು ಬಡತನ ಒಂದೇ ಜಾತಿ, ಧರ್ಮ, ಕುಟುಂಬದೊಳಗೂ ಇತರರೊಂದಿಗೆ ಅಂತರವನ್ನೇರ್ಪಡಿಸುತ್ತದೆ. 'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಪತ್ರದಲ್ಲಿ ಆಮಿರ್‌ಖಾನ್ ಅವರು "ಕಾಶ್ಮೀರಿ ಮುಸ್ಲಿಮರು ಭಾರತೀಯ ಮುಸ್ಲಿಮರನ್ನು ಕೆಳಮಟ್ಟದವರಂತೆ ಕಾಣುತ್ತಿದ್ದರು. ಕಾರಣ, ನಾವು ಬಡವರು ಮತ್ತು ಅಶಿಕ್ಷಿತರೆಂಬ ಭಾವನೆ ಅವರಲ್ಲಿತ್ತು"[೩೬] ಎಂದು ಬರೆದುಕೊಳ್ಳುತ್ತಾರೆ. ನದಾಫರು, ಪಿಂಜಾರರು ಮುಸ್ಲಿಂ ಧರ್ಮದ ಒಳಪಂಗಡಗಳಾಗಿದ್ದೂ, ಅವು ಕೂಡ ಹಲವು ಬಗೆಯ ಪರಕೀಯತೆಗಳನ್ನು ಅನುಭವಿಸುತ್ತಿವೆ. ದಾವಣಗೆರೆಯ ಕವಿ ಸನಾವುಲ್ಲ ನವಿಲೇಹಾಳ್ ಅವರನ್ನು ಸಂದರ್ಶನ ಮಾಡಿದಾಗ ಮುಸ್ಲಿಂ ಧರ್ಮದೊಳಗಿನ ಶ್ರೇಣೀಕರಣಗಳನ್ನು ಕುರಿತು ಹೀಗೆ ಹೇಳುತ್ತಾರೆ. "ನದಾಫರಿಗೆ ಉರ್ದು ಬರುವುದಿಲ್ಲ. ನಮಾಜು ಗೊತ್ತಿಲ್ಲ. ಹಿಂದೂ ದೇವರುಗಳಿಗೆ ಕೈ ಮುಗಿಯುತ್ತಾರೆ ಹೀಗೆ ನದಾಫರನ್ನು ಅಥವಾ ಪಿಂಜಾರರನ್ನು ಅವರು ಮುಸ್ಲಿಮರಾಗಿದ್ದರೂ ಉರ್ದು ಮಾತಾಡುವ ಶಿಷ್ಟ ಮುಸ್ಲಿಮರು ಸಮಾನವಾಗಿ ಪರಿಗಣಿಸುವುದಿಲ್ಲ. ಅವರೊಡನೆ ಕೊಡುಕೊಳೆ ಮಾಡುವುದು ತೀರಾ ಕಡಿಮೆ"[೩೭] ಎಂದು ಹೇಳಿಕೊಳ್ಳುತ್ತಾರೆ. ಮೇಲ್ಕಂಡ ಎರಡೂ ಉಲ್ಲೇಖಗಳು ಮುಸ್ಲಿಂ ಧರ್ಮವು ದೇವರು,

ಆಚಾರ, ವಿಚಾರ ಮುಂತಾದ ವಿಷಯಗಳಲ್ಲಿ ಒಂದೇ ಬಗೆಯಲ್ಲಿದೆ ಎಂಬ ಸ್ಥಾಪಿತ ಅಭಿಪ್ರಾಯಗಳನ್ನು ಮುರಿದು ಕಟ್ಟುತ್ತವೆ. ಕಾಶ್ಮೀರದ ಮುಸ್ಲಿಮರು, ಭಾರತೀಯ ಮುಸ್ಲಿಮರು ಎಂಬ ಎರಡು ಭಿನ್ನತೆಗಳು ಬಡತನ ಮತ್ತು ಶಿಕ್ಷಣ ಎಂಬ ಎರಡು ಸಂಗತಿಗಳಿಂದ ಮಾತ್ರ ಭಿನ್ನವಾಗಿರುವಂತಹದ್ದಲ್ಲ; ಕಾಶ್ಮೀರೇತರ ಭಾರತದಲ್ಲಿ ಆಗಿರುವ ಮತಾಂತರದಿಂದ ಉಂಟಾಗಿರುವ ಸಂಕರದ ಭಿನ್ನತೆಯೂ ಆಗಿದೆ. ಪಿಂಜಾರ್‌ರು ಹಾಗೂ ನದಾಫ್‌ರು ಹಾಗೂ ಬಾಗವಾನ್ ಸಮುದಾಯದವರು ಸ್ವಧರ್ಮದೊಳಗೆ ಅಸ್ಪೃಶ್ಯರಂತಾಗಿದ್ದಾರೆ. ಧಾರ್ಮಿಕ 'ಕಟ್ಟುಪಾಡು'ಗಳನ್ನು ಪೂರ್ಣ ಪ್ರಮಾಣದಲ್ಲಿ ಆಚರಿಸುವವರ ಮತ್ತು ಆಚರಿಸದವರ ನಡುವೆ ಈ ತರತಮಗಳು ಇವೆ. ತಮ್ಮ ಸ್ವಾರ್ಥ ಲಾಭದ ಅನುಕೂಲಕ್ಕಾಗಿ ಹುಟ್ಟಿಕೊಂಡಿರುವ ಈ ಬಗೆಯ ತರತಮಗಳು ಹಿಂದೂಗಳಲ್ಲಿನ ಬ್ರಾಹ್ಮಣ್ಯದ ಪ್ರಭಾವದಿಂದ ದಲಿತರು ಅನುಭವಿಸುತ್ತಿರುವ ಅವಮಾನಿತ ಸಂಕಟಗಳಿಗೆ ಅಲ್ಪ ಪ್ರಮಾಣದಲ್ಲಿ ಹೋಲುತ್ತವೆ.

ಆ. ಕಟ್ಟುಪಾಡುಗಳು ಮತ್ತು ಅವಮಾನಗಳು: ಧರ್ಮಾಧಾರಿತ ಆಚರಣೆಗಳನ್ನು ಪ್ರತಿಪಾದಿಸುವವರು, ತಮ್ಮದೇ ಧರ್ಮದ ಉಳಿದವರು ಆ ಆಚರಣೆಗಳನ್ನು ಅನುಸರಿಸಬೇಕೆಂದು ನಿರೀಕ್ಷಿಸುತ್ತಾರೆ. ಅನುಸರಿಸದಿದ್ದರೆ ಪರಕೀಯತೆಯಿಂದ ಕಾಣುತ್ತಾರೆ. ಅಬ್ದುಲ್ ರಶೀದ್ ಅವರ 'ನಾನು ಸಾಬಿ ಅಲ್ಲ' ಆತ್ಮಕಥನಾತ್ಮಕ ಬರಹವನ್ನು ಇಂತಹದ್ದಕ್ಕೆ ಉದಾಹರಣೆಯಾಗಿ ಕೆಳಗಿನ ಎರಡೂ ಸನ್ನಿವೇಶಗಳಲ್ಲಿ ನೋಡಬಹುದಾಗಿದೆ. "ಮೈಸೂರಿನಲ್ಲಿ ಇಂಗ್ಲಿಷ್ ಎಂ.ಎ ಓದುತ್ತಿದ್ದಾಗ ನಮ್ಮ ಜೊತೆ ಒಬ್ಬಳು ಸಾಬರ ಹುಡುಗಿ ಇದ್ದಳು. ಮೊದಮೊದಲು ಮಾತನಾಡುವಾಗ 'ನಿನಗೆ ಉರ್ದು ಬರುವುದಿಲ್ಲವಾ' ಅಂತ ಕೇಳಿದಳು. ನಾನು ಇಲ್ಲ ಅಂದೆ 'ಹಾಗಾದರೆ ನೀನು ಹೇಗೆ ಮುಸಲ್ಮಾನ' ಅಂತ ಕೇಳಿದಳು."[೩೮]

"ಸ್ವಿಡನ್‌ನಲ್ಲಿ ಕಲಾವಿದರು ಕೂರುವ ರೆಸ್ಟೋರೆಂಟ್ನಲ್ಲಿ ನಾನು ಮತ್ತು ಒಬ್ಬಳು ಮಲಯಾಳಿ ಲೇಖಕಿ ಕುಳಿತಿದ್ದೆವು. ನಮ್ಮ ನಡುವೆ ವೈನ್ ಬಟ್ಟಲುಗಳು, ಮೀನು ಮಾಂಸ, ತರಕಾರಿ ಹೀಗೆ ಏನೆಲ್ಲಾ ಇಟ್ಟುಕೊಂಡು ಮಾತನಾಡುತ್ತಿದ್ದೆವು. ಮೂಲೆಯಲ್ಲಿ ಒಬ್ಬಳು ಮೂಗುಬೊಟ್ಟು ಹಾಕಿಕೊಂಡ ದಢೂತಿ ಹುಡುಗಿಯೊಬ್ಬಳು ನಮ್ಮನ್ನೇ ಗಮನಿಸುತ್ತಿದ್ದಳು. ಮಾತನಾಡಿಸುತ್ತ 'ಐಯಾಮ್ ಫ್ರಂ ಬಾಂಗ್ಲಾದೇಶ್' ಅಂದಳು. ಹಾಗಾದರೆ ನೀನು ಮುಸ್ಲಿಂ ಹುಡುಗಿ ಇರಬೇಕು ಅಂದೆ. 'ಓ ನಿಮಗೆ ಹೇಗೆ ಗೊತ್ತಾಯಿತು ಅಂತ ಅಚ್ಚರಿಪಟ್ಟಳು.' ನಿನ್ನ ಮಾತಿನಿಂದ ಗೊತ್ತಾಯಿತು ಮತ್ತೆ ನಾನೂ ಕೂಡಾ ಮುಸಲ್ಮಾನ ಅಂದೆ. 'ಇಲ್ಲ ನೀನು ಮುಸಲ್ಮಾನ ಅಲ್ಲ. ಮುಸಲ್ಮಾನನಾಗಿದ್ದರೆ ವೈನ್ ಕುಡಿಯುತ್ತೀಯಾ? ಹೀಗೆ ಸಿಕ್ಕಿದ ಕಡೆ ಮಾಂಸ ತಿನ್ನುತ್ತೀಯಾ? ನೀನು ಮುಸಲ್ಮಾನನಾದರೆ ನಿಜವಾಗಿ ನರಕಕ್ಕೆ ಹೋಗುತ್ತೀಯಾ' ಅಂತ ನಮಗೆ ಧರ್ಮ ಉಪದೇಶ ಮಾಡಲು ಬಂದಳು"[೩೯] ಎಂದು ಲೇಖಕರು ಬರೆದುಕೊಳ್ಳುತ್ತಾರೆ.

ಧರ್ಮದೊಳಗಿನ ಕೆಲವು ನಿರ್ಬಂಧಗಳು ಹೇಗೆ ಮನುಷ್ಯನನ್ನು ಪರಕೀಯಗೊಳಿಸುತ್ತವೆ ಎಂಬುದನ್ನು ಮೇಲಿನ ಸಂಗತಿಗಳು ತಿಳಿಸುತ್ತವೆ. ಈ ಸನ್ನಿವೇಶಗಳು ಸಾಂಪ್ರದಾಯಿಕ ಪಡಿಯಚ್ಚುಗಳ

ಫಲವಾಗಿವೆ. ಮುಸ್ಲಿಂ ಆದವನಿಗೆ ಉರ್ದು ಬರಲೇಬೇಕು, ಸಿಕ್ಕಿದ ಕಡೆಯಲ್ಲೆಲ್ಲಾ ಮಾಂಸ ತಿನ್ನಬಾರದು ಎಂಬ ನಿರ್ಬಂಧಗಳು ಬಶೀರ್‌ರನ್ನು ಸ್ವಧರ್ಮಿಯರಿಂದಲೇ ಪರಕೀಯಗೊಳಿಸುತ್ತವೆ ಆದರೂ; ಲೇಖಕರು ಇಂತಹ ಸೀಮಿತ ನಿರ್ಬಂಧಗಳನ್ನು ಮೀರುವ ವಿಶ್ವ ಬ್ರಾತೃತ್ವವನ್ನು ಸಾರುವ ಚಿಂತನೆಯಲ್ಲಿ ನಂಬಿಕೆ ಇರುವಂತೆ ಇಲ್ಲಿನ ಬರಹವಿದೆ.

ಇ. ಪ್ರತಿರೋಧ ಮತ್ತು ಪರಕೀಯತೆ: ಧರ್ಮದೊಳಗಿನ ಕೆಲವು ಅಮಾನವೀಯ ಆಚರಣೆಗಳನ್ನು ಮೂಲಭೂತವಾದ ಎಂದು ಕರೆಯಲಾಗುತ್ತದೆ. ಇವು 'ಧರ್ಮ'ದ ಹೆಸರಿನಲ್ಲಿ ನಡೆಯುತ್ತವೆ. ಜಾತಿ ಪದ್ಧತಿಯಾಗಲಿ, ತಲಾಖ್, ಬುರ್ಕಾ ಪದ್ಧತಿಗಳಾಗಲಿ ಇವೆಲ್ಲವನ್ನು ಮೂಲಭೂತವಾದಿಗಳು ನಡೆಸುವುದು 'ಧರ್ಮದ' ಹೆಸರಲ್ಲಿ. ಇಂತಹ ಧರ್ಮಾಧಾರಿತ ಸ್ಥಾಪಿತ ಮೌಲ್ಯಗಳನ್ನು ವಿಮರ್ಶಿಸುವ ಕಾರಣದಿಂದ ಪ್ರಗತಿಪರ ಲೇಖಕರು ತಮ್ಮ 'ಧಾರ್ಮಿಕ' ಹಿನ್ನೆಲೆಯಿರುವ ಸನಾತನವಾದಿಗಳಿಂದ ಅವಮಾನ, ನಿಂದನೆ, ಹಲ್ಲೆಗಳನ್ನು ಅನುಭವಿಸುವುದು ಕೂಡ ಅವಮಾನವೇ ಆಗಿದೆ. ಇದಕ್ಕೆ ಪೂರಕವಾಗಿ 'ಮುಸ್ಲಿಂ ಸಂವೇದನೆಯ ಕಥಾ ಪ್ರಪಂಚ'ದಲ್ಲಿ ಫಕೀರ್ ಮುಹಮ್ಮದ್ ಕಟ್ಪಾಡಿಯವರು “ಆರಂಭಿಕ ಹಂತದಲ್ಲಿ ಮುಸ್ಲಿಂ ಸಮಾಜದಿಂದ ಬಂದ ಎಲ್ಲಾ ಲೇಖಕರೂ ಕೂಡ ಸಮಾಜದ ಸಿಟ್ಟು ಅನುಮಾನಗಳಿಗೆ ಗುರಿಯಾಗಿ, ಹಲವು ರೀತಿಯ ಹಲ್ಲೆಗಳಿಗೆ ಒಳಗಾಗಿದ್ದರು. ಹಲ್ಲೆ ಮಾಡುವವರ ಪ್ರಶ್ನೆಯೆಂದರೆ ನಮ್ಮ ಸಮಾಜದ ಒಳಗುಟ್ಟುಗಳನ್ನು, ಸಮಸ್ಯೆಗಳನ್ನು ಬಹಿರಂಗಗೊಳಿಸಿ ಅವಮಾನಿಸುವುದು ಯಾಕೆ? ಒಳಗಿನ ಸಂಗತಿಗಳನ್ನು ನಮ್ಮೊಳಗೆ ಚರ್ಚಿಸಿ ಸಮಾಧಾನವನ್ನು ಕಂಡುಕೊಳ್ಳುವುದು ಬಿಟ್ಟು ಬಹಿರಂಗವಾಗಿ ಪ್ರಕಟಿಸುವುದರಿಂದ ನಿಮಗೆ ಸಿಗುವ ಲಾಭವೇನು? ಎಂಬುದಾಗಿತ್ತು. ಜೊತೆಗೆ ನನಗೆ ಅನಾಮಧೇಯ ಬೆದರಿಕೆಯ ಪತ್ರಗಳೂ ಬರುತ್ತಿದ್ದವು. ನನ್ನ ಕಥೆಗಳು ಮಸೀದಿಯ ಹತ್ತು ಸಮಸ್ತರ ಮಧ್ಯೆ ಚರ್ಚೆಗೆ ಆಹಾರವಾಗುತ್ತಿದ್ದವು. ಇದು ನಮ್ಮ ಕಾಲದ ಎಲ್ಲ ಕನ್ನಡದ ಮುಸ್ಲಿಂ ಲೇಖಕರ ಅನುಭವವಾಗಿತ್ತು. ಮುಂದೆ ಶಾಬಾನು ಪ್ರಕರಣ, ಬಹುಪತ್ನಿತ್ವ, 'ತಲಾಕ್' ವಿವಾಹ ವಿಚ್ಛೇದನದ ಬಗ್ಗೆ ಚರ್ಚೆ, ನಜ್ಮಾಭಾಂಗಿ ಸಿನಿಮಾಕ್ಕೆ ಹೋದುದಕ್ಕೆ ಎದುರಾದ ಸಾಮಾಜಿಕ ಬಹಿಷ್ಕಾರದ ಪ್ರಕರಣ, ಸಾರಾ ಅವರ ಮೇಲೆ ಪುತ್ತೂರಲ್ಲಿ ಸಾಹಿತ್ಯ ಸಭೆಯಲ್ಲಿ ನಡೆದ ಹಲ್ಲೆ ಇತ್ಯಾದಿ ಪ್ರಕರಣಗಳು”[೪೦] ಎಂದು ವಿವರಿಸಿಕೊಳ್ಳುತ್ತಾರೆ.

ಫಕೀರ್ ಮುಹಮ್ಮದ್ ಕಟ್ಪಾಡಿಯವರ ಮೇಲಿನ ಮಾತುಗಳು ಮುಸ್ಲಿಂ ಧರ್ಮವನ್ನು ಮಾನವೀಯಗೊಳಿಸುವ ಕಾರಣದಿಂದ ವಿಮರ್ಶೆ ಮಾಡಿದ್ದಕ್ಕಾಗಿ ಮುಸ್ಲಿಂ ಲೇಖಕರು ಅನುಭವಿಸಿದ ಅವಮಾನಗಳನ್ನು ಸಾದರಪಡಿಸುತ್ತವೆ. ಇಲ್ಲಿ ಸಮಾಜದ ಒಳಗುಟ್ಟುಗಳು ಎಂಬುದು ಸಮುದಾಯದೊಳಗಿನ ಲಿಂಗ, ವರ್ಗ, ಮೂಢ ಆಚರಣೆಗಳ ತರತಮಗಳೇ ಆಗಿವೆ. ಈ ಬಗೆಯ ತರತಮಗಳನ್ನು ಪ್ರಶ್ನಿಸಿದ್ದಕ್ಕಾಗಿ ಬೆದರಿಕೆಯ ಪತ್ರಗಳು ಬರುವುದು ಧಾರ್ಮಿಕ ಮೂಲಭೂತವಾದಿತನವನ್ನು ಉಳಿಸಿಕೊಳ್ಳುವ ಭಾಗವಾಗಿ ಮತಾಂಧರು ಅನುಸರಿಸುವ ಅನ್ಯ ಮಾರ್ಗವೇ ಆಗಿದೆ. ಶಾಬಾನು

ಪ್ರಕರಣ, ನಜ್ಮಾಭಾಂಗಿ ಸಿನಿಮಾಕ್ಕೆ ಹೋದದ್ದು ನಿರ್ಬಂಧಗಳ ನಡುವೆಯೂ ನಡೆದಿರುವ ಬಿಡುಗಡೆಯ ಪ್ರಯತ್ನವನ್ನು ಸೂಚಿಸುತ್ತವೆ. ಹೀಗೆ ಆತ್ಮಕಥನಕಾರರ ವೈಚಾರಿಕ ಆಲೋಚನೆಗಳು ಸಮುದಾಯದೊಳಗೆ ಉಂಟುಮಾಡಿರುವ ಮತ್ತು ಸಮುದಾಯಗಳಿಂದ ತಮಗೆ ದೊರಕಿರುವ ಪರಕೀಯತೆಗಳನ್ನು ಇಲ್ಲಿನ ಆತ್ಮಕಥನಾತ್ಮಕ ಬರೆಹದಲ್ಲಿ ವ್ಯಕ್ತಪಡಿಸಲಾಗಿದೆ.

ಉ. ತಾಯಿಯ ಶವ ಹೂಳುವ ಪ್ರತಿರೋಧ : ಬೊಳುವಾರು ಮಹಮದ್ ಕುಂಞಿ ಅವರು ತಮ್ಮ ಸಂದರ್ಶನದಲ್ಲಿ "ನನ್ನ ತಾಯಿಯು ಮರಣ ಹೊಂದಿದಾಗ ಆಕೆಯನ್ನು ಮಣ್ಣು ಮಾಡಲು ಜಾಗ ಕೊಡಲಿಲ್ಲ. ನಾನು ಮದರಸದ ಗೋಡೆಯನ್ನು ಹಾರಿ ಬೀಗ ಹೊಡೆದು ಹಾರೆ, ಫಿಕಾಸಿ ತೆಗೆದುಕೊಂಡು ಗೆಳೆಯರೊಂದಿಗೆ ಮಣ್ಣು ದಫನ್ ಮಾಡಿದೆ"[೪೧] ಎಂದು ಹೇಳಿಕೊಳ್ಳುತ್ತಾರೆ. ಪ್ರಗತಿಪರ ಲೇಖಕರಾಗಿದ್ದ ಬೊಳುವಾರು ಮಹಮದ್ ಕುಂಞಿ ಅವರು ಮುಸ್ಲಿಂ ಧರ್ಮದೊಳಗಿದ್ದ ಕೆಲವು ಮೂಢ ಆಚರಣೆಗಳನ್ನು ವಿಮರ್ಶಿಸಿದ್ದಕ್ಕಾಗಿ ಮುಸ್ಲಿಂ ಧರ್ಮದ ಕೆಲವರು ಬೊಳುವಾರರ ತಾಯಿಯನ್ನು ಸ್ಮಶಾನದಲ್ಲಿ ಮಣ್ಣು ಮಾಡಲು ಅವಕಾಶ ಕೊಡುವುದಿಲ್ಲ. ಇಂತಹ ಸ್ವಧರ್ಮಿಯ ಮೂಲಭೂತವಾದಿಗಳ ಅವಮಾನಕ್ಕೆ ವಿರುದ್ಧವಾಗಿ ಮದರಸದ ಗೋಡೆಯನ್ನು ಹಾರಿ ಅಲ್ಲಿ ಸಿಕ್ಕ ಹಾರೆ, ಫಿಕಾಸಿ ತೆಗೆದುಕೊಂಡು ತಾಯಿಯನ್ನು ದಫನ್ ಮಾಡಿದ್ದು ಲೇಖಕರು ಸ್ಥಾಪಿತ ಮೌಲ್ಯಗಳಿಗೆ ಮಾಡಿದ ಪ್ರತಿರೋಧವಾಗಿದೆ.

ಊ. ಪ್ರತಿರೋಧದ ಫಲ : ಒಂದು ಕಾಲದಲ್ಲಿ ತಿರಸ್ಕಾರಕ್ಕೆ ಒಳಗಾಗಿ ಮತ್ತೊಂದು ಕಾಲದಲ್ಲಿ ಅಭಿನಂದನೆಗಳಿಗೆ ಒಳಗಾಗುವುದು ಸಾಮಾಜಿಕ ವ್ಯವಸ್ಥೆಯ ಲಕ್ಷಣಗಳಲ್ಲಿ ಒಂದಾಗಿದೆ. ಬೊಳುವಾರು ಮಹಮದ್ ಕುಂಞಿ ಅವರು ಇಂತಹ ತಿರಸ್ಕಾರಕ್ಕೆ ಮತ್ತು ಅಭಿಮಾನಕ್ಕೆ ಒಳಗಾಗಿದ್ದಾರೆ ಎಂಬುದನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ. 'ಸ್ವಾತಂತ್ರ್ಯ ಓಟ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಬಂದಿದ್ದ ಮಹಮ್ಮದ್ ಆಲಿಯ ಅವರು ಮಾತಾಡುತ್ತ "೪೦ ವರ್ಷಗಳ ಹಿಂದೆ ಬೊಳುವಾರ ಅವರಿಗೆ ಕಲ್ಲು ಎಸೆಯುವವರಿಗೆ ಕಲ್ಲು ಎಸೆಯಲು, ಕಲ್ಲು ಕೊಟ್ಟವರಲ್ಲಿ ನಾನೂ ಒಬ್ಬ, ಆದರೆ ಇಂದು ನಮ್ಮ ಮಕ್ಕಳು ಲ್ಯಾಪ್ಟಾಪ್ ಹಿಡಿದುಕೊಂಡು ವಿಮಾನದಲ್ಲಿ ಹೋಗಲು ಕಾರಣ' ಬೊಳುವಾರರು"[೪೨] ಎಂದು ಹೇಳಿದ ಸನ್ನಿವೇಶವಿದೆ. ಸಾಹಿತ್ಯದ ಶಕ್ತಿ ಮತ್ತು ಅದರ ಪರಿಣಾಮ ಎಂತಹದ್ದು ಎಂಬುದಕ್ಕೆ ಮಹಮ್ಮದ್ ಆಲಿಯವರ ಮಾತು ನಿದರ್ಶನವಾಗಿದೆ. ಲೇಖಕರು ಕಲ್ಲು ಎಸೆಯುವಾಗ ಇದ್ದ ತಮ್ಮ ಸಮುದಾಯದ ಮೇಲಿದ್ದ ಕಾಳಜಿಯನ್ನು ಇಂದಿಗೂ ಉಳಿಸಿಕೊಂಡಿರುವುದು ಅವರ ಅಭಿವ್ಯಕ್ತಿಯಲ್ಲಿ ಗುರುತಿಸಬಹುದಾಗಿದೆ. ಹೊಸ ಸಂಗತಿಗಳನ್ನು ಹೇಳುವಾಗ ವಿರೋಧಗಳು ಸಹಜ ಆದರೆ ಅದರ ಅರಿವು ಸಮುದಾಯಕ್ಕಾದಾಗ ಅದು ಸ್ವೀಕಾರರ್ಹವಾಗುತ್ತದೆ. ಮೇಲ್ಕಂಡ ಸನ್ನಿವೇಶದಲ್ಲಿ ಕಲ್ಲು ಬಿಟ್ಟು ಲ್ಯಾಪ್ಟಾಪ್ ಹಿಡಿದುಕೊಂಡಿದ್ದು ಅಂತಹದರ ಪರಿವರ್ತನೆಯೇ ಆಗಿದೆ.

### ೭.೨.೩.ಧರ್ಮಾಧಾರಿತವಾಗಿ ಮಹಿಳೆಯರಿಗೆ ಆಗುವಂತಹ ಅವಮಾನ ಮತ್ತು ಪ್ರತಿರೋಧಗಳು

ಮಹಿಳೆಯರು ಯಾವುದೇ ಧರ್ಮ, ಜಾತಿಯವರೇ ಆಗಿರಲಿ ಲಿಂಗದ ಕಾರಣಕ್ಕಾಗಿ ಅವಮಾನಗಳನ್ನು ಅನುಭವಿಸುವುದನ್ನು ಕಾಣಬಹುದಾಗಿದೆ. ಆದರೆ ಕೆಲವು ಧರ್ಮಗಳು ನಿಯಮ, ನಿರ್ಬಂಧಗಳನ್ನು ಮತ್ತಷ್ಟು ಹೇರುವ ಮೂಲಕ ಮಹಿಳೆಯರನ್ನು ಹತ್ತಿಕ್ಕುವುದು ಕಂಡುಬರುತ್ತದೆ. ಹಿಂದೂ ಧರ್ಮದಲ್ಲಿ ಸತಿಸಹಗಮನ ಹಾಗೂ ದೇವದಾಸಿ ಪದ್ಧತಿ ಹಾಗೂ ಇನ್ನಿತರ ಪದ್ಧತಿಗಳ ಮೂಲಕ ಮಹಿಳೆಯರನ್ನು ಶೋಷಿಸುವ ಸಂಗತಿಗಳು ಹಿಂದಿನ ಕಾಲದಲ್ಲಿ ಇದ್ದರೂ ಕ್ಷೀಣಿಸುವ ಹಾದಿಯನ್ನು ಹಿಡಿದಿವೆ. ಕ್ರೈಸ್ತ ಧರ್ಮದಲ್ಲಿ ಲಿಂಗ ಸಮಾನತೆ ಅಲ್ಪಮಟ್ಟಿಗಿದೆ. ಆದರೆ ಮುಸ್ಲಿಂ ಧರ್ಮದಲ್ಲಿ ಇರುವ ಪರದಾ ಪದ್ಧತಿ, ಶಿಕ್ಷಣಕ್ಕೆ ಕೊಡುವ ಕಡಿಮೆ ಪ್ರಾಶಸ್ತ್ಯ ಮುಂತಾದ ಆಚರಣೆಗಳು ಮಹಿಳೆಯರನ್ನು ಮತ್ತಷ್ಟು ದಮನಿತರನ್ನಾಗಿಸಿವೆ. ಇದಕ್ಕೆ ಸಂಬಂಧಿಸಿದಂತೆ ಈ ಹಿಂದಿನ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದ್ದೂ, ಪ್ರಸ್ತುತ ಅಧ್ಯಾಯದಲ್ಲಿ ಧಾರ್ಮಿಕ ಮೂಲಭೂತವಾದವು ಉಂಟು ಮಾಡಿರುವ ಅವಮಾನಗಳನ್ನು ಮಾತ್ರ ಚರ್ಚಿಸಲಾಗುವುದು. ಧಾರ್ಮಿಕ ಮೂಲಭೂತವಾದದೊಳಗೆ ಪುರುಷ ಪ್ರಧಾನ ಮನಸ್ಸಿದ್ದೂ, ಸಾಕಷ್ಟು ಕಟ್ಟುಪಾಡುಗಳನ್ನು ಒಳಗೊಂಡಿದೆ. ಇಂತಹ ಕಟ್ಟುಪಾಡುಗಳಿಂದಾಗುವ ಅವಮಾನ ಮತ್ತು ಪ್ರತಿರೋಧಗಳನ್ನು ವಿಶ್ಲೇಷಿಸಲಾಗುತ್ತದೆ.

ಅ. ಮುಸ್ಲಿಂ ಹುಡುಗಿ, ಶಿಕ್ಷಣ ಮತ್ತು ಅವಮಾನಗಳು: ಎಲ್ಲಾ ಧರ್ಮದೊಳಗಿನ ಪುರೋಹಿತಶಾಹಿ ವ್ಯವಸ್ಥೆಯು ಆಯಾ ಸಮುದಾಯದ ಮಹಿಳೆಯರನ್ನು, ಅಕ್ಷರ ವಂಚಿತರನ್ನಾಗಿ ಮಾಡಿ ಆ ಮೂಲಕ ತನ್ನ ಯಜಮಾನಿಕೆಯನ್ನು ಮುಂದುವರಿಸಿಕೊಂಡು ಹೋಗುವ ಹಂಬಲವನ್ನು ಹೊಂದಿರುತ್ತದೆ. ಇಂತಹ ನಿರ್ಬಂಧಗಳನ್ನು ಮೀರುವ ಕೆಲವು ಸನ್ನಿವೇಶಗಳು ಆತ್ಮಕಥೆಗಳಲ್ಲಿವೆ. ಸಾರಾ ಅಬೂಬಕ್ಕರ್ ಅವರ 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರಹದಲ್ಲಿ ಮುಸ್ಲಿಂ ಹೆಣ್ಣು ಮಕ್ಕಳು ಶಾಲೆ ಕಲಿಯುವಲ್ಲಿ ಅನುಭವಿಸಬೇಕಾದ ಹಲವು ಸಂಕಷ್ಟಗಳನ್ನು ಕುರಿತು ಲೇಖಕರು "ತರಗತಿಯಲ್ಲಿದ್ದ ಇತರ ಹುಡುಗಿಯರಂತೆ ನಾನು ಇದ್ದೆ. ಆದರೆ ನಮ್ಮ ಊರಿನ ಮುಸ್ಲಿಮರಿಗೆ ಇದು ಸಹಿಸುತ್ತಿರಲಿಲ್ಲ. ಹತ್ತು ವರ್ಷ ಪ್ರಾಯ ದಾಟಿದ ಯಾವ ಮುಸ್ಲಿಂ ಹುಡುಗಿಯೂ ಮನೆಯ ಹೊರಕೋಣೆಗೂ ಬರದಿದ್ದ ಆ ದಿನಗಳಲ್ಲಿ ಮುಸ್ಲಿಂ ಹುಡುಗಿಯೊಬ್ಬಳು ಘೋಷಾ ಇಲ್ಲದೆ, ಕೊನೆಯ ಪಕ್ಷ ತಲೆಯ ಮೇಲೆ ಸೆರಗೂ ಎಳೆದುಕೊಳ್ಳದೆ ಹಿಂದೂ ಹುಡುಗಿಯರಂತೆ ಶಾಲೆಗೆ ಹೋಗುತ್ತಿದ್ದನ್ನು ಸಹಿಸಲು ಇವರಿಂದಾಗುತ್ತಿರಲಿಲ್ಲ. ಆದರೂ ನನ್ನ ತಾಯಿಯೊಡನೆ ಆಗಾಗ ಯಾರಾದರೂ ಬಂದು ನಯವಾಗಿ, 'ನಿಮ್ಮ ಮಗಳು ತುಂಬಾ ಬೆಳೆದು ಬಿಟ್ಟಿದ್ದಾಳೆ. ಇನ್ನೂ ಅವಳನ್ನು ಶಾಲೆಗೆ ಕಳುಹಿಸುವುದು ಸರಿಯಲ್ಲ'. ಇಷ್ಟು ದೊಡ್ಡವಳಾಗಿ ಇನ್ನೂ ಈ ಹುಡುಗಿ ಶಾಲೆಗೆ ಹೋಗುತ್ತಿದ್ದಾಳಲ್ಲ? ಬುರ್ಖಾ ಹಾಕಿಕೊಂಡಾದರೂ ಹೋಗಬಾರದೆ? ಮುಸ್ಲಿಂ

ಹುಡುಗಿಯರೆಲ್ಲಾ ಹೀಗೆ ಘೋಷಾ ಇಲ್ಲದೆ ಬೀದಿಯಲ್ಲಿ ತಿರುಗ ಹೊರಟರೆ ಇಸ್ಲಾಂ ಮತ ಉಳಿದಿತೇ? ಎಂದು ಚುಚ್ಚುತ್ತಲೇ ಇದ್ದರು"[೪೩] ಎಂದು ಬರೆದುಕೊಳ್ಳುತ್ತಾರೆ.

ಧಾರ್ಮಿಕ ನಿರ್ಬಂಧಗಳು ವೈಚಾರಿಕ ಬದುಕಿನ ಕಾರಣ ಅಲ್ಪಮಟ್ಟಿಗೆ ಬದಲಾವಣೆಯ ಹಾದಿಯನ್ನು ಹಿಡಿದಾಗ ಅದನ್ನೇ ನಂಬಿಕೊಂಡಿದ್ದ, ಆಚರಿಸುತ್ತಿದ್ದ ಸಮುದಾಯವು ಅನುಭವಿಸುವ ತೊಳಲಾಟ, ಕಳವಳವನ್ನು ಲೇಖಕರು ಇಲ್ಲಿ ವ್ಯಕ್ತಪಡಿಸಿದ್ದಾರೆ. ತನ್ನಿಚ್ಛೆಯಂತೆ ಬದುಕಲು ಬಿಡದ ಧಾರ್ಮಿಕ ಕಟ್ಟುಪಾಡುಗಳ ವಿರುದ್ಧ ಸಾರಾ ಅವರಿಗೆ ಅಸಮಧಾನವಿದೆ. ಇಲ್ಲಿ ಧಾರ್ಮಿಕ ಮೂಲಭೂತವಾದಿತನ ಸಾರಾ ಅವರಿಗೆ ಅವಮಾನಗೊಳಿಸುತ್ತಿದ್ದರೂ, ಅದು ತನ್ನ ಹಿಡಿತದಲ್ಲಿ ಸಡಿಲಿಕೆ ಹೊಂದುತ್ತಿರುವುದರ ಬಗ್ಗೆ ಸಾರಾ ಅಭಿವ್ಯಕ್ತಿಸಿದ್ದಾರೆ. ಶಿಕ್ಷಣ ಎನ್ನುವುದು ಧರ್ಮಾತೀತ, ಜಾತ್ಯತೀತ, ಲಿಂಗಾತೀತ ಪರಿಕಲ್ಪನೆಯಾಗಿದೆ. ಭಾರತೀಯ ಸಮಾಜದಲ್ಲಿ ಶಿಕ್ಷಣ ಎನ್ನುವುದು ದಲಿತರಿಗೆ ಮತ್ತು ಸ್ತ್ರೀ ಸಮುದಾಯಕ್ಕೆ ಸರಳವಾಗಿ ದೊರೆತಿಲ್ಲ. ಮೇಲಿನ ಸಾಲುಗಳು ಮುಸ್ಲಿಂ ಧರ್ಮದೊಳಗಿನ ಮೂಲಭೂತವಾದವು ಹೆಣ್ಣು ಮಕ್ಕಳ ಮೇಲೆ ಹಾಗೂ ಶಾಲೆ ಕಲಿಯುವುದಕ್ಕೆ ವಿಧಿಸಿರುವಂತಹ ಹಲವಾರು ನಿರ್ಬಂಧಗಳನ್ನು ಕುರಿತು ಅಭಿವ್ಯಕ್ತಿಸುತ್ತದೆ. ಇಂತಹ ನಿರ್ಬಂಧಗಳನ್ನು ಮೀರುವ ಮುಂಚಲನೆಗಳನ್ನು ಸಾರಾ ಅಬೂಬಕ್ಕರ್, ಸಮತಾ ದೇಶಮಾನೆ ಮುಂತಾದವರ ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

ಆ. ವಿದ್ಯಾವಂತರು ಮತ್ತು ಧರ್ಮಾಂಧತೆ: ಧಾರ್ಮಿಕ ಕಟ್ಟುಪಾಡುಗಳು ಪ್ರಭುತ್ವದ ಪರವಾಗಿದ್ದೂ, ಅಕ್ಷರಸ್ಥರೇ ಇದನ್ನು ಹೆಚ್ಚು ಅನುಸರಿಸುತ್ತಾರೆ. ಶಿಕ್ಷಣ ವೈಚಾರಿಕತೆಯನ್ನು ಬೆಳೆಸುತ್ತದೆ ಎಂಬುದು ನಿಜವಾದರೂ ಎಲ್ಲರಿಗೂ ಇದು ಅನ್ವಯವಾಗುವುದಿಲ್ಲ. ಕೆಲವು ಶಿಕ್ಷಿತರೇ ಧಾರ್ಮಿಕ ಕಟ್ಟುಪಾಡುಗಳನ್ನು ಕುರುಡಾಗಿ ಒಪ್ಪಿಕೊಳ್ಳುವುದು ಕಾಣುತ್ತದೆ. 'ಲೇಖಲೋಕ'ದಲ್ಲಿ ಸಾರಾ ಅಬೂಬಕ್ಕರ್ ಅವರು "ಮದುವೆಯಾಗುವ ಗಂಡ ಅಥವಾ ಪತ್ನಿ ಓದಿದ್ದರೆ ಅವರಿಗೆ ಕಷ್ಟ ಇಷ್ಟಗಳ ಬಗ್ಗೆ ಗೊತ್ತಾಗುತ್ತದೆ ಎಂಬುದು ಸಹಜವಾದ ಭಾವನೆಯಾದರೂ ಇದು ಬಹುತೇಕ ಸಂದರ್ಭದಲ್ಲಿ ಸುಳ್ಳಾಗಿರುತ್ತದೆ. ಮದುವೆಯಾದ ಬಳಿಕ ಮನೆಯ ಈ ಬಂಧನದಿಂದ ಬಿಡುಗಡೆ ದೊರೆಯಬಹುದೆಂದು ಕೊಂಡಿದ್ದೆ. ಗಂಡ ವಿದ್ಯಾವಂತನಾದರೆ ಆತನಿಗೆ ಧರ್ಮಾಂಧತೆ ಇರಲಾರದು. ಘೋಷಾ ಹಾಕಬೇಕೆಂದು ಪೀಡಿಸಲಾರನೆಂದುಕೊಂಡಿದ್ದೆ. ಆದರೆ ನಾನು ಬಯಸಿದ್ದೊಂದು ಆಗಲೇ ಇಲ್ಲ. ಮದುವೆಯ ಮರುದಿನ ಪ್ರಥಮ ಬಾರಿ ಗಂಡನ ಮನೆಗೆ ಹೋಗಬೇಕಾದರೆ ಬುರುಕಾ ತೊಡಿಸಿಯೇ ನನ್ನನ್ನು ಕರೆದೊಯ್ದರು!"[೪೪] ಎಂದು ಹತಾಶೆಯಲ್ಲಿ ವ್ಯಕ್ತಪಡಿಸುತ್ತಾರೆ. ಬುರ್ಕಾ ತೊಡುವುದು ಮುಸ್ಲಿಂ ಮಹಿಳೆಯರು ಹೊಂದಿರುವ ಸಾಮಾಜಿಕ ಅನಿಷ್ಟವಾಗಿದೆ. ಇಲ್ಲಿ ಸಾರಾ ಅವರ ನಿರೀಕ್ಷೆಯು ಹುಸಿಯಾಗಿದೆ. ಶಿಕ್ಷಿತರಲ್ಲಿ ಪ್ರಗತಿಪರ ಧೋರಣೆ ಇರುತ್ತದೆ ಎಂಬ ಲೇಖಕಿಯ ಅಭಿಪ್ರಾಯಕ್ಕೆ ಪೆಟ್ಟು ಬಿದ್ದುದ್ದನ್ನು ಲೇಖಕರು ಅಸಹಾಯಕತೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಧಾರ್ಮಿಕ ಕಟ್ಟುಪಾಡುಗಳು

ಮನುಷ್ಯನನ್ನು ಬಾಲ್ಯದಿಂದಲೇ ಆವರಿಸಿಕೊಂಡಿರುವಂತಹವವು, ಶಿಕ್ಷಣವು ಇಂತಹವುಗಳನ್ನು ಹೋಗಲಾಡಿಸುತ್ತದೆ ಎಂಬ ಅಭಿಪ್ರಾಯವು ಅಲ್ಪಮಟ್ಟಿಗೆ ಸತ್ಯವಾದರೂ, ಅದು ಪರಿಪೂರ್ಣವಾಗದೆ ಕೆಲವು ಶಿಕ್ಷಿತರಲ್ಲಿ ಮತ್ತಷ್ಟು ಪ್ರಬಲವಾಗಿರುವುದನ್ನು ಸಾರಾ ಅವರು ಸ್ಪಷ್ಟಪಡಿಸುತ್ತಾರೆ. ಹೀಗೆ ಬುರ್ಕಾ ತೊಡುವ ಪದ್ಧತಿಯು ಅಸಮಾನತೆಯ ಸಾಂಕೇತಿಕವಾಗಿದ್ದು, ಅದರಿಂದ ಮುಕ್ತವಾಗುವ ಬಯಕೆಯು ಆ ಸಮಯಕ್ಕೆ ವಿಫಲವಾಗುವುದನ್ನು ಸಾರಾ ಅವರು ನಿರಾಸೆಯ ಧ್ವನಿಯಲ್ಲಿ ಅಭಿವ್ಯಕ್ತಿಸುತ್ತಾರೆ.

ಇ. ಮತ ಪಂಡಿತರಿಂದಾಗುವ ಅವಮಾನಗಳು: ಭಾರತೀಯ ಸಮಾಜದಲ್ಲಿ ಮನುಷ್ಯನು ತನ್ನಿಚ್ಚೆಯಂತೆ ಬದುಕಲು ಇರುವ ತೊಡಕುಗಳಲ್ಲಿ ಜಾತಿ, ಧರ್ಮಗಳೆರಡು ಪ್ರಮುಖ ಪಾತ್ರವಹಿಸುತ್ತವೆ. ಧಾರ್ಮಿಕ ಕಟ್ಟುಪಾಡುಗಳು ವಿಶೇಷವಾಗಿ ಮಹಿಳೆಯರನ್ನು ಅವಮಾನಕ್ಕೀಡು ಮಾಡುವಲ್ಲಿ ಹೆಚ್ಚು ಶ್ರಮವಹಿಸುತ್ತವೆ. 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರಹದಲ್ಲಿ ಸಾರಾ ಅಬೂಬಕ್ಕರ್ ಅವರು "ಮಾವನಿಂದ ಅತ್ಯಾಚಾರಕ್ಕೊಳಗಾದಾಗ ಮಾವನನ್ನೇ ಮದುವೆಯಾಗಿ ಐದು ಮಕ್ಕಳ ತಂದೆಯಾದ ತನ್ನ ಗಂಡನನ್ನು ಮಗನೆಂದು ತಿಳಿದುಕೊಂಡು ಬದುಕಬೇಕೆಂದು ಮತಪಂಡಿತರು ಫತ್ವಾ ಹೊರಡಿಸುತ್ತಾರೆ. ಗಂಡನೋರ್ವನು ಮದ್ಯದ ಅಮಲಿನಲ್ಲಿ ರಾತ್ರಿ ತಲಾಖ್ ನೀಡಿದ್ದನ್ನು ತಿಳಿದ ಮತಪಂಡಿತರು ಮರುದಿನದಿಂದ ಅವರು ಪತಿಪತ್ನಿಯರಾಗಿ ಜೊತೆಯಾಗಿ ಬದುಕುವುದಕ್ಕೆ ತಡಯೊಡ್ಡಿ, ಆ ಮಹಿಳೆ ಸರಕಾರದಿಂದ ರಕ್ಷಣೆ ಕೇಳಿದ್ದೂ ಈಗ ಇತಿಹಾಸ. ತಮಿಳು ನಾಡಿನ ದಕ್ಷಿಣ ತುದಿಯಲ್ಲೂ ಇಂತಹ ಘಟನೆ ನಡೆದು ಆ ದಂಪತಿಗಳು ಸಮಾಜದಿಂದ ಹೊರಹೋಗಿ ಪತಿ ಪತ್ನಿಯರಾಗಿ ಬದುಕಲೂ ತೀರ್ಮಾನಿಸಿದ್ದೂ ನಡೆದಿದೆ"[೪೫] ಎಂದು ಬರೆದುಕೊಳ್ಳುತ್ತಾರೆ. ಸಾರಾ ಅವರ ಈ ಬರಹದಲ್ಲಿ ಮೂರು ಸಂಗತಿಗಳು ಪ್ರಮುಖವಾಗಿ ಕಾಣುತ್ತವೆ. ತಮ್ಮ ಆತ್ಮಕಥನಾತ್ಮಕ ಬರೆಹವನ್ನು ತನ್ನ ಬದುಕಿನ ಆಚೆಗೂ ವಿಸ್ತರಿಸಿದ್ದು ಮೊದಲನೆಯದಾದರೆ, ಧಾರ್ಮಿಕ ಮತಪಂಡಿತರ ಆಲೋಚನೆ, ಆಜ್ಞೆಗಳು ಜನಸಾಮಾನ್ಯರ ಮೇಲೆ ಬೀರುವ ನಕರಾತ್ಮಕ ಪ್ರಭಾವವನ್ನು ತಿಳಿಸುವುದು ಎರಡನೆಯ ಸಂಗತಿಯಾಗಿದೆ. ಇವುಗಳ ಜೊತೆಗೆ ಮತಪಂಡಿತರ ಕಟ್ಟುಪಾಡುಗಳನ್ನು ಮೀರುವ ಘಟನೆಗಳು ನಡೆದಿರುವುದನ್ನು ಸಹ ಓದುಗರಿಗೆ ವಿವರಿಸುವುದು ಮೂರನೆಯ ಸಂಗತಿಯಾಗಿದೆ.

ಜನಸಾಮಾನ್ಯರ ನಡುವೆ ಆಚರಣೆಯಲ್ಲಿರುವ ಧರ್ಮಕ್ಕೂ, ಮತಪಂಡಿತರು ಪ್ರತಿಪಾದಿಸುವ ಧರ್ಮಕ್ಕೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ಮಾವನಿಂದ ಅತ್ಯಾಚಾರಕ್ಕೆ ಒಳಗಾದ ಮಹಿಳೆಯು, ಮಾವನನ್ನೇ ಮದುವೆಯಾಗಿ ಐದು ಮಕ್ಕಳನ್ನು ಹೆರಲು ಕಾರಣನಾದ ಪತಿಯನ್ನೇ ಮಗನಂತೆ ನೋಡಬೇಕೆಂಬ ಮತಿಹೀನ ಪಂಡಿತರ ನಿಯಮವು ಮುಸ್ಲಿಂ ಧರ್ಮದಲ್ಲಿ ಮಹಿಳೆ ಅನುಭವಿಸುತ್ತಿರುವ ಸಮಸ್ಯೆಗಳಿಗೆ ಉದಾಹರಣೆಯಾಗಿದೆ. ಪ್ರಸ್ತುತ ಸನ್ನಿವೇಶದಲ್ಲಿ ಮಹಿಳೆ ಅತ್ಯಾಚಾರಕ್ಕೆ ಒಳಗಾಗಿದ್ದು

ಒಂದು ಬಗೆಯ ಶೋಷಣೆಯಾದರೆ, ಮತಿಹೀನ ಪಂಡಿತರ ಕಟ್ಟುಪಾಡುಗಳಿಂದ ಅನುಭವಿಸಿದ್ದು ಅವಮಾನವೇ ಆಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ತಮಿಳುನಾಡಿನಲ್ಲಿ ಇಂತಹದ್ದೇ ಸಂದರ್ಭದಲ್ಲಿದ್ದ ಪತಿ, ಪತ್ನಿಯರು ಯಾವ ಮತ ಪಂಡಿತರನ್ನು ಕೇಳದೆ ಸ್ವತಂತ್ರವಾಗಿ ನಿರ್ಧಾರ ತೆಗೆದುಕೊಂಡು ಬದುಕಲು ಹೊರಟಿದ್ದು ಪ್ರತಿರೋಧವಾಗಿದೆ. ಹೀಗೆ ತಮ್ಮ ಆತ್ಮಕಥನಾತ್ಮಕ ಬರಹವನ್ನು ಸ್ವಕಥನವಾಗಿಸದೆ, ಮುಸ್ಲಿಂ ಮಹಿಳೆಯರ ವಿವಿಧ ನೆಲೆಯ ಸಂಘರ್ಷಾತ್ಮಕ ಬದುಕನ್ನು ಸಾಮೂಹಿಕ ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಆತ್ಮಕಥನಾತ್ಮಕ ಬರಹ ಮಾಡಿದೆ.

**೭.೨.೪.ಮೂಲಭೂತವಾದಿತನಕ್ಕೆ ನೀಡಿದ ಪ್ರತಿರೋಧಗಳು**

**ಅ. ಸ್ತ್ರೀ ಶಿಕ್ಷಣ ಮತ್ತು ಪ್ರತಿರೋಧ :** ಮುಸ್ಲಿಂ ಸಮುದಾಯದಲ್ಲಿ ಹುಟ್ಟಿದ್ದ ಸಾರಾ ಅಬೂಬಕ್ಕರ್ ಅವರು ಶಿಕ್ಷಣ ಪಡೆಯಲು ಮುಂದಾದಾಗ ಶಿಕ್ಷಣ ಪಡೆಯಲು ಸಾಧ್ಯವಾಗದಂತೆ ಮಾಡುವ ಹಲವು ಪ್ರಯತ್ನಗಳು ನಡೆದವು. ಮಗಳಿಗೆ ಶಿಕ್ಷಣ ಕೊಡಿಸಬೇಕೆಂಬ ತಂದೆ, ಸಹೋದರರ ನಿರ್ಧಾರದ ಕಾರಣ ಸಾರಾ ಅವರು ಅವಮಾನಿಸುವ ವ್ಯವಸ್ಥೆಯನ್ನು ಪ್ರತಿರೋಧಿಸುವ ಪ್ರಯತ್ನದಲ್ಲಿ ಗೆಲ್ಲುತ್ತಾರೆ. ಅವರ ತಂದೆ ಹೇಳುವ ಮಾತುಗಳಿವು: "ಹೆಣ್ಣು ಮಕ್ಕಳಿಗೆ ವಿದ್ಯೆ ಕೊಡಕೂಡದೆಂದು ಖುರಾನ್‌ನಲ್ಲಿ ಎಲ್ಲೂ ಹೇಳಿಲ್ಲವಲ್ಲ? ಮುಂದಿನ ಜನಾಂಗವನ್ನು ಪೋಷಿಸಿ ಉತ್ತಮ ಪ್ರಜೆಯಾಗಿ ಮುಂದೆ ತರಬೇಕಾದವಳು ತಾಯಿಯಾದುದರಿಂದ ಹೆಣ್ಣಿಗೇ ವಿದ್ಯಾಭ್ಯಾಸದ ಅಗತ್ಯವಿದೆ ಎಂದು ಮಹಮದ್ ಪೈಗಂಬರರು ಬೋಧಿಸಿದ್ದಾರೆ. ಆದ್ದರಿಂದ ನನ್ನ ಮಗಳ ವಿದ್ಯಾಭ್ಯಾಸದ ಕುರಿತು ಯಾರು ಏನೂ ಹೇಳಬೇಕಾಗಿಲ್ಲ...."[೪೬] ಆಗ ಸಾರಾ ಅವರು "ನನ್ನ ತಂದೆಯ ದೃಢ ನಿರ್ಧಾರದೆದುರು, ನನ್ನ ಹಿರಿಯಣ್ಣನ ನಿರಂತರ ಪ್ರೋತ್ಸಾಹದೆದರು ನನ್ನ ತಾಯಿಯೇ ಆಗಲಿ ಇತರ ಯಾರೇ ಆಗಲಿ ಏನೂ ಮಾಡುವಂತಿರಲ್ಲಿಲ್ಲ"[೪೭] ಎಂದು ಬರೆದುಕೊಳ್ಳುತ್ತಾರೆ. ಹುಟ್ಟಿದ ಹೆಣ್ಣಿಗೆ ಮದುವೆ ಮಾಡುವುದೇ ಪರಮ ಗುರಿಯಾಗಿದ್ದ ಅಂದಿನ ಕಾಲದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಸಾರಾ ಅವರ ತಂದೆ ಮತ್ತು ಸಹೋದರರ ಕೊಟ್ಟ ಮಹತ್ವವು ಸ್ತ್ರೀಯನ್ನು ಹತ್ತಿಕ್ಕುವ 'ಸನಾತನ ಸಂಸ್ಕೃತಿಯ' ಪ್ರಯತ್ನಕ್ಕೆ ತೋರಿದ ಪ್ರತಿರೋಧವಾಗಿದೆ. ಇಲ್ಲಿ ಸಾರಾ ಅವರ ಶಿಕ್ಷಣಕ್ಕೆ ಅವರ ತಂದೆ ಮತ್ತು ಸೋದರರ ಅಚಲವಾದ ನಂಬಿಕೆಯೇ ಕಾರಣವಾಗಿದೆ. ಪಿತೃ ಪ್ರಧಾನವಾದ ಮೌಲ್ಯಗಳು ಇಲ್ಲಿ ಪುರುಷರಲ್ಲಿ ಇಲ್ಲವಾಗಿದೆ, ಧರ್ಮದ ಹೆಸರಲ್ಲಿ ಹತ್ತಿಕ್ಕಲು ಬಂದ ಧರ್ಮಾಂಧರಿಗೆ ಧರ್ಮದ ಸಾರಾವನ್ನೇ ತಂತ್ರವಾಗಿ ಬಳಸಿಕೊಂಡು ಶಿಕ್ಷಣ ಪಡೆದುಕೊಂಡಿದ್ದು ಸಾಮೂಹಿಕ ಮತ್ತು ಕೌಟುಂಬಿಕ ನೆಲೆಯ ಪ್ರತಿರೋಧವಾಗಿದೆ.

**ಆ. ಬುರ್ಕಾ ಇಲ್ಲದೆ ಶಾಲೆ, ಕಾಲೇಜ್‌ಗೆ ಹೋಗುವುದು:** ಮುಸ್ಲಿಂ ಧರ್ಮಕ್ಕೆ ಮಾತ್ರ ಸೀಮಿತವಾದ ಹಾಗೂ ಪುರುಷ ಪ್ರಧಾನ ವ್ಯವಸ್ಥೆಯ ಪ್ರತೀಕವಾದ ಬುರ್ಕಾವನ್ನು ನಿರಾಕರಿಸುವುದು ಪ್ರತಿರೋಧವಾಗಿದೆ. ಸಾರಾ ಅವರ 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ

ಬರೆಹದಲ್ಲಿ ಒಂದು ಪ್ರಸಂಗ ಹೀಗಿದೆ. "ಊರಿನ ಮುಸ್ಲಿಮರು ನನ್ನನ್ನು ಮಾತ್ರ ನಾನೊಂದು ವಿಚಿತ್ರ ಪ್ರಾಣಿ ಎಂಬಂತೆ ನೋಡುತ್ತಿದ್ದರು. ಊರಿನ ಪ್ರತಿಷ್ಠಿತ ಮುಸ್ಲಿಮರೊಬ್ಬರ ಮಗಳು ಘೋಷಾ ಇಲ್ಲದೆ, ಸೀರೆಯ ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳದೆ ಹಿಂದೂ ಹುಡುಗಿಯರಂತೆ ಅವರ ಜೊತೆಯಲ್ಲಿ ನೋಡಿ ಸಹಿಸುವುದು ಇವರಿಂದಾಗುತ್ತಿರಲಿಲ್ಲ. 'ನಿಮ್ಮ ಮಗಳೊಡನೆ ಬುರ್ಖಾ ಹಾಕಲು ಹೇಳಿ,' ಎಂದು ನನ್ನ ತಾಯಿಯೊಡನೆ ಯಾರೊ ಅಂದಾಗ ಅದನ್ನು ಕೇಳಿದ ನನ್ನ ತಂದೆ ಮತ್ತು ಅಣ್ಣಂದಿರು ಜೋರಾಗಿ ನಕ್ಕು ಬಿಟ್ಟರು. ನನ್ನ ಮಗಳು ಹೀಗಿದ್ದರೆ ಯಾರಿಗೂ ನಷ್ಟವಿಲ್ಲ. ಅವಳೇನಾದರೂ ತಪ್ಪು ಮಾಡಿದಾಗ ಯೋಚಿಸೋಣ ಎಂದು ನನ್ನ ತಂದೆ ಉತ್ತರ ಕೊಟ್ಟರು"[೪೮] ಎಂದು ಪ್ರತಿರೋಧಿಸುವ ಸನ್ನಿವೇಶವಿದೆ. ಸಾರಾ ಅವರು ಇಂತಹ ನಿರ್ಬಂಧದ ಆರೋಪಗಳಿಗೆ ತನ್ನನ್ನು ಬಲಿಯಾಗಿಸದ ತನ್ನ ತಂದೆ, ಅಣ್ಣನ ನಿರ್ಧಾರವನ್ನು ಓದುಗರಿಗೆ ತೆರೆದಿಡುತ್ತ ವೈಚಾರಿಕ ಜಾಗೃತಿಯನ್ನುಂಟು ಮಾಡುವ ಪ್ರಯತ್ನವನ್ನು ಸಹ ಮಾಡಿದ್ದಾರೆ. ಇದರ ಜೊತೆಗೆ ಬುರ್ಖಾಗೆ ಸಂಬಂಧಿಸಿದಂತೆ ನಜ್ಮಾ ನಾಸೀರ್ ಅವರ ಅನುಭವವನ್ನು ಗಮನಿಸಬಹುದು. "ನಾನು ಮೆಡಿಕಲ್ ಓದಲು ಬೆಂಗಳೂರಿಗೆ ಹೋದಾಗ ಬುರ್ಖಾ ಧರಿಸುತ್ತಿರಲಿಲ್ಲ. ಆಗ ಅಲ್ಲಿನ ಮುಸ್ಲಿಂ ಯುವಕರು ಹಾಗೂ ಹಸಿರು ಚಡ್ಡಿಗಳು ನನಗೆ ಅಡ್ಡಗಟ್ಟಿ ಬುರ್ಖಾ ಧರಿಸುವಂತೆ ಬೆದರಿಕೆ ಹಾಕಿದರು. ಆರಂಭದಲ್ಲಿ ನಾನೂ ಒಪ್ಪಿದರು ನಂತರ ಹಾಕಲಿಲ್ಲ"[೪೯] ಎಂದು ಹೇಳಿಕೊಳ್ಳುತ್ತಾರೆ.

ಮುಸ್ಲಿಂ ಧರ್ಮದಲ್ಲಿ ಮಾತ್ರ ಇರುವಂತಹ ಆಚರಣೆಯೆಂದರೆ ಅದು ಬುರ್ಖಾ ಪದ್ಧತಿ. ಎರಡೂ ಸನ್ನಿವೇಶಗಳಲ್ಲಿ ಪುರುಷ ಪ್ರಧಾನ ಮನಸ್ಥಿತಿಯುಳ್ಳವರು ಲೇಖಕರಿಗೆ ಬುರ್ಖಾ ತೊಡುವಂತೆ ಒತ್ತಡ ಹಾಕುವ ಸಂಗತಿಯು ಕಂಡುಬರುತ್ತದೆ. ಆದರೆ ಸಾರಾ ಅವರ ತಂದೆ ಮತ್ತು ಅಣ್ಣ ಮೂಲಭೂತವಾದಿಗಳ ಬುರ್ಖಾ ಹಾಕುವ ಒತ್ತಾಯಕ್ಕೆ ಮಣಿಯದೇ ಸಾರಾ ಅವರನ್ನು ಶಾಲೆಗೆ ಕಳುಹಿಸುವುದು ಸಂಪ್ರದಾಯವಾದಿಗಳ ಶೋಷಣೆಗೆ ತೋರಿದ ಪ್ರತಿರೋಧವಾಗಿದೆ. ಆರಂಭದ ದಿನಗಳಾದ ಕಾರಣದಿಂದ ಇಲ್ಲಿ ಕೌಟುಂಬಿಕವಾಗಿ ಪ್ರತಿರೋಧವಿದ್ದರೆ, ನಜ್ಮಾ ಅವರು ಏಕಾಂಗಿಯಾಗಿ ಬುರ್ಖಾ ತೊಡುವುದನ್ನು ನಿಲ್ಲಿಸುವುದು; ಮುಸ್ಲಿಂ ಧರ್ಮದೊಳಗಿನ ಮಹಿಳೆಯರ (ನವ ಪೀಳಿಗೆಯ) ಸ್ಥಿತಿಗತಿಯಲ್ಲಿನ ಅಲ್ಪಮಟ್ಟಿಗಿನ ಪರಿವರ್ತನೆಯನ್ನು ಸೂಚಿಸುತ್ತದೆ. ನಜ್ಮಾ ಅವರು ಬಳಸುವ 'ಹಸಿರು ಚೆಡ್ಡಿಗಳು' ಎನ್ನುವ ಪದವು ಮುಸ್ಲಿಂ ಮೂಲಭೂತವಾದಿಗಳು ಎಂಬ ಅರ್ಥವನ್ನೊಳಗೊಂಡಿದ್ದು, ಇಲ್ಲಿ ಲೇಖಕರಲ್ಲಿರುವ ಸೈದ್ಧಾಂತಿಕ ಖಚಿತತೆಯನ್ನು ಮತ್ತು ನಿರ್ಬಂಧಗಳನ್ನು ಮೀರುವ ತವಕಗಳೆರಡು ಗೋಚರಿಸುತ್ತವೆ.

ಇ. ಧಾರ್ಮಿಕ ಮೂಲಭೂತವಾದದ ಹೇರುವಿಕೆಗೆ ಪ್ರತಿರೋಧ: ಜೀವಪರ ಕಾಳಜಿಯುಳ್ಳವರು ಸ್ವಧರ್ಮದೊಳಗೆ ಇರುವ ಕೋಮು ಮನೋಭಾವನೆಯನ್ನು ಪ್ರತಿರೋಧಿಸುವುದರ ಭಾಗವಾಗಿ ಕೆಳಗಿನ ನಜ್ಮಾ ನಾಸೀರ್ ಹೇಳುವ ಸನ್ನಿವೇಶವನ್ನು ಗಮನಿಸಬಹುದು. "ನನಗೆ ಮಾಡ್‌ಲಿಂಗ್

ಎಂದರೆ ತುಂಬಾ ಇಷ್ಟ. ಸುರಗಿ ಎಂಬ ಸೀರೆಯ ಬ್ರ್ಯಾಂಡ್ ಇದೆ. ನಮ್ಮ ದೀಪದ ಮಲ್ಲಿಯವರು ತಯಾರಿಸಿದ ಅರಿಶಿನ, ಕೆಂಪು ಸೀರೆಯನ್ನು ನಾನೊಮ್ಮೆ ಧರಿಸಿ ಹಣೆಗೆ ತಿಲಕ ಇಟ್ಟುಕೊಂಡಿದ್ದೆ. ಆ ಫೋಟೋವನ್ನು ಫೇಸ್ಬುಕ್ ನಲ್ಲಿ ಹಾಕಿಕೊಂಡಿದ್ದೆ. ಇದನ್ನು ಗಮನಿಸಿದ ಕೆಲವು ಮುಸ್ಲಿಂ ಮೂಲಭೂತವಾದಿಗಳು ನನಗೆ ವೈಯಕ್ತಿಕವಾಗಿ ನಿಂದಿಸಿ, ಮುಸ್ಲಿಂ ಆಗಿ ಈ ರೀತಿ ಮಾಡುತ್ತಿಯಲ್ಲ ನೀನು ಮುಸ್ಲಿಂಗೆ ಹುಟ್ಟಿಲ್ಲ ಎಂದು ಮೂದಲಿಸಿದರು. ಆಗ ನಾನಂದೆ ಬಿಂದಿ ಇಟ್ಟುಕೊಳ್ಳುವುದುರಿಂದ, ಸೀರೆ ತೊಡುವುದರಿಂದ ನಿಮ್ಮ ಧರ್ಮ ಹಾಳಾಗುವುದಾದರೆ ನಿಮ್ಮ ಧರ್ಮ ಇಷ್ಟು ವೀಕ್ ಎಂದೆ"[೫೦] ಎಂದು ಲೇಖಕರು ಪ್ರತಿರೋಧಿಸುತ್ತಾರೆ. ಧಾರ್ಮಿಕ ಮೂಲಭೂತವಾದವು ಇಡೀ ಸಮಾಜವನ್ನು ಹೀಗೆ ಮತಾಂಧತೆಯ ಕುರುಡುತನದಿಂದಲೇ ನೋಡುತ್ತದೆ. ಇಲ್ಲಿಯೂ ಸಹ ನಜ್ಮಾ ಸೀರೆ ತೊಟ್ಟು, ಬಿಂದಿ ಇಟ್ಟುಕೊಂಡಿರುವುದನ್ನು ಸಹ ಮತಾಂಧತೆಯ ನೆಲೆಯಲ್ಲಿ ನೋಡಿಯೇ ಟೀಕಿಸುತ್ತಾರೆ. ಆದರೆ ಇಂತಹ ಮತಾಂಧರ ಕುರುಡು 'ಧರ್ಮ'ವನ್ನು ಪ್ರಶ್ನೆ ಮಾಡಿದ್ದು ಪ್ರತಿರೋಧವಾಗಿದೆ. ಲೇಖಕರ ಪ್ರಶ್ನೆಯಲ್ಲಿ ವೈಚಾರಿಕ ಜಾಗೃತಿ, ಶಿಕ್ಷಣದ ಅರಿವು ಧರ್ಮಾಂಧತೆಯ ಸ್ವರೂಪವನ್ನು ಪ್ರಶ್ನಿಸುವ ಮನೋಧರ್ಮವನ್ನು ಮಹಿಳೆಯರಲ್ಲಿ ಉಂಟು ಮಾಡಿರುವ ಸಂಗತಿಯನ್ನು ಗುರುತಿಸಬಹುದಾಗಿದೆ.

**೭.೩.ಅಭಿವ್ಯಕ್ತಿ ಸ್ವರೂಪ**

ಧಾರ್ಮಿಕ ಅಲ್ಪಸಂಖ್ಯಾತ ಹಿನ್ನೆಲೆಯಿರುವ ಕನ್ನಡದ ಬರಹಗಾರರ ಆತ್ಮಕಥೆಗಳು ಇತ್ತೀಚಿನ ದಿನಗಳಲ್ಲಿ ರಚನೆಗೊಳ್ಳುತ್ತಿದ್ದರೂ ಅವುಗಳ ಪ್ರಮಾಣ ಕಡಿಮೆಯೇ ಇವೆ. ಪ್ರಸ್ತುತ ಅಧ್ಯಯನದಲ್ಲಿ ಪ್ರಕಟಗೊಂಡಿರುವ ಆತ್ಮಕಥೆಗಳ ಜೊತೆಗೆ ಇತರೆ ಸಾಹಿತ್ಯ ಪ್ರಕಾರಗಳಲ್ಲಿರುವ ಆತ್ಮಕಥನಾತ್ಮಕ ಬರಹಗಳನ್ನು ಹಾಗೂ ಕೆಲವು ಲೇಖಕರನ್ನು ಸಂದರ್ಶನ ಮಾಡಿ ಅವರ ಅಭಿವ್ಯಕ್ತಿ ಸ್ವರೂಪದಲ್ಲಿನ ವಿಶಿಷ್ಟತೆಯನ್ನು ಅರಿಯಲಾಗುವುದು.

ಅ. ನಿರ್ಲಿಪ್ತತೆ, ವ್ಯಂಗ್ಯತೆ ಮತ್ತು ಉತ್ಪ್ರೇಕ್ಷತೆ : ಬೊಳುವಾರು ಮಹಮದ್ ಕುಂಞಿ ಅವರು ತಮಗಾದ ಅವಮಾನಗಳನ್ನು ವ್ಯಂಗ್ಯವಾಗಿ ನಿರೂಪಿಸಿದರೆ. ರಂಜಾನ್ ದರ್ಗಾಅವರು ವ್ಯವಸ್ಥೆಯ ಕ್ರೂರತನವನ್ನು ನಿರ್ಲಿಪ್ತತೆಯಿಂದ ವ್ಯಕ್ತಪಡಿಸುತ್ತಾರೆ. ರಂಜಾನ್ ದರ್ಗಾ ಅವರ 'ನನ್ನ ಪರಿಸರ ಮತ್ತು ಕಾವ್ಯ' ಆತ್ಮಕಥನಾತ್ಮಕ ಬರಹವನ್ನು ಮತ್ತು ಬೊಳುವಾರ ಮಹಮ್ಮದ್ ಕುಂಞಿ ಅವರ ಸಂದರ್ಶನದ ವಿವರಗಳನ್ನು ಇದಕ್ಕೆ ಉದಾಹರಣೆಗಳಾಗಿ ಕಾಣಬಹುದಾಗಿದೆ. "ಗೌಡರ ಬಾವಿಯ ನೀರು ಕುಡಿಯಲು ಯೋಗ್ಯವಾಗಿದ್ದರಿಂದ ಎಲ್ಲಾ ಸವರ್ಣಿಯರು ಮತ್ತು ನಾವು ಅಲ್ಲಿಂದಲೇ ಕುಡಿಯಲು ನೀರು ತರುತ್ತಿದ್ದೆವು. ಒಂದು ಸಲ ನಮ್ಮೊಡನೆ ಹೆಚ್ಚು ಸಂಬಂಧವಿಟ್ಟುಕೊಂಡಿದ್ದ ವ್ಯಕ್ತಿಯೊಬ್ಬ ಸಾಯಂಕಾಲದಲ್ಲಿ ಆ ಬಾವಿಯಿಂದ ನೀರು ತರುತ್ತಿರುವಾಗ ಗೆಳೆಯರೊಂದಿಗೆ ಆಟವಾಡುತ್ತಿದ್ದ ನಾನು ಥಕ್ಕನೆ ನೋಡಿ ಓಡಿಹೋಗಿ ರುಮಾಲಿನ ಚುಂಗವನ್ನು ಹಿಡಿದು ಪ್ರೀತಿಯಿಂದ

'ಮಾಮಾ' ಅಂದೆ, ಆತ ನನ್ನೊಡನೆ ಬಹಳಷ್ಟು ಚೇಷ್ಟೆ ಮಾಡುತ್ತ ಎತ್ತಿ ಗಿರಗಿರನೆ ತಿರುಗಿಸುತ್ತಿದ್ದ. ಆದರೆ ಈಗ ನೀರು ಸುರವಿ, ಕಪಾಳಕ್ಕೆ ಜೋರಾಗಿ ಹೊಡೆದು ಮತ್ತೆ ನೀರು ತರಲು ಬಾವಿಯ ಕಡೆಗೆ ಹೊರಟ, ನಾನು ಗಾಬರಿಯಾಗಿ ಪಕ್ಕದಲ್ಲೇ ನಿಲ್ಲಿಸಿದ್ದ ಗಾಡಿಯ ಕೆಳಗಡೆ ಹೋಗಿ ಅವನು ಹೋಗುವುದನ್ನೇ ನೋಡುತ್ತ ಕುಳಿತೆ"[೫೧] ಎಂದು ಲೇಖಕರು ಬರೆದುಕೊಳ್ಳುತ್ತಾರೆ. ಪ್ರಸ್ತುತ ಸನ್ನಿವೇಶವು ಸಾಮಾಜಿಕ ವ್ಯವಸ್ಥೆಯ ಅಸಮಾನತೆಯನ್ನು ಕುರಿತು ಆಕ್ರೋಶದ ಮೂಲಕ ಅಭಿವ್ಯಕ್ತಿಗೊಳ್ಳದೆ ಗಂಭೀರವಾಗಿ ಹರಿಯುವ ನದಿಯಂತೆ ವ್ಯಕ್ತಗೊಂಡರೂ ಅದರ ಒಳತುಡಿತ ಮಾತ್ರ ನದಿಯ ಒಡಲಿನ ಹರಿವಿನಂತೆಯೇ ತೀಕ್ಷ್ಣವಾಗಿಯೇ ಇರುತ್ತದೆ. ಇದು ರಂಜಾನ್ ದರ್ಗಾ ಅವರ ಅಭಿವ್ಯಕ್ತಿ ಶೈಲಿಯಾದರೆ ಬೊಳುವಾರು ಮಹಮದ್ ಕುಂಞ ಅವರು ತಮ್ಮ ಸಂದರ್ಶನದಲ್ಲಿ ವ್ಯಂಗ್ಯವಾಗಿ ಹೀಗೆ ಅಭಿವ್ಯಕ್ತಿಸುತ್ತಾರೆ. "ಮುಸ್ಲಿಮರು ದಿನಕ್ಕೆ ಐದು ಬಾರಿ ಪ್ರಾರ್ಥನೆ ಮಾಡುತ್ತಾರೋ ಇಲ್ಲವೋ ಗೊತ್ತಿಲ್ಲ, ಆದರೆ ದಿನಕ್ಕೆ ಐದು ಬಾರಿ ನನ್ನ ನಿಷ್ಠೆ ಭಾರತಕ್ಕೆ ಹೇಳುವಂತಾಗಿದೆ."[೫೨] ಮೇಲಿನ ಅಭಿಪ್ರಾಯವು ಉತ್ಪ್ರೇಕ್ಷೆ ಮತ್ತು ವ್ಯಂಗ್ಯದಿಂದ ಕೂಡಿದೆ. ಮುಸ್ಲಿಮರು ತಮ್ಮ ದೇಶಾಭಿಮಾನವನ್ನು ಮತ್ತೆ ಮತ್ತೆ ಒರೆಗಚ್ಚಿ ತೋರಿಸಬೇಕಾದ ಅನಿವಾರ್ಯತೆಗಳಿದ್ದರೂ ಅವು ಬೊಳುವಾರ ಅವರು ಹೇಳುವ ಮಟ್ಟಕ್ಕೆ ತಲುಪಿಲ್ಲ. ಇಲ್ಲಿ ಐದು ಬಾರಿ ಎನ್ನುವುದು ವ್ಯಂಗ್ಯವಾಗಿದೆ.

ಆ. ಭಾಷಿಕ ನಿರೂಪಣೆಗಳು: ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಆತ್ಮಕಥನಾತ್ಮಕ ಬರಹಗಳು ಭಾಷಿಕವಾಗಿ ಅವಮಾನ ಮತ್ತು ಪ್ರತಿರೋಧಗಳ ಸಂಭಾಷಣೆ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯನ್ನು ಹಾಗೂ ನಿರೂಪಣೆ ಸಂದರ್ಭದಲ್ಲಿ ಶಿಷ್ಠ ಭಾಷೆಯನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. "ಅಲ್ಲಿ ಮನೇಲಿ ಇವಕೆ ತಿಂಬುಕ್ ಎಂತದೂ ಇರತ್ತಿಲ್ಲೆ ಕಾಂತ್. ಇಲ್ ಬಂದದ್ದೇ ತಡ, ತಿಂದ್ ಸೊಕ್ಕಿ ಹೆಂಗಾಗ್ತು ಕಾಣಿ."[೫೩] 'ತಾಳೇಗರಿ'ಯಲ್ಲಿ ಕಂಡುಬರುವ ಮಂಗಳೂರಿನ ಪ್ರಾದೇಶಿಕ ಭಾಷೆಯು ಓದುಗರಿಗೆ ಆಪ್ತವಾಗಲು ಬಳಸಲಾಗಿದೆ.

ಬಾಲ್ಯದ ದಿನಗಳಲ್ಲಿ ರಂಜಾನ್ ದರ್ಗಾ ಅವರಿಗೆ ಮುಸ್ಲಿಂ ಎಂಬ ಕಾರಣಕ್ಕೆ ಜೊತೆಗೆ ಆಟ ಆಡುವುದಕ್ಕೆ ಕರೆದುಕೊಳ್ಳಲು ನಿರಾಕರಿಸಿದಾಗ ದರ್ಗಾರವರು ಬಾಲ್ಯದಲ್ಲಿಯೇ ತೋರಿದ ಪ್ರತಿರೋಧವು ಈ ಕೆಳಗಿನಂತಿದೆ. "ಸುಮ್ಮನೆ ಕಣ್ಣಾಡಿಸುತ್ತಾ ಮನೆಯಲ್ಲೇ ಕುಳಿತೆ. 'ನೋಡ್ರೋ ನನ್ನ ಮೋಟಾರ್ ಯಕಾಡಿ ಬೇಕ್ ಅಕಾಡಿ, ಹ್ಯಾಂಗ್ ಬೇಕ್ ಹಂಗ್ ಓಡಾಡತೈತಿ' ಎಂದು ಕಲ್ಲು ತುಂಬಿದ ಆ ಹಳ್ಳಿಯ ಒಳದಾರಿಯಲ್ಲಿ ಕಟ್ಟಿಗೆಯ ತುಂಡನ್ನು ಎಳೆಯುತ್ತ ಓಡಾಡಿದೆ. 'ಹಿಂಗ್ ನೀವು ನಿಮ್ಮ ಮೋಟಾರ್ ಮ್ಯಾಲೆ ಕೂಡ್ರಿ ನೋಡ್ತೀನಿ' ಎಂದು ಹೇಳಿದ್ದಕ್ಕೆ ಅವರು ತಮ್ಮ ಆಟಿಗೆ ಸಾಮಾನುಗಳನ್ನು ತೆಗೆದುಕೊಂಡು ಓಡಿದರು. ಹೀಗೆ ಒಂದಲ್ಲ ಒಂದು ದೃಷ್ಟಿಯಿಂದ ಪರಕೀಯತೆಯನ್ನು ಅನುಭವಿಸುತ್ತಲೇ ಬೆಳೆದೆ ಮತ್ತು ಪರಕೀಯತೆಯನ್ನು ಕಳೆದುಕೊಳ್ಳಲು ಅನೇಕ ಪ್ರಯತ್ನ ಮಾಡಿದೆ."[೫೪] ಮೇಲಿನ ಸಂದರ್ಭದಲ್ಲಿನ ಪ್ರತಿರೋಧದ ಸಂಭಾಷಣೆಯು ಧಾರವಾಡ ಸುತ್ತಮುತ್ತಲಿನ ಪ್ರಾದೇಶಿಕತೆಯಲ್ಲಿ

ಅಭಿವ್ಯಕ್ತಿಗೊಂಡರೆ, ನಿರೂಪಣೆಯು ಶಿಷ್ಟ ಭಾಷೆಯಲ್ಲಿ ನಿರೂಪಿಸಲ್ಪಟ್ಟಿದೆ. ಆತ್ಮಕಥನಕಾರರು ತಮಗಾದ ಅನುಭವಗಳನ್ನು ಸಂಭಾಷಣೆ ರೂಪದಲ್ಲಿ ವ್ಯಕ್ತಪಡಿಸುವಾಗ ಪ್ರಾದೇಶಿಕ ಭಾಷೆಯನ್ನೇ ಹೆಚ್ಚು ಬಳಸುತ್ತಾರೆ. ಈ ಬಳಕೆಯೂ ಓದುಗರಿಗೆ ಆಪ್ತವಾಗಿ ತಲುಪುವುದರ ಭಾಗವಷ್ಟೇ ಆಗದೇ, ತಮಗೆ ಕಾಡಿದ ಅನುಭವಗಳನ್ನು ಹಾಗೆಯೇ ಉಲ್ಲೇಖಿಸುವುದು ಯಾಂತ್ರಿಕತೆಯನ್ನೂ ದೂರ ಮಾಡುತ್ತದೆ.

ಇ. ಸಾರ್ವತ್ರಿಕತೆ : ಈ ಹಿಂದೆ ಹೇಳಿದಂತೆ ಆತ್ಮಕಥೆಗಳು ಕೇವಲ ಆತ್ಮಕಥನಕಾರರಿಗೆ ಸೀಮಿತವಲ್ಲ, ಅವು ಸಮಷ್ಟಿ ಕೇಂದ್ರಿತವಾದವುಗಳು. ಇದಕ್ಕೆ ಪೂರಕವಾಗಿ ಭಾಮ ಅವರು ತಮ್ಮ ಆತ್ಮಕಥೆಯನ್ನು ಸಾರ್ವತ್ರಿಕ ನೆಲೆಯಲ್ಲಿ ವ್ಯಕ್ತಪಡಿಸುವುದನ್ನು ಕಾಣಬಹುದು. "ಬೆಚ್ಚಗಿನ ಮನೆ ಇಲ್ಲ. ಉಳಿದ ಬಡ ದಲಿತರ ಅನುಭವ ಏನೋ ನನದೂ ಅದೇ."[೫೫] ಭಾಮ ಅವರ ಈ ಸಾಲುಗಳು ಮತ್ತು ಆತ್ಮಕಥೆಯೂ ತಾನು ಮತ್ತು ತನ್ನಂತೆಯೇ ಅಪಮಾನಗಳಿಗೆ ಒಳಗಾದ ಸಮುದಾಯದ ಪ್ರತಿನಿಧಿಯಾಗಿ ಅಭಿವ್ಯಕ್ತಿಗೊಂಡಿರುವುದನ್ನು ಸಾಕ್ಷೀಕರಿಸುತ್ತವೆ.

ಈ. ಲೇಖನಿಯ ಮೇಲಿನ ನಂಬುಗೆ : ದಲಿತ ಕ್ರೈಸ್ತ ಹಿನ್ನೆಲೆಯ ಬಾಮಾ ಅರ್ಥಾತ್ ಮೇರಿ ಫಾತಿಮಾ ರಾಣಿ "ನನ್ನ ಬರಹಗಳು ತಮಿಳುನಾಡಿನ ದಲಿತ ಬದುಕಿನ ನೈಜ ಘಟನೆಗಳ ಪೆನ್ ಅಂಡ್ ಇಂಕ್ ವರ್ಷನ್ ಅಷ್ಟೆ."[೫೬] "ನನಗೆ ನನ್ನ ಜನರಿಗಾಗಿ ಮೂರ್ತಿಗಳ ಕೆತ್ತಲಾಗಲಿಲ್ಲ, ಸ್ಮಾರಕಗಳ ನಿಲ್ಲಿಸಲಾಗಲಿಲ್ಲ, ಪುಸ್ತಕ ಬರೆದೆ"[೫೭] ಎನ್ನುತ್ತಾರೆ. ಲೇಖಕಿಯು ಇಲ್ಲಿ ಸಾಹಿತ್ಯ ಅಭಿವ್ಯಕ್ತಿಯನ್ನು ನಂಬಿಕೊಂಡಿದ್ದಾರೆ. ಬರಹ ಸಮಾಜದಲ್ಲಿ ತಂದಿರುವ ಬದಲಾವಣೆ ಗಣನೀಯವಾದದ್ದು. ಅದಕ್ಕಾಗಿಯೇ ಬಾಮ ಅವರು ಬರಹದ ಮೂಲಕ ಜನರನ್ನು ತಲುಪುವ ಮಾದರಿಯನ್ನು ಅನುಸರಿಸಿದ್ದಾರೆ. ಲೇಖಕಿಯ ಈ ಅಭಿವ್ಯಕ್ತಿಯ ಮಾದರಿಯು ಭೌತಿಕವಾಗಿ ಮೂರ್ತಿಗಳನ್ನು, ಸ್ಮಾರಕಗಳನ್ನು ಕೆತ್ತದಿದ್ದರು, ಸಾಹಿತ್ಯಕವಾಗಿ ಓದುಗರಲ್ಲಿ ವೈಚಾರಿಕ ಸ್ಮಾರಕಗಳನ್ನು ಕಟ್ಟುವ ಪ್ರಯತ್ನ ಮಾಡಿದೆ.

ಉ. ಶೀರ್ಷಿಕೆಗಳು : ಪ್ರಸ್ತುತ ಅಧ್ಯಯನಕ್ಕೆ ತೆಗೆದುಕೊಂಡಿರುವ ಬಹುತೇಕ ಆತ್ಮಕಥೆ ಹಾಗೂ ಆತ್ಮಕಥನಾತ್ಮಕ ಬರಹಗಳು ಒಂದು ಬಗೆಯ ಪರಕೀಯತೆಯನ್ನು ಅಭಿವ್ಯಕ್ತಪಡಿಸುತ್ತವೆ. 'ತಾಳೆಗರಿ'ಯು ಜಾತಿ, ಧರ್ಮಗಳ ಸಂಕೋಲೆಗಳಿಂದ ಫಾತಿಮಾ ಬೀಬಿಯವರ ಬದುಕನ್ನು ಚುಚ್ಚಿದ ರೂಪಕವಾಗಿ ಬಳಸಿಕೊಂಡಿದ್ದಾರೆ. 'ನಾನು ಆಮಿರ್‌ಖಾನ್ ಭಯೋತ್ಪದಕನಲ್ಲ', ರಂಜಾನ್ ದರ್ಗಾ ಅವರ 'ಪರಕೀಯತೆ' ಅಬ್ದುಲ್ ಬಶೀರ್ ಅವರ 'ನಾನು ಸಾಬಿ ಅಲ್ಲ' ಇನ್ನೂ ಮುಂತಾದ ಬರಹಗಳು ಆರೋಪಗಳಿಂದ ನಲುಗಿ ಪಂಥ ಮುಕ್ತವಾದ ಗೆಳೆತನಕ್ಕೆ ಹಪಹಪಿಸುವಂತೆ ಹಾಗೂ ತಮ್ಮನ್ನು ಒಳಗೊಳ್ಳದ ಸಮಾಜಕ್ಕೆ ಎಚ್ಚರಿಸುವಂತೆಯೂ ಇವೆ.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಾಯವು ಧಾರ್ಮಿಕ ಮೂಲಭೂತವಾದಿತನಗಳು ಅನ್ಯ ಧರ್ಮಿಯರನ್ನು ಅವಮಾನಗೊಳಿಸುತ್ತಿರುವ ಹಲವು ಪರಿಗಳನ್ನು ವಿಶ್ಲೇಷಿಸುತ್ತಿರುದಷ್ಟೆ ಅಲ್ಲದೇ, ಈ

ಪರಕೀಯತೆಗಳಿಂದ ಹೊರಬರಲು ಉಳಿದ ಸಮೂಹಗಳು ಮಾಡುತ್ತಿರುವ ಹಲವು ಪ್ರಯತ್ನಗಳನ್ನು ಕಂಡುಕೊಳ್ಳಲಾಗಿದೆ. ಇಷ್ಟೆಲ್ಲಾ ಅವಮಾನಗಳು ನಡೆಯುತ್ತಿದ್ದರು ಮತ್ತೊಂದು ಬಗೆಯಲ್ಲಿ ಸಮಾಜ ಮಾನವೀಯತೆಯನ್ನು ಧರ್ಮಾತೀತವಾಗಿ, ಜಾತ್ಯತೀತವಾಗಿ, ವರ್ಗಾತೀತವಾಗಿ ಅಲ್ಪಮಟ್ಟಿಗೆ ಸಮಾನವಾಗಿ ನೋಡುವ ಗುಣವನ್ನು ಮುಂದುವರೆಸಿಕೊಂಡು ಹೋಗುತ್ತಿದೆ.

**ಕೊನೆ ಟಿಪ್ಪಣಿಗಳು**

೧. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪು, ೭೩

೨. ಅದೇ, ಪುಟ, ೭೪

೩. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪು, ೧೨೨.

೪. ಸಂದರ್ಶನ : ನಜ್ಮಾ ನಾಸೀರ್.

೫. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪು, ೭೪

೬ ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪು, ೧೪೨

೭ ಮುಹಮ್ಮದ್ ಕುಳಾಯಿ, ಮುಹಮ್ಮದ್ ಅಲಿ ಬಿ.ಎ ಮೊಹಿದೀನ್ ನನ್ನೊಳಗಿನ ನಾನು, ಪುಟ, ೧೭೬

೮. ಫಕೀರ್ ಮುಹಮ್ಮದ್ ಕಟ್ಪಾಡಿ, ಮುಸ್ಲಿಂ ಸಂವೇದನೆಯ ಕಥಾ ಪ್ರಪಂಚ, ಪುಟ, ೩

೯. ಸಂದರ್ಶನ : ಕಲೀಮುಲ್ಲಾ, ದಿ.೨೨.೦೪.೧೯ ರಂದು ಶಿವಮೊಗ್ಗದಲ್ಲಿ ಸಂದರ್ಶನ ಮಾಡಲಾಯಿತು.

೧೦. ನೂರ್ ಅಹಮದ್ ಎ.ಎಸ್, ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ, ಪುಟ, ೯೩.

೧೧. ಅದೇ, ಪುಟ, ೯೨.

೧೨. ಅದೇ ಪು, ೭೪.

೧೩. ಅದೇ ಪುಟ, ೮೦.

೧೪. ಮುಹಮ್ಮದ್ ಕುಳಾಯಿ, ಮುಹಮ್ಮದ್ ಅಲಿ, ಬಿ.ಎ ಮೊಹಿದೀನ್, ನನ್ನೊಳಗಿನ ನಾನು, ಪುಟ – ೧೭೬.

೧೫. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪುಟ, ೭೫.

೧೬. ಸಂದರ್ಶನ : ಅಬ್ಬಾಸ್ ಮೇಲಿನ ಮನಿ

೧೭. ಬಶೀರ್.ಬಿ.ಎಂ, ಬಾಡೂಟದ ಜೊತೆಗೆ ಗಾಂಧಿ ಜಯಂತಿ, ಪುಟ, ೭೮.

೧೮. ಅದೇ, ಪುಟ, ೭೯.

೧೯. ಸಂದರ್ಶನ : ಅಬ್ಬಾಸ್ ಮೇಲಿನಮನಿ.೦೮.೦೪.೨೦೧೯ ರಂದು ದಾವಣಗೆರೆಯಲ್ಲಿ 'ಉಮ್ಮಾ' ಕಾದಂಬರಿ ಬಿಡುಗಡೆ ಸಮಾರಂಭದಲ್ಲಿ ಸಂದರ್ಶನ ಮಾಡಲಾಯಿತು.

೨೦. ನೂರ್ ಅಹಮದ್ ಎ.ಎಸ್. ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ, ಪುಟ, ೧೨೨.

೨೧. ಅದೇ ಪು, ೧೪೩.

೨೨. ಅದೇ, ಪುಟ, ೧೧೩.

೨೩. ಬಶೀರ್.ಬಿ.ಎಂ, ಬಾಡೂಟದ ಜೊತೆಗೆ ಗಾಂಧಿ ಜಯಂತಿ, ಪುಟ, ೮೨.

೨೪. ಫಾತಿಮಾ ರಾಣಿ, ಅನುಪಮಾ ಹೆಚ್.ಎಸ್. (ಅನು) ತಾಳೇಗರಿ, ಪುಟ, ೯೧.

೨೫. ಅದೇ, ಪು, ೯೭

೨೬. ಅದೇ, ಪುಟ, ೬೭.

೨೭. ಅದೇ, ಪು, ೧೨

೨೮. ರೀಟಾ ರೀವಿ, ಸ್ಮೃತಿ ಶಿಲ್ಪಿ ಫಾದರ್ ಅಂತಪ್ಪ, ಪು, ೬೪.

೨೯. ಅದೇ, ಪುಟ, ೭೩

೩೦.. ಅದೇ, ಪುಟ, ೩೭

೩೧. ಸ್ಟ್ಯಾನಿ ಬ್ಯಾಪ್ಟಿಸ್ಟ್, (ಸಂ)ಕ್ರೈಸ್ತರ ಕಣ್ಮಣಿ, ಪುಟ, ೨೧.

೩೨. ಅದೇ, ಪುಟ, ೨೨

೩೩. ರೀಟಾ ರೀವಿ, ಸ್ಮೃತಿ ಶಿಲ್ಪಿ ಫಾದರ್ ಅಂತಪ್ಪ, ಪುಟ, ೮೦.

೩೪. ಫಾತಿಮಾ ರಾಣಿ, ಅನುಪಮಾ ಹೆಚ್.ಎಸ್. (ಅನು) ತಾಳೇಗರಿ, ಪುಟ, ೭೨.

೩೫. ಅದೇ, ಪುಟ, ೯೯.

೩೬. ನೂರ್ ಅಹಮದ್ ಎ.ಎಸ್, ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ, ಪುಟ, ೧೩೮.

೩೭. ಸಂದರ್ಶನ – ಸನಾವುಲ್ಲ, ದಿ.೧೨.೦೫.೨೦೧೯ರಂದು ನವಿಲೇಹಾಳಿನಲ್ಲೇ ಸಂದರ್ಶನ ಮಾಡಲಾದ ಸಂದರ್ಶನ.

೩೮. ಅಬ್ದುಲ್ ರಶೀದ್, ಲಂಕೇಶ್ ಪತ್ರಿಕೆ, ಜುಲೈ–೦೧, ಪುಟ, ೧೫.

೩೯. ಅದೇ, ಪುಟ, ೧೫

೪೦. ಫಕೀರ್ ಮುಹಮ್ಮದ್ ಕಟ್ಪಾಡಿ, ಶತಮಾನದ ಬೆಳಕು, ಪುಟ, ೯೭.

೪೧. ಸಂದರ್ಶನ – ಬೊಳುವಾರು ಮಹಮದ್ ಕುಂಞ, ದಿನಾಂಕ.೧೦.೦೪.೧೯ ರಂದು ಅವರನ್ನು ಧಾರವಾಡದ 'ಉಮ್ಮಾ' ಕಾದಂಬರಿಯ ಬಿಡುಗಡೆ ಸಂದರ್ಭದಲ್ಲಿ ಮಾಡಿದ ಸಂದರ್ಶನ.

೪೨. ಅದೇ,

೪೩. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪುಟ, ೧೨೮

೪೪. ವಿಜಯಾ ದಬ್ಬೆ (ಸಂ), ಲೇಖ - ಲೋಕ, ಪುಟ, ೨೬.

೪೫. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಬೆನ್ನುಡಿ,

೪೬. ಅದೇ, ಪುಟ, ೧೨೮.

೪೭. ಅದೇ, ಪುಟ, ೧೨೮

೪೮. ಅದೇ, ಪುಟ, ೧೩೦

೪೯. ಸಂದರ್ಶನ : ನಜ್ಮಾ ನಾಸೀರ್, ದಿ.೧೦.೦೪.೧೯ ರಂದು ಧಾರವಾಡದಲ್ಲಿ ಸುರಕೋಡ ಅವರ ಅಭಿನಂದನ ಸಮಾರಂಭದಲ್ಲಿ ಮಾಡಿದ ಸಂದರ್ಶನ.

೫೦. ಅದೇ,

೫೧. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪುಟ, ೬೧.

೫೨. ಸಂದರ್ಶನ-ಬೊಳುವಾರು ಮಹಮದ್ ಕುಂಞಿ, ದಿನಾಂಕ/೧೨/೦೮/೨೦೧೯ ರಂದು ಚಿತ್ರದುರ್ಗದ ವಿಚಾರಗೋಷ್ಠಿಯಲ್ಲಿ ಮಾಡಿದ ಸಂದರ್ಶನ.

೫೩. ಫಾತಿಮಾ ರಾಣಿ, ಅನುಪಮಾ ಹೆಚ್.ಎಸ್. (ಅನು) ತಾಳೇಗರಿ, ಪುಟ, ೧೮

೫೪. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪು, ೬೧.

೫೫. ಫಾತಿಮಾ ರಾಣಿ, ಅನುಪಮಾ ಹೆಚ್.ಎಸ್. (ಅನು) ತಾಳೇಗರಿ, ಪು, ೭.

೫೬.ಅದೇ, ಪುಟ, ೧೦

೫೭. ಅದೇ, ಪುಟ, ೧೬

ಅಧ್ಯಾಯ : ಎಂಟು

# ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ

ಅಧ್ಯಾಯ : ಎಂಟು

# ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ

## ಪ್ರಸ್ತಾವನೆ

ಈ ಹಿಂದಿನ ಅಧ್ಯಾಯಗಳಲ್ಲಿ ಅವಮಾನ ಮತ್ತು ಪ್ರತಿರೋಧಗಳು ಆತ್ಮಕಥೆಗಳಲ್ಲಿ ಪ್ರಕಟಗೊಂಡ ಬಗೆಗಳನ್ನು ಬಿಡಿ ಬಿಡಿಯಾಗಿ ಚರ್ಚೆ ಮಾಡಲಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಪರಿಕಲ್ಪನೆಗಳು ಅಭಿವ್ಯಕ್ತಿಗೊಂಡಿರುವ ಸಂಗತಿಗಳನ್ನು ತೌಲನಿಕ ವಿಧಾನದಲ್ಲಿ ಚರ್ಚೆ ಮಾಡಲಾಗುತ್ತದೆ. ಈ ಸಂದರ್ಭದಲ್ಲಿ ತೌಲನಿಕ ಅಧ್ಯಯನದ ಅಗತ್ಯತೆಯನ್ನು ಅಧ್ಯಯನದ ಪರಿಕಲ್ಪನೆಗಳೇ ಸಮರ್ಥಿಸುತ್ತವೆ. ಭೂಮಿಯಲ್ಲಿ ಹುಟ್ಟಿದ ಮಾನವರು ಒಂದಲ್ಲ ಒಂದು ಕಾರಣಕ್ಕೆ ಅವಮಾನಗಳನ್ನು ಅನುಭವಿಸಿರುತ್ತಾರೆ. ಆಯಾ ಅವಮಾನಗಳಿಗೆ ಅವುಗಳದ್ದೇ ಆದ ಚಾರಿತ್ರಿಕ ಕಾರಣಗಳಿರುತ್ತವೆ. ಈ ಅವಮಾನಗಳು ಎಲ್ಲರಿಗೂ ಒಂದೇ ರೀತಿಯಾಗಿರುವುದಿಲ್ಲ. ಅವು ವ್ಯಕ್ತಿಗಳಿಂದ ವ್ಯಕ್ತಿಗಳಿಗೆ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಚಹರೆಗಳ ಕಾರಣಗಳಿಂದ ಭಿನ್ನ ಭಿನ್ನವಾಗಿ ಅನುಭವಕ್ಕೆ ಬಂದಿರುತ್ತವೆ. ಇಂತಹ ಅನುಭವಗಳು ಆತ್ಮಕಥೆಗಳಲ್ಲೂ ಇದ್ದೂ, ಈ ಅನುಭವಗಳ ಮತ್ತು ಅಭಿವ್ಯಕ್ತಿಯ ಭಿನ್ನತೆ, ಸಾಮ್ಯತೆಗಳನ್ನು ಅಧ್ಯಯನ ಮಾಡಲು ತೌಲನಿಕ ಅಧ್ಯಯನದ ಅಗತ್ಯತೆ ಇದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ಜಾತಿ, ವರ್ಗ, ಲಿಂಗ, ಧರ್ಮಗಳೆಂಬ ನಾಲ್ಕು ಸಂಗತಿಗಳ ಮೂಲಕ ವಿಶ್ಲೇಷಣೆ ಮಾಡಲಾಗುವುದು. ಈ ನಾಲ್ಕು ಸಾಮಾಜಿಕ ವಾಸ್ತವಗಳ ಒಳಗಿರುವ ಶ್ರೇಣೀಕರಣಗಳು ಅವಮಾನ ಮತ್ತು ಪ್ರತಿರೋಧಗಳು ಆತ್ಮಕಥೆಗಳಲ್ಲಿ ಬೇರೆ ಬೇರೆ ಬಗೆಯಲ್ಲಿ ಅಭಿವ್ಯಕ್ತಿಗೊಂಡಿರುವುದಕ್ಕೆ ಕಾರಣಗಳಾಗಿವೆ. ಈ ಕಾರಣಗಳಿಂದ ಪ್ರತಿ ಉಪ ಅಧ್ಯಾಯದ ಒಳಗೆ ಅವಮಾನ ಮತ್ತು ಪ್ರತಿರೋಧಗಳನ್ನು ತೌಲನಿಕವಾಗಿ ಚರ್ಚಿಸುತ್ತ, ಅವುಗಳೊಳಗಿನ ಸಾಮ್ಯತೆ ಮತ್ತು ಭಿನ್ನತೆಗಳನ್ನು ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗುತ್ತದೆ. ಈ ಭಿನ್ನತೆಗಳನ್ನು ಗುರುತಿಸಲು ಏಳು ಮಾನದಂಡಗಳನ್ನು ಅನುಸರಿಸಲಾಗುತ್ತದೆ. ಆ ಏಳು ಮಾನದಂಡಗಳು ಈ ಕೆಳಗಿನಂತಿವೆ.

೧. ಆತ್ಮಕಥನಕಾರರ ಸಾಮಾಜಿಕ (ಜಾತಿ, ಉಪಜಾತಿ) ಸ್ಥಿತಿಗತಿಗಳ ಹಿನ್ನೆಲೆಗಳು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು : ಭಾರತೀಯ ಸಾಮಾಜಿಕ ವ್ಯವಸ್ಥೆಯು ಹಲವು ಜಾತಿಗಳೆಂಬ

ಘಟ್ಟಗಳಿಂದ ನಿರ್ಮಾಣಗೊಂಡಿದೆ. ಏಣಿಯಲ್ಲಿ ಮೇಲೇರಲು ಹೇಗೆ ಒಂದರ ಮೇಲೆ ಮತ್ತೊಂದು ಕಾಲು ಇರುತ್ತದೆಯೋ ಹಾಗೆಯೇ ಜಾತಿಗಳೊಂದಿಗೆ ವರ್ಗ ಶ್ರೇಣೀಕರಣಗಳು, ಒಂದರ ಮೇಲೆ ಮತ್ತೊಂದು ಜೋಡಿಸಲ್ಪಟ್ಟಿವೆ. ಈ ಜೋಡಿಸುವಿಕೆಯಲ್ಲಿ ಹೇಗೆ ಶ್ರೇಣೀಕರಣವಿದೆಯೋ ಹಾಗೆಯೇ ಅವಮಾನ ಮತ್ತು ಪ್ರತಿರೋಧಗಳಲ್ಲೂ ಭಿನ್ನತೆಗಳು ಕಂಡುಬರುತ್ತವೆ. ಸವರ್ಣೀಯ ಹಿನ್ನೆಲೆಯ ಭೈರಪ್ಪನವರಿಗೆ ಜಾತಿ ಕಾರಣಕ್ಕೆ ಆಗುವ ಅವಮಾನಗಳಿಗೂ, ಅಸ್ಪೃಶ್ಯ ಹಿನ್ನೆಲೆಯ ಸಿದ್ಧಲಿಂಗಯ್ಯ ಅವರಿಗೂ ಅಸ್ಪೃಶ್ಯರಲ್ಲೇ ಅತ್ಯಂತ ನಿಕೃಷ್ಟ ಸ್ಥಾನದಲ್ಲಿರುವ ತುಂಬಾಡಿ ರಾಮಯ್ಯ ಮತ್ತು ಲಕ್ಷ್ಮಣ್ ಅವರಿಗೆ ಆಗುವ ಅವಮಾನಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ.

೨. ಆತ್ಮಕಥನಕಾರರ ವರ್ಗ ಸ್ಥಿತಿಗತಿಗಳು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು: ವರ್ಗ ತಾರತಮ್ಯಗಳನ್ನು ಚರ್ಚೆ ಮಾಡುವಾಗಲೂ ನಮಗೆ ಜಾತಿ ವ್ಯವಸ್ಥೆಯು ಮತ್ತೆ ಮತ್ತೆ ಚರ್ಚೆಗೆ ಬರುತ್ತಿರುತ್ತದೆ. ಬಡತನದ ಕಾರಣಕ್ಕೆ ಅವಮಾನ ಅನುಭವಿಸುವುದು ಎಲ್ಲಾ ಜಾತಿಗಳಲ್ಲಿ ಕಂಡುಬಂದರೂ, ಅವು ಒಂದೇ ರೀತಿಯಾಗಿರುವುದಿಲ್ಲ. ದಲಿತೇತರರಿಗೂ ವರ್ಗದ ಕಾರಣಕ್ಕೆ ಅವಮಾನಗಳಾಗಿವೆ; ಆದರೆ ಅವು ಅವರ ವರ್ಗದ ಸ್ಥಿತಿ ಸುಧಾರಿಸಿದ ನಂತರ ಮರೆಯಾಗುತ್ತವೆ. ಅಸ್ಪೃಶ್ಯರಿಗೆ ಆಗುವ ಅವಮಾನಗಳು ಈ ಬಗೆಯವಲ್ಲ. ಅವಮಾನಗಳು ಅವರ ವರ್ಗ ಸ್ಥಿತಿ ಸುಧಾರಿಸಿದರೂ ಅವರನ್ನು ಕಾಡುತ್ತಿರುತ್ತವೆ. ಇದರ ಜೊತೆಗೆ ಅಭಿವ್ಯಕ್ತಿ ವಿಷಯಕ್ಕೆ ಬಂದರೆ ಬಡತನವನ್ನು, ಅದಕ್ಕಾದ ಅವಮಾನಗಳನ್ನು ರೋದನೆ ತುಂಬಿದ ಬದುಕಿನಂತೆ ವಿಶ್ಲೇಷಿಸುವ, ಮತ್ತೆ ಕೆಲವೆಡೆ ಚೈತನ್ಯಶೀಲವಾಗಿ ಮಂಡಿಸಲಾಗಿರುತ್ತದೆ. ಇವು ಸಹ ಆತ್ಮಕಥನಕಾರರ ಸಾಮಾಜಿಕ, ಆರ್ಥಿಕ ಹಿನ್ನೆಲೆಗಳನ್ನು ಆಧರಿಸಿ ಇರುತ್ತವೆ. ಅವುಗಳ ಕಾರಣಾನ್ವೇಷಣೆಯನ್ನು ಇಲ್ಲಿ ಮಾಡಲಾಗುವುದು.

೩. ಪ್ರಾದೇಶಿಕತೆಯ ಹಿನ್ನೆಲೆಗಳು ಮತ್ತು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು: ಹಳ್ಳಿ ಮತ್ತು ನಗರಗಳಲ್ಲಿ ಆಗುವ ಅವಮಾನಗಳಿಗೂ, ಈ ಅವಮಾನಗಳಿಗೆ ಪ್ರತಿರೋಧ ತೋರುವ ವಿಧಾನಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಉತ್ತರ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕಿ ಬರೆದ ಆತ್ಮಕಥನಕಾರರ ಅನುಭವಗಳಿಗೂ, ಆತ್ಮಕಥನಕಾರರ ನಗರ ಬದುಕಿನ ಅನುಭವಗಳಿಗೂ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತವೆ. ಇಂತಹ ವ್ಯತ್ಯಾಸಗಳನ್ನು ವಿಶ್ಲೇಷಣೆ ಮಾಡಲಾಗುವುದು.

೪. ಕಾಲ ಮತ್ತು ಪ್ರಜ್ಞೆ ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು: ಕಾಲವನ್ನು ಇಲ್ಲಿ ಪ್ರಜ್ಞೆ ಮತ್ತು ಪ್ರತಿಕ್ರಿಯೆಯ ಸಮಯ ಎಂದು ಗುರುತಿಸಬಹುದು. ಬಾಲ್ಯದಲ್ಲಿ ಅಸಹಾಯಕತೆಯ ರೂಪದಲ್ಲಿ ಪ್ರಕಟವಾಗುತ್ತಿದ್ದ ಪ್ರತಿರೋಧಗಳು. ಅರಿವಿನ ಪ್ರಜ್ಞೆ ಬಂದ ನಂತರ ಪ್ರಶ್ನಿಸುವುದು, ಹೋರಾಟಗಳನ್ನು ಮಾಡುವ ಮೂಲಕ ಪ್ರತಿರೋಧ ತೋರುವುದರಲ್ಲೆ ಪಲ್ಲಟವಾಗುತ್ತವೆ. ಬಡತನದಿಂದ ಹೊರಗೆ ಬಂದ ಲೇಖಕ ಹಿಂದಿನ ಬಡತನವನ್ನು ವ್ಯಂಗ್ಯವಾಗಿ ಚಿತ್ರಿಸುವ ಸಾಧ್ಯತೆಯೂ ಆತ್ಮಕಥೆಗಳಲ್ಲಿವೆ. ಇಲ್ಲಿ ಉಲ್ಲೇಖವಾಗಿರುವ ಬಾಲ್ಯ ಮತ್ತು ಬಾಲ್ಯದ ನಂತರದ ದಿನಗಳು ಕಾಲ ಮತ್ತು ಪ್ರಜ್ಞೆಯ ಸ್ಥಿತಿಗಳಾಗಿವೆ.

೫. ಲಿಂಗೀಯ ಪ್ರಶ್ನೆಗಳು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು : ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಲೇಖಕರ ಆತ್ಮಕಥೆಗಳಲ್ಲಿ ಪತ್ನಿಯು ಮತ್ತು ಮಹಿಳಾ ಆತ್ಮಕಥೆಗಳಲ್ಲಿ ಪತಿಯೂ ಹೇಗೆ ಉಲ್ಲೇಖಗೊಂಡಿದ್ದಾರೆ ಎಂಬುದನ್ನು ಅಧ್ಯಯನ ಮಾಡಲಾಗುತ್ತದೆ. ಕೆಲವು ಲೇಖಕರ ಆತ್ಮಕಥೆಗಳಲ್ಲಿ ಪತ್ನಿಯ ಗೈರು ಕಂಡುಬಂದರೆ, ಮಹಿಳಾ ಆತ್ಮಕಥೆಗಳಲ್ಲಿ ಪತಿಯ ಬಗೆಗಿನ ವಿವರಗಳೇ ಹೆಚ್ಚಾಗಿವೆ. ಕೆಲವು ಪುರುಷ ಆತ್ಮಕಥೆಗಳು ಪತ್ನಿಯರಿಗೆ ತಾವು ನೀಡಿದ ಹಿಂಸೆಗಳನ್ನು ಕುರಿತು ಆತ್ಮವಿಮರ್ಶೆ ಮಾಡಿಕೊಂಡರೆ, ಕೆಲವು ಮಹಿಳಾ ಆತ್ಮಕಥೆಗಳು ಪತಿಯ ಪುರುಷ ಪ್ರಧಾನ ಮನೋಧೋರಣೆ ಮತ್ತು ಮಾನವೀಯತೆಗಳೆರಡನ್ನೂ ನೆನಪಿಸಿಕೊಳ್ಳುತ್ತವೆ. ಈ ಮೂಲಕ ತಮ್ಮ ಬದುಕಿನಲ್ಲಿ ಅನುಭವಿಸಿದ ಸವಾಲುಗಳನ್ನು ಅಭಿವ್ಯಕ್ತಿಸುತ್ತವೆ.

೬. ಆತ್ಮಕಥನಕಾರರ ಸೈದ್ಧಾಂತಿಕ ಹಿನ್ನೆಲೆಗಳು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು: ಸೈದ್ಧಾಂತಿಕ ಒಪ್ಪುವಿಕೆಯೂ ಸಹ ಆತ್ಮಕಥೆಗಳ ಅಭಿವ್ಯಕ್ತಿಯನ್ನು ಭಿನ್ನ ಭಿನ್ನವಾಗಿಸುತ್ತವೆ. ಮಾರ್ಕ್ಸ್‌ವಾದಿ ಹಿನ್ನೆಲೆಯ ಸಿದ್ಧಲಿಂಗಯ್ಯ ಅವರ 'ಊರುಕೇರಿ'ಯಲ್ಲಿ ಜಾತಿಕೇಂದ್ರಿತ ಉಲ್ಲೇಖಗಳು ಕಡಿಮೆ ಮತ್ತು ವರ್ಗ ಕೇಂದ್ರಿತ ಉಲ್ಲೇಖಗಳೇ ಹೆಚ್ಚು ಅಭಿವ್ಯಕ್ತಿಗೊಂಡಿವೆ. ಇದಕ್ಕೆ ಆತ್ಮಕಥೆಗೆ ಬೆನ್ನುಡಿಯನ್ನು ಬರೆದ ಡಿ.ಆರ್. ನಾಗರಾಜ್ ಅವರ ಬರಹವನ್ನು ಉದಾಹರಣೆಯಾಗಿ ನೋಡಬಹುದು.

೭. ಚಿಂತನಶೀಲತೆ ಮತ್ತು ರಾಜಕೀಯ ಪ್ರಬುದ್ಧತೆಗಳು ಅಭಿವ್ಯಕ್ತಿಯ ಮೇಲೆ ಬೀರುವ ಪ್ರಭಾವಗಳು: ಅವಮಾನಗಳು ನನಗೆ, ನಮ್ಮ ಸಮುದಾಯಕ್ಕೆ ಮಾತ್ರ ಸೀಮಿತ ಎಂದು ಹೇಳದೆ, ಇಡೀ ತುಳಿತಕ್ಕೆ ಒಳಗಾದ ಸಮುದಾಯದ ಪರವಾಗಿ ಚರ್ಚಿಸಿದ್ದಾರೆಯೇ ಎಂಬುದನ್ನು ಗುರುತಿಸಲಾಗುತ್ತದೆ. ಹೀಗೆ ೭ ಮಾನದಂಡಗಳ ಆಧಾರದ ಮೇಲೆ ಅವಮಾನ ಮತ್ತು ಪ್ರತಿರೋಧಗಳನ್ನು ಗುರುತಿಸಲಾಗುತ್ತದೆ. ಈ ಗುರುತಿಸುವಿಕೆಯ ಜೊತೆಗೆ ಕಾರಣಾನ್ವೇಷಣೆ ಮಾಡುವ ಮೂಲಕ ತಾತ್ವಿಕ ಚರ್ಚೆಯನ್ನು ಮಾಡಲಾಗುತ್ತದೆ. ಮೂರನೆಯ ಸಂಗತಿಯೆಂದರೆ ಆತ್ಮಕಥೆಗಳನ್ನು ಪರಿಕಲ್ಪನೆಗಳನ್ನಾಧಾರಿಸಿ ಬೆಲೆ ಕಟ್ಟುವ ಕೆಲಸವನ್ನೂ ಸಹ ಮಾಡಲಾಗುತ್ತದೆ. ಹೀಗೆ ಈ ಅಧ್ಯಾಯವು ತೌಲನಿಕ ವಿಧಾನವನ್ನೇ ಹೆಚ್ಚು ಅನುಸರಿಸಿ ರಚನೆಯಾದ ಅಧ್ಯಾಯವಾಗಿದೆ.

**೮.೧. ಜಾತಿ : ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ:**

ಪ್ರಸ್ತುತ ಉಪ ಅಧ್ಯಾಯದಲ್ಲಿ ಜಾತಿ ಶ್ರೇಣೀಕರಣಗಳು ಅವಮಾನ ಮತ್ತು ಪ್ರತಿರೋಧಗಳು ಆತ್ಮಕಥೆಗಳಲ್ಲಿ ಭಿನ್ನವಾಗಿ ಅಭಿವ್ಯಕ್ತಿಗೊಂಡಿರುವುದಕ್ಕೆ ಹೇಗೆ ಕಾರಣೀಭೂತವಾಗಿವೆ ಎಂಬುದನ್ನು ಚರ್ಚಿಸಲಾಗುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೮.೧.೧.** ಜಾತಿ, ಉಪಜಾತಿಗಳನ್ನು ಅಪಮಾನಿಸುವ ವೃತ್ತ: ಭಾರತ ದೇಶದಲ್ಲಿ ಪ್ರತಿಯೊಂದು ಜಾತಿಯೂ ಮತ್ತೊಂದು ಸಮುದಾಯವನ್ನು ಶೋಷಿಸುವುದು ಕಂಡುಬರುತ್ತದೆ. ಈ ಶೋಷಿಸುವ ಮತ್ತು ಶೋಷಣೆಗೆ ಒಳಗಾಗುವ ವಿಧಾನಗಳು ಮಾತ್ರ ಆಯಾ ಸಮುದಾಯಗಳು ಹೊಂದಿರುವ ಶ್ರೇಣೀಕರಣದ ಮಟ್ಟವನ್ನು ಅವಲಂಬಿಸಿರುತ್ತದೆ.

ಅ. 'ಭಿತ್ತಿ'ಯಲ್ಲಿ ಜಾತಿ ಶ್ರೇಣೀಕರಣ ಕುರಿತು ಪ್ರಸ್ತಾವವೊಂದು ಹೀಗೆ ಬರುತ್ತದೆ. "ಬಣಜಿಗರು ವ್ಯವಸಾಯಗಾರರಾದರೂ ಅವರ ಮೂಲವೃತ್ತಿ ವ್ಯಾಪಾರ, ಶಿವಚಾರದವರಲ್ಲೆಲ್ಲ ಮಾತ್ರವಲ್ಲ ಸಕಲ ಜಾತಿಗಳಿಗೂ ತಾವೇ ಶ್ರೇಷ್ಠರೆಂಬ ಮನೋಭಾವ ಇವರದು. ದೀಕ್ಷೆ ತೆಗೆದುಕೊಂಡ ಗಂಡಸರು ಮತ್ತು ಹೆಂಗಸರು ಶಿವಾಚಾರೇತರ ಮನೆಯಲ್ಲಿ, ನೊಣಬ ಗೌಡರ ಮನೆಯಲ್ಲಿ ಪ್ರಾಣ ಹೋದರೂ ನೀರನ್ನು ಮುಟ್ಟುತ್ತಿರಲಿಲ್ಲ. ಜಂಗಮರಂತೂ ಮಡಿಯಲ್ಲಿ ಬ್ರಾಹ್ಮಣರಿಗಿಂತ ದಶಾಂಗುಲ ಉಚ್ಚಸ್ಥಾನವನ್ನು ಸಾಧಿಸುತ್ತಿದ್ದರು. ಇಷ್ಟು ಮಾತ್ರವಲ್ಲ ಗಂಗಡಿಕಾರಗೌಡರ ಹೆಂಗಸರು ಕುರುಬ ಗೌಡರ ಮನೆಯದನ್ನು ತಿನ್ನುತ್ತಿರಲಿಲ್ಲ. ಮಗ್ಗ ಅಥವಾ ಕುರುಹಿನ ಶೆಟ್ಟರಂತೂ ಕ್ರಮೇಣ ದೇವಾಂಗವೆಂಬ ನಾಮಾಂಕಿತರಾಗಿ ಮಡಿ ಮೈಲಿಗೆ ಅನುಸರಿಸುತ್ತಿದ್ದರು. ಬೆಸ್ತ, ಉಪ್ಪಾರ, ಕುಂಬಾರ, ಗಾಣಿಗ ಮೊದಲಾದ ಹತ್ತು ಹಲವು ಜಾತಿಯವರೂ ತಾವು ಇಂತಿಂಥ ಜಾತಿಗಳಲ್ಲಿ ತಿನ್ನುವುದಿಲ್ಲ ಎನ್ನುವುದರ ಮೂಲಕ ಅವರಿಗಿಂತ ತಮ್ಮದು ಉತ್ತಮ ಜಾತಿ ಎಂಬುದನ್ನು ಘೋಷಿಸಿಕೊಳ್ಳುತ್ತಿದ್ದರು."[೧]

ಆ. 'ಸಂಬೋಳಿ'ಯ 'ಕಹಿನೆನ್ಪು' ಸನ್ನಿವೇಶದಲ್ಲಿ ದಲಿತರನ್ನು ಅವಮಾನಿಸುವುದು ಒಕ್ಕಲಿಗರ ನಾರಾಯಣಪ್ಪ; 'ಗೌರ್ಮೆಂಟ್ ಬ್ರಾಹ್ಮಣ'ದ 'ಹೆಣದ ಬಟ್ಟೆ ಮತ್ತು ಮದುವೆ ಊಟ' ಸನ್ನಿವೇಶದಲ್ಲಿ ಅವಮಾನಿಸಿದ್ದು ಶೇಠಜಿಯವರು ಮತ್ತು ವೀರಶೈವರು. 'ಗೊಂದಲಿಗ್ಯಾ'ದ ಶಾಲಾ ಸನ್ನಿವೇಶದಲ್ಲಿ ಅವಮಾನಿಸಿದ್ದು ಜಂಗಮರಾದ ಮೊಖಾಶಿ ಗುರುಗಳು; ಬ್ರಾಹ್ಮಣ ಶಿಕ್ಷಕರು. ಈ ಜಾತಿ ಶ್ರೇಣೀಕರಣಗಳ ಪಟ್ಟಿಯು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಆತ್ಮಕಥೆಗಳನ್ನು ಆಧರಿಸಿ ನೀಡಿರುವಂತಹದ್ದಾಗಿದೆ. ಈ ಪಟ್ಟಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಎರಡು ಸಂಗತಿಗಳು ತಿಳಿಯುತ್ತವೆ. ಈ ಮೇಲಿನ ಉಲ್ಲೇಖಗೊಂಡಿರುವ ಸಮುದಾಯಗಳು ಏಕಕಾಲಕ್ಕೆ ಶೋಷಣೆಗೆ ಒಳಗಾಗುವ ಮತ್ತು ಶೋಷಿಸುತ್ತಿರುವ ಎರಡೂ ಸಂಗತಿಗಳನ್ನು ಒಳಗೊಂಡಿವೆ ಎಂಬುದು ಮೊದಲನೆಯ ಸಂಗತಿಯಾದರೆ; ದಮನಿತರಿಗೆ ಜಾತಿ ಕಾರಣಕ್ಕೆ ಆಗಿರುವ ಅವಮಾನಗಳು ಯಾವ ಸಮುದಾಯಗಳ ಹಿನ್ನೆಲೆಯನ್ನು ಒಳಗೊಂಡಿರುವ ವ್ಯಕ್ತಿಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಆಗಿವೆ ಎನ್ನುವುದು ಎರಡನೆಯ ಸಂಗತಿಯಾಗಿದೆ.

ಮೊದಲನೆಯ ಸಂಗತಿಗೆ ಸಂಬಂಧಿಸಿದಂತೆ ಜಂಗಮ, ಬ್ರಾಹ್ಮಣ, ಬೆಸ್ತರು, ಉಪ್ಪಾರ, ಕುಂಬಾರ, ಗಾಣಿಗ, ಹೊಲೆಯ ಮುಂತಾದ ಸಮುದಾಯಗಳು ಪರಸ್ಪರ ಶೋಷಿಸಿಕೊಳ್ಳುವುದು ಕಂಡುಬರುತ್ತದೆ. ಇಲ್ಲಿ ಯಾವ ಜಾತಿಗಳು ಶ್ರೇಣೀಕರಣದ ವ್ಯಾಪ್ತಿಯ ಹೊರಗಿಲ್ಲ. ಜಂಗಮರಂತೂ ಮಡಿಯಲ್ಲಿ ಬ್ರಾಹ್ಮಣರಿಗಿಂತ ಉಚ್ಚ ಎಂಬ ಮನೋಭಾವನೆ ಹೊಂದಿರುವುದು, ಹಿಂದುಳಿದ ಸಮುದಾಯಗಳು ತಮ್ಮೊಳಗೆ ಶೋಷಿಸಿಕೊಳ್ಳುವುದು, ದಲಿತರಲ್ಲೇ ಹೊಲೆಯರು ಮಾದಿಗರ ಹಟ್ಟಿಗೆ ಬರುವಾಗ ಮಾಡುವ ಜಾತೀಯತೆಯಾಗಿರಬಹುದು ಸಮುದಾಯಗಳೊಳಗೆ ಅಪಮಾನಿಸುವ ಗುಣಗಳಿರುವುದನ್ನು ಸಾಕ್ಷೀಕರಿಸುತ್ತವೆ. ಹೀಗೆ ಜಾತಿ ಕೇಂದ್ರಿತ ಅವಮಾನಗಳು ಎಲ್ಲಾ ಸಮುದಾಯಗಳಿಗಾದರೂ ಸ್ಪೃಶ್ಯರಿಗೆ ಆಗುವ ವಿಧಾನಗಳಿಗೂ ಅಸ್ಪೃಶ್ಯರಿಗೆ ಆಗುವ ವಿಧಾನಗಳಿಗೂ

ಹಲವು ವ್ಯತ್ಯಾಸಗಳಿವೆ. ಅಸ್ಪೃಶ್ಯರಿಗೆ ಜಾತಿ ನಿಂದನೆಗಳು, ಹಲ್ಲೆಗಳು ಅಮಾನವೀಯವಾಗಿ ನಡೆಸಿಕೊಳ್ಳುವ ಘಟನೆಗಳನ್ನು ಕಾಣುತ್ತೇವೆ. 'ಸಂಬೋಳಿ'ಯ 'ಕಹಿನೆನ್ಪು' ಸನ್ನಿವೇಶದಲ್ಲಿ ಚಪ್ಪಲಿಗೆ ಹತ್ತಿದ ಹೇಲನ್ನು ಹೊರೆಸುವಂತೆ ಲಕ್ಷ್ಮಣ್ ಅವರಿಗೆ ಒಕ್ಕಲಿಗರ ನಾರಾಯಣಪ್ಪ ಹೇಳುವುದಾಗಿರಬಹುದು, ಶಾಲೆಯ ಮಾಲಿಕರ ಮದುವೆಯಲ್ಲಿ ಸಿಬ್ಬಂದಿ ಜೊತೆ ಕೂತು ಊಟ ಮಾಡಿದ್ದಕ್ಕಾಗಿ ಕೆಲಸದಿಂದಲೇ ಬಿಡಿಸುವುದಾಗಿರಬಹುದು. ಇಂತಹ ಅವಮಾನಗಳು ಅಸ್ಪೃಶ್ಯರಿಗೆ ಮಾತ್ರ ಆಗುವಂತಹದ್ದು.

ಇನ್ನೂ ಎರಡನೆಯ ಸಂಗತಿಗೆ ಬರುವುದಾದರೆ ಆತ್ಮಕಥೆಗಳನ್ನು ಗಮನಿಸಿದಾಗ ಅವಮಾನಗಳಿಗೆ ಹೆಚ್ಚು ಅಸ್ಪೃಶ್ಯರು ಒಳಗಾದರೆ, ಅವಮಾನಿಸುವವರ ಜಾಗದಲ್ಲಿ ಕರ್ನಾಟಕದ ಪ್ರಬಲ ಭೂಮಾಲಿಕ ವರ್ಗಗಳಾದ ಲಿಂಗಾಯತ, ಒಕ್ಕಲಿಗ ಸಮುದಾಯದ ಕೆಲವು ಜಾತಿವಾದಿಗಳೇ ಹೆಚ್ಚಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಶೋಷಕ ಸ್ಥಾನವನ್ನು ನಮ್ಮ ಅಧ್ಯಯನಗಳು ಹಾಗೂ ಚಿಂತನೆಗಳು ಬ್ರಾಹ್ಮಣರಿಗೆ ಬಹುತೇಕ ಸೀಮಿತಗೊಳಿಸಿವೆ. ಈ ಅಭಿಪ್ರಾಯಕ್ಕೆ ಬ್ರಾಹ್ಮಣೇತರ ಚಳುವಳಿಯೂ ಕಾರಣವಾಗಿದೆ. ಇಂತಹ ಸ್ಥಾಪಿತ ಅಭಿಪ್ರಾಯವನ್ನು ಕನ್ನಡ ಆತ್ಮಕಥೆಗಳ ಅವಮಾನದ ಸನ್ನಿವೇಶಗಳು ಮುರಿದು ಕಟ್ಟುತ್ತವೆ. ಬ್ರಾಹ್ಮಣೇತರ ಚಳವಳಿಯ ಲಾಭವನ್ನು ಪಡೆದ ರೆಡ್ಡಿ, ಲಿಂಗಾಯತ, ಒಕ್ಕಲಿಗ ಸಮುದಾಯಗಳು ಇಂದು ಪ್ರಬಲ ಸಮುದಾಯಗಳಾಗಿದ್ದು, ಗ್ರಾಮ ಮತ್ತು ನಗರಗಳಲ್ಲಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಬಹುತೇಕ ಉನ್ನತ ಸ್ಥಾನಗಳನ್ನು ಆಕ್ರಮಿಸಿಕೊಂಡಿವೆ. ಈ ಪ್ರಬಲ ಜಾತಿವರ್ಗಗಳ ಜಮೀನುಗಳಲ್ಲಿ ದಮನಿತರು ಕೂಲಿ ಕೆಲಸ ಮಾಡುವಾಗ ಅಥವಾ ಹಸಿವು ನೀಗಿಸಿಕೊಳ್ಳಲು ಅನಿವಾರ್ಯವಾಗಿ ಹೋದಾಗ ಅವಮಾನಗಳಿಗೆ ಒಳಗಾಗುತ್ತಾರೆ. ಇವನ್ನು ಆತ್ಮಕಥೆಗಳು ಸಮಾಜಶಾಸ್ತ್ರೀಯ ಸತ್ಯಗಳಂತೆ ಲೇಖಕರ ಅನುಭವಗಳ ಮೂಲಕ ಮಂಡಿಸುತ್ತವೆ.

**೮.೧.೨. ಅಸ್ಪೃಶ್ಯರು, ಪಶುಗಳು ಮತ್ತು ಅವಮಾನ:** ದಲಿತರನ್ನು ಪಶುಗಳಂತೆ ಕಾಣುವ ಅನೇಕ ವಿವರಗಳು ಕನ್ನಡ ಆತ್ಮಕಥೆಗಳಲ್ಲಿ ನಿಯತವಾಗಿ ಬಂದಿವೆ. ಈ ವಿವರಗಳು ಪಶುಗಳಿಗಿರುವ ನೈತಿಕ ಮೌಲ್ಯಗಳನ್ನು ಕಳೆದುಕೊಂಡಿರುವ ರೋಗಪೀಡಿತ ಸಮಾಜವನ್ನು ಅನಾವರಣಗೊಳಿಸುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ಪಶು ಸಮಾನವಾಗಿ ಕಾಣುವ ಅನೇಕ ಅನುಭವಗಳು ಬೇರೆ ಬೇರೆ ಲೇಖಕರಿಗೆ ಹೇಗೆ ಅನುಭವಕ್ಕೆ ಬಂದಿವೆ ಎಂಬುದನ್ನು ಇಲ್ಲಿ ಚರ್ಚೆ ಮಾಡಲಾಗುವುದು.

**ಅ.** 'ಊರುಕೇರಿ'ಯೂ ಅಸ್ಪೃಶ್ಯರನ್ನು ಪಶುಗಳಂತೆ ದುಡಿಸಿಕೊಳ್ಳುವಂತಹ ಪ್ರಸಂಗದಿಂದಲೇ ಆರಂಭವಾಗುತ್ತದೆ. "ನೊಗಹೊತ್ತ ಆ ಇಬ್ಬರು ಮನುಷ್ಯರು ಎತ್ತುಗಳಂತೆ ಮುಂದೆ ಹೋಗುತ್ತಿದ್ದರೆ ಇನ್ನೊಬ್ಬ ಹಿಂದಿನಿಂದ ಚಾಟಿ ತಿರುಗಿಸುತ್ತಾ ಉಳುಮೆ ಮಾಡುತ್ತಿದ್ದ ದೃಶ್ಯ ಮೋಜಿನಂತೆ ಕಂಡರೂ ನೊಗ ಹೊತ್ತಿದ್ದ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬ ನನ್ನ ಅಪ್ಪ ಎಂದು ಗೊತ್ತಾದ ಕ್ಷಣದಿಂದ ನನ್ನಲ್ಲಿ ವಿಚಿತ್ರವಾದ ಸಂಕಟ ಶುರುವಾಯಿತು"[೨] ಎಂದು ಲೇಖಕರು ಬರೆದುಕೊಳ್ಳುತ್ತಾರೆ.

ಆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಅಸ್ಪೃಶ್ಯರನ್ನು ಪಶು ಸಮಾನವಾಗಿ ಕಾಣುವ ಸಂಗತಿಗಳು ಈ ಕೆಳಗಿನಂತಿವೆ. "ಶೇಠಜಿಯವರ ದರ್ಶನವೆಂದರೆ ನಮಗೆ ದೇವರ ದರ್ಶನವಿದ್ದಂತೆ. ಅವರ ಮನೆಯಲ್ಲಿ ದುಡಿಯುವ ಇವರು ಕೈಯಲ್ಲಿ ಕೋಲು ಹಿಡಿದು ನಿಂತಿರುತ್ತಿದ್ದರು. ನಾಯಿ, ಹಂದಿಗಳಿಗೆ ಹೊಡೆಯಲು ಬಳಸುವುದು ಅದೇ ಕೋಲು. ನಮಗೆ ಹೊಡೆಯಲು ಬಳಸುವುದು ಅದೇ ಕೋಲು. ಊರ ಜನರೆಲ್ಲರ ಊಟ ಮುಗಿದ ಮೇಲೆ ಕೊನೆಯಲ್ಲಿ ದಲಿತರನ್ನು ಬಿಡಲಾಗುತ್ತಿತ್ತು"[೩] ಎನ್ನುವ ಸನ್ನಿವೇಶವಿದೆ.

"ನಮ್ಮೂರ ಕೇರಿಯಲ್ಲಿ ನಾಯಿಗಳಿಗೇನು ಬರಗಾಲವಿರಲಿಲ್ಲ. ಅವತ್ತು ಹಂಡ್ಯಾ ನಮ್ಮ ಬೆನ್ನ ಹತ್ತಿ ಬರುತ್ತಿದ್ದ, ನೀರು ತುಂಬಿಕೊಂಡು ಮನೆಗೆ ಹೋಗುವ ಸಂದರ್ಭ, ಆಗಲೆ ಹಂಡ್ಯಾ ಹೆಣ್ಣು ನಾಯಿಯ ಸ್ನೇಹವನ್ನು ಸಂಪಾದಿಸಿ ಕೊಂಡಿತ್ತು. ಅಷ್ಟೊತ್ತಿಗೆ ಊರ ಗೌಡ ನನ್ನ ಕಣ್ಣ ಎದುರಿಗೆ ಕೆಳಗಿನೋರ ನಾಯಿಯಂತ ಕೈಯಾಗ ಕುಡಗೋಲಲೆ ಲಾಳಿ (ಶಿಶ್ನ) ಕರ್ಕ್ ಅಂತ ಕೊಯ್ದು ಬಿಡಬೇಕಾ? ಅವನ ಬಾಯಾಗ ಹುಳ ಬೀಳಾ, ನೆಲಕ ಬಿದ್ದು ಒದ್ದಾಡಕತ್ರ, ಆಳಿಗೊಂದು ಕಲ್ಲ ಹಾಕಿ ಸತ್ತ ಹೊಡದ್ರು...."[೪] ಮೇಲಿನ ಸನ್ನಿವೇಶಗಳು ದಲಿತ ಆತ್ಮಕಥೆಗಳಲ್ಲಿ ಪ್ರಬಲ ಸಮುದಾಯಗಳು ಅಸ್ಪೃಶ್ಯರನ್ನು ಪಶು ಸಮಾನವಾಗಿ ಕಂಡಿರುವ ಸಂಗತಿಗಳನ್ನು ಸಮರ್ಥಿಸುತ್ತವೆ. ಹೀಗೆ ಕಂಡಿರುವುದಕ್ಕೆ ಕಾರಣಗಳೆಂದರೆ.

ಭೂಮಾಲಿಕ ವರ್ಗದವರ ಮೇಲೆಯೇ ಅಸ್ಪೃಶ್ಯರ ಇಡೀ ಬದುಕು ಅವಲಂಬಿತವಾಗಿರುವುದು. ದಮನಿತರು ಹಸಿವು ನೀಗಿಸಿಕೊಳ್ಳಲು ಕೆಲವೊಮ್ಮೆ 'ಅನ್ಯಮಾರ್ಗ' ಹಿಡಿಯುವುದು. ಪಶುಗಳಿಗೂ ಬುದ್ಧಿಯಿಲ್ಲ, ಅಸ್ಪೃಶ್ಯರಿಗೂ ಬುದ್ಧಿಯಿಲ್ಲ ಎನ್ನುವ ಮನೋಭಾವನೆ; ಅಸ್ಪೃಶ್ಯರು ಮನುಷ್ಯರಂತೆ, ಅವರಿಗೂ ಭಾವನೆಗಳಿವೆ ಎಂಬ ಅರಿವಿಲ್ಲದಿರುವ ಕೊರತೆ. ನಾವು ತಿಂದ ನಂತರ ಪ್ರಾಣಿಗಳಿಗೆ ಉಳಿದದ್ದನ್ನು ಹಾಕುವಂತೆ ಅಸ್ಪೃಶ್ಯರಿಗೂ ಉಳಿದದ್ದನ್ನು ಹಾಕಬೇಕು ಎನ್ನುವುದು. ಮೇಲಿನ ಈ ಎಲ್ಲಾ ಕಾರಣಗಳು ದಲಿತ ಆತ್ಮಕಥೆಗಳಲ್ಲಿ ಪ್ರಾಣಿಗಳು ಉಲ್ಲೇಖಗೊಂಡಿರುವುದಕ್ಕೆ ಕಾರಣಗಳಾಗಿವೆ. ಆತ್ಮಕಥೆಗಳಿಗೆ ಸಂಬಂಧಿಸಿದ ಈ ವಿವರಗಳು ಅಸ್ಪೃಶ್ಯರು ಕತ್ತೆ, ನಾಯಿ, ಕೋಣ, ಎತ್ತುಗಳಿಗೆ ಹೋಲಿಕೆಗೊಂಡಿದ್ದಾರೆ ಎಂಬುದನ್ನು ಸಾಕ್ಷೀಕರಿಸುತ್ತವೆ. ಪ್ರಾಣಿಗಳು ಸಹ ಮಾನವರ ಸೇವೆ ಮಾಡಿಕೊಂಡು ಬಂದಿವೆ, ಹೊಡೆದರೆ ಹೊಡೆಸಿಕೊಂಡಿವೆ. ಇದರಂತೆ ಅಸ್ಪೃಶ್ಯರು ಸಹ ಸವರ್ಣೀಯರ ಸೇವೆ ಮಾಡುತ್ತಲೇ ಬಂದಿದ್ದಾರೆ. ಪಶುಗಳನ್ನು ಹೀನಾಯವಾಗಿ ನಡೆಸಿಕೊಳ್ಳುವಂತೆ ಅಸ್ಪೃಶ್ಯರನ್ನು ಹೀನಾಯವಾಗಿ ನಡೆಸಿಕೊಳ್ಳಲಾಗಿದೆ. ಪಶುವಿಗಿರುವ ಸಾಮಾನ್ಯ ನೈತಿಕತೆಯನ್ನು ಕಳೆದುಕೊಂಡಿರುವ ಪ್ರಭುತ್ವದ ಮನಸ್ಥಿತಿಯನ್ನು ಸಾಂಕೇತಿಸುತ್ತವೆ. ಊರಗೌಡ, ಶೇಠ್‌ಜಿ ಅವರದ್ದು ಅಂತಹದ್ದೆ ವ್ಯಕ್ತಿತ್ವವಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ, ಪ್ರಭುತ್ವವು ಮನುಷ್ಯರ ನಡುವೆ ಇರುವ ಜಾತೀಯತೆಯ ಗುಣಗಳನ್ನು ಕೇವಲ ಮನುಷ್ಯರಿಗೆ ಮಾತ್ರ ಸೀಮಿತವಾಗಿಸದೆ

ಪಶುಗಳಿಗೂ ಅನ್ವಯಿಸುವುದು ಕಂಡುಬರುತ್ತದೆ. ಪ್ರಾಣಿಗಳು ಯಾವ ಜಾತಿಯವರೊಂದಿಗೆ ಇರುತ್ತವೆಯೋ ಆಯಾ ಜಾತಿಗಳ ಸ್ಥಿತಿಗತಿಗಳನ್ನು ಹೊಂದುವುದನ್ನು 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ 'ಹಂಡ್ಯಾನ (ನಾಯಿ) ಲಾಳಿ ಕತ್ತರಿಸುವ ಸನ್ನಿವೇಶ'ದಲ್ಲಿ ಕಾಣಬಹುದಾಗಿದೆ. ಇಲ್ಲಿ ಹಂಡ್ಯಾ ಅಸ್ಪೃಶ್ಯ ಸ್ಥಾನವನ್ನು ಹೊಂದಿದ್ದಲ್ಲದೆ, ಮನುಷ್ಯ ರೂಪಿಸಿಕೊಂಡಿರುವ ಮಡಿವಂತಿಕೆಗಳಿಗೆ ಬಲಿಯಾಗುತ್ತದೆ. ಸಹಜೀವಿಗಳಾದ ಮನುಷ್ಯರನ್ನು ಪಶುಗಳ ಜತೆ ಸಮೀಕರಿಸುವುದು ಮತ್ತು ಪಶುಗಳನ್ನು ಅಸ್ಪೃಶ್ಯರಂತೆ ಕಾಣುವುದು ಅಮಾನುಷ ಆಲೋಚನೆಯ ಭಾಗವಾಗಿದೆ. ಮನು ಕೂಡ ಚಾಂಡಾಲರ ವರ್ಣನೆ ಮಾಡುವಾಗ ಪಶುಗಳ ಸಮೇತ ಮಾಡುತ್ತಾನೆ. ಇದನ್ನು ಸಹಮಾನವರ ಪಾಶವೀಕರಣ ಎಂದು ಕರೆಯಬಹುದಾಗಿದ್ದು ಇಂತಹ ಹಲವು ಸಂಗತಿಗಳು ಕನ್ನಡ ಆತ್ಮಕಥೆಗಳಲ್ಲಿವೆ.

ಇ. ಪಶು ಮತ್ತು ಸ್ವಾಭಿಮಾನ: ದಲಿತ ಆತ್ಮಕಥೆಗಳಲ್ಲಿ ಪಶುಗಳು ಕೇವಲ ಅಪಮಾನದ ಸಂಕೇತವಾಗದೆ ಅಪಮಾನಿತ ಬದುಕಿನ ನಡುವೆಯೂ ಬದುಕು ಕಟ್ಟಿಕೊಳ್ಳುವ ಭರವಸೆಯಾಗಿಯೂ ಅಭಿವ್ಯಕ್ತಿಗೊಂಡಿದೆ. ಉದಾಹರಣೆಗೆ 'ಸಂಬೋಳಿ'ಯಲ್ಲಿ ಬರುವ ಈ ಕಥೆಯನ್ನು ಗಮನಿಸಬಹುದು. ನಾಯಿಯ ದೌರ್ಜನ್ಯಕ್ಕೆ ಯಾವಾಗಲೂ ಹೆದರುತ್ತಿದ್ದ ಬೆಕ್ಕು. ಇನ್ನೇನು ನಾಯಿ ಇಂದ ತನ್ನ ಪ್ರಾಣಕ್ಕೆ ಕುತ್ತು ಬಂದ ಸಂದರ್ಭದಲ್ಲಿ ಸಾಯುವುದೇ ನಿಜವಾದ ಮೇಲೆ ಹೋರಾಡಿಯೇ ಸಾಯೋಣ ಎಂದು ನಿರ್ಧರಿಸುತ್ತದೆ. ಕೊನೆಗೆ ನಾಯಿಯೊಂದಿಗೆ ಹೋರಾಡಿ ನಾಯಿಯನ್ನೇ ಎದುರಿಸಿ ಕಳುಹಿಸುವ ಉಪಕಥೆಯು, ಓದುಗ ವಲಯಕ್ಕೆ ತನ್ನ ಆತ್ಮಕಥೆಯನ್ನು ಕೇವಲ ನೋವಿನ ಸರಕಾಗಿಸದೆ. ಅವಮಾನಗಳಿಂದ ಹೊರಬರುವ ಆತ್ಮವಿಶ್ವಾಸವನ್ನು ಮೂಡಿಸುವ ಹಿನ್ನೆಲೆಯ ರೂಪಕವಾಗಿದೆ. ಬೆಕ್ಕು ಇಲ್ಲಿ ತುಳಿತಕ್ಕೆ ಒಳಗಾದವರ ಸಾಂಕೇತಿಕವಾದರೆ, ನಾಯಿ ಶೋಷಿಸುವರ ಪ್ರತಿನಿಧಿಯಾಗಿದೆ. ಬೆಕ್ಕು ತನ್ನ ಮೇಲಿನ ನಾಯಿಯ ದೌರ್ಜನ್ಯವನ್ನು ವಿರೋಧಿಸುವುದೇ ದಮನಿತ ವಲಯಕ್ಕೆ ಒಂದು ಪ್ರತಿರೋಧದ ಸ್ಫೂರ್ತಿಯ ಸಾಂಕೇತಿಕವಾಗಿದೆ.

೮.೧.೩. ಅವಮಾನ ಮತ್ತು ಪ್ರತಿರೋಧಗಳ ಕಥನಕ್ರಮಗಳು: ಅವಮಾನ ಮತ್ತು ಪ್ರತಿರೋಧಗಳ ಅಭಿವ್ಯಕ್ತಿಯು ಲೇಖಕರಿಂದ ಲೇಖಕರಿಗೆ ಭಿನ್ನವಾಗಿವೆ. ಕೆಲವು ಲೇಖಕರು ವೇದನೆ ತುಂಬಿದ ಧ್ವನಿಯಲ್ಲಿ ಪ್ರಕಟಪಡಿಸಿದ್ದರೆ, ಕೆಲವು ಲೇಖಕರು ವ್ಯಂಗ್ಯತೆ, ಭರವಸೆ ಮೂಲಕ ನಿರೂಪಿಸದ್ದಾರೆ.

ಅ. ವೇದನೆ ತುಂಬಿದ ಅಭಿವ್ಯಕ್ತಿ: ಅರವಿಂದ ಮಾಲಗತ್ತಿ ಅವರ 'ಗೌರ್ಮೆಂಟ್ ಬ್ರಾಹ್ಮಣ', ತುಂಬಾಡಿ ರಾಮಯ್ಯ ಅವರ 'ಮಣೆಗಾರ', ಲಕ್ಷ್ಮಣ್ ಅವರ 'ಸಂಬೋಳಿ' ಆತ್ಮಕಥೆಗಳಲ್ಲಿ ತಮ್ಮ ಸಮುದಾಯದ ಅಪಮಾನದ ಕಥನಗಳನ್ನು ಓದುಗರ ಮುಂದಿಡುವಂತಹ ನಿರೂಪಣೆಗಳಿವೆ. ಕೆಲವೆಡೆ ದಲಿತ ಬದುಕಿನ ಸೃಜನಶೀಲ ಸಂಗತಿಗಳನ್ನು ಹೇಳಿದರೂ ಅಲ್ಲಿ ಅಪಮಾನದ ಅಭಿವ್ಯಕ್ತಿ, ವಾಸ್ತವ ಸಮಾಜದ ನೆರಳಾಗಿ ಕಂಡುಬಂದಿವೆ. 'ಉಚಲ್ಯಾ'ದಲ್ಲಿ ಲಕ್ಷ್ಮಣ ಗಾಯಕವಾಡ ಅವರು "ಮಧ್ಯಮ ವರ್ಗದವರಿಗೆ ಬುದ್ಧಿಜೀವಿಗಳಿಗೆ ಪಟ್ಟಭದ್ರರಿಗೆ ನಮ್ಮ ಸಮಾಜದ ನೋವಿನ ಕಥೆ

ಗೊತ್ತಿಲ್ಲವೆಂಬ ಅರಿವು ನನಗಾಯಿತು. ಹೀಗಾಗಿ ಈ ನೋವಿನ ಕಥೆಯನ್ನು ಜನರೆದುರಿಗೆ ತೋಡಿಕೊಳ್ಳಬೇಕೆಂಬ ಪ್ರಯತ್ನವೇ ಈ ಬರವಣಿಗೆ ಉದ್ದೇಶ"[೫] ಎಂದು ಹೇಳುವರು. ಈ ಬಗೆಯ ಅಭಿವ್ಯಕ್ತಿಗಳಿಗೆ ಕೆಳಗಿನಂತೆ ಕಾರಣಗಳನ್ನು ಗುರುತಿಸಬಹುದು.

ಮರಾಠಿ ಆತ್ಮಕಥೆಗಳು ಇತರೆ ಭಾಷಿಕ ಆತ್ಮಕಥೆಗಳ ಮೇಲೆ ಬೀರಿದ ಪ್ರಭಾವಗಳು, ಹಾಗೂ 'ಗೌರ್ಮೆಂಟ್ ಬ್ರಾಹ್ಮಣ', 'ಮಣೆಗಾರ', ಇನ್ನೂ ಮುಂತಾದವು ಕನ್ನಡದ ಆರಂಭದ ಬರಹಗಳಾಗಿರುವುದು ಆತ್ಮಕಥೆಗಳಲ್ಲಿನ ಸನ್ನಿವೇಶಗಳು ಚಿಂತನಾಶೀಲವಾಗಿ ಮತ್ತು ತಣ್ಣನೆಯ ಧಾಟಿಯಲ್ಲಿ ನಿರೂಪಿತಗೊಳ್ಳುವುದಕ್ಕೆ ಕಾರಣವಾಗಿವೆ.

ತನ್ನ ಸಮುದಾಯ ಇಂದಿಗೂ ಅವಮಾನಗಳಿಂದ ಮುಕ್ತವಾಗಿಲ್ಲವೆಂಬ ಸತ್ಯಾಸತ್ಯತೆಯನ್ನು ನಿವೇದಿಸಿಕೊಳ್ಳಲೂ, ಅವಮಾನಗಳು ತನಗೆ ಮಾತ್ರ ಸೀಮಿತವಲ್ಲ ಮತ್ತು ವಿಶಿಷ್ಟವಲ್ಲವೆಂಬ ಸಂಗತಿಗಳು ಈ ಬಗೆಯ ಅಭಿವ್ಯಕ್ತಿಗೆ ಕಾರಣಗಳಾಗಿವೆ. ಅರವಿಂದ ಮಾಲಗತ್ತಿ, ರಾಮಯ್ಯ, ಸಮತಾ ಅವರು ದಲಿತರಲ್ಲೇ ಪಂಚಮರಾಗಿದ್ದು; ದಲಿತರೊಳಗಿನ ಶ್ರೇಣೀಕರಣಗಳು ಅಪಮಾನಗಳನ್ನು ಉಂಟು ಮಾಡಿರುವುದರಿಂದ ಅಪಮಾನದ ಹಲವು ಮಜಲುಗಳನ್ನು ಹೇಳುವುದಕ್ಕೆ ಸಾಧ್ಯವಾಗಿದೆ.

ಆ. ವ್ಯಂಗ್ಯ, ಭರವಸೆ ಮತ್ತು ಭೀತಿಯ ಗೈರು ಹಾಜರಿ: ಮೇಲ್ಕಂಡ ಅಭಿವ್ಯಕ್ತಿಗಳಿಗೆ ಭಿನ್ನವಾಗಿ ಸಿದ್ಧಲಿಂಗಯ್ಯನವರ 'ಊರುಕೇರಿ' ಹಾಗೂ ಸಮತಾ ದೇಶಮಾನೆಯವರ 'ಮಾತಂಗಿ ದೀವಟಿಗೆ'ಯಲ್ಲಿ ಕಂಡುಬರುತ್ತವೆ. ಇಲ್ಲಿನ ಅಭಿವ್ಯಕ್ತಿ ಕೇವಲ ದಲಿತ ಬದುಕಿನ ಅಪಮಾನಗಳನ್ನು ಉಲ್ಲೇಖಿಸುವುದಷ್ಟೇ ಆಗದೇ, ಅಲ್ಲಲ್ಲಿ ಅಪಮಾನದ ಬದುಕನ್ನು ಭರವಸೆಯಾಗಿ, ಅಪಮಾನಿಸುವ ವ್ಯವಸ್ಥೆಯನ್ನು ಅಣಕವಾಡುವಂತೆ ಅಭಿವ್ಯಕ್ತಿಗೊಂಡಿವೆ. ಉದಾಹರಣೆಗೆ 'ಊರುಕೇರಿ'ಯಲ್ಲಿನ ಕೆಳಗಿನ ಮೂರು ಸನ್ನಿವೇಶಗಳನ್ನು ಗಮನಿಸಬಹುದಾಗಿದೆ. ಮೊದಲನೆಯದಾಗಿ 'ಮುದ್ದೆ ಮುದ್ದೆ' ಪ್ರಸಂಗವನ್ನು ಗಮನಿಸಬಹುದು. ಇಲ್ಲಿ ಬಡತನದ ಚಿತ್ರಣವಿದ್ದರೂ ಅದರೊಳಗೆ ವ್ಯಂಗ್ಯತೆ ಇದೆ. "ನನ್ನ ತಂಗಿ ಊಟದೊಂದಿಗೆ ಮನೆಗೆ ಬರುತ್ತಿದ್ದಳು. ಯಾವುದಾದರೂ ಅಂಗಡಿಯಲ್ಲಿ ಉಪ್ಪು ಪಡೆದು ಮಧ್ಯಾಹ್ನ ತಿನ್ನಬಹುದೆಂದು ಒಂದು ರಾಗಿ ಮುದ್ದೆಯನ್ನು ಈಸಿಕೊಂಡು ಶಾಲೆಗೆ ಹೋದೆ. ಪೆನ್ಸಿಲ್ ಕಳೆದುಕೊಂಡ ವಿದ್ಯಾರ್ಥಿ ಎಲ್ಲರ ಚೀಲವನ್ನು ಕೈ ಆಡಿಸಿ ಪುಸ್ತಕ ನೋಟು ಬುಕ್ಕುಗಳನ್ನು ಹೊರಗಿಟ್ಟು ಒಳಗಿಡುವುದು ಅವನ ಪರೀಕ್ಷೆಯ ರೀತಿ. ಪೆನ್ಸಿಲ್ ಕಳೆದುಕೊಂಡವನು ನನ್ನ ಮುದ್ದೆಯನ್ನು ಹೊರತೆಗೆದು ಪ್ರದರ್ಶನಕ್ಕೆ ಇಡಬಹುದೆಂಬ ಅನುಮಾನ ಬಂತು. ನನ್ನ ಪರೀಕ್ಷೆಗೆ ಅವಕಾಶ ಪರೀಕ್ಷೆಗೆ ಅವಕಾಶ ಕೊಡಲಿಲ್ಲ. ನಂತರ ಮೇಡಂ ಎದುರುಗಡೆ ಬ್ಯಾಗಿನೊಳಗಿನ ವಸ್ತುಗಳನ್ನು ಹೊರತೆಗೆದರು. ಪೆನ್ಸಿಲ್ ಸಿಗಲಿಲ್ಲ. ಅವರಿಗೆ ರಾಗಿ ಮುದ್ದೆ ಸಿಕ್ಕಿತು. ಹುಡುಗರಿಗೆ ಇದು ಮೋಜಿನ ವಿಷಯವಾಯಿತು. ಆಟಕ್ಕೆ ಬಿಟ್ಟಿದ್ದೆ ತಡ ಎಲ್ಲರೂ ಏಕಕಂಠದಿಂದ 'ಮುದ್ದೇ ಮುದ್ದೇ' ಎಂದು ಕೂಗುತ್ತ ಹೊರ ನಡೆದರು."[೬]

ಅಸ್ಪೃಶ್ಯತೆ–ರುಚಿಯಾದ ತಿಂಡಿ : "ಅದು ಸಂಪ್ರದಾಯಸ್ಥ ಕುಟುಂಬವಾದರೂ, ಅವರ ತಾಯಿ ರುಚಿಯಾದ ತಿಂಡಿ ಕೊಡುತ್ತಿದ್ದರು. ನಾನು ತಿಂಡಿ ತಿಂದ ತಟ್ಟೆಯನ್ನು ಮಾತ್ರ ಹೊರಗೆ ಇಡುತ್ತಿದ್ದುದನ್ನು ಒಂದು ದಿನ ಗಮನಿಸಿದೆ. ಇದರಿಂದ ನನಗೆ ಕಸಿವಿಸಿಯಾಯಿತು. ನನ್ನ ಗೆಳೆಯನಿಗೂ ಈ ವಿಷಯ ಗೊತ್ತಿತ್ತು. ವೇದನೆ ಅವನ ಮುಖದಲ್ಲಿ ವ್ಯಕ್ತವಾಗುತ್ತಿತ್ತು. ಸಂಪ್ರದಾಯ ಬಿಡದ ಅವರು ನಾನು ಬಹಳ ದಿನ ಹೋಗದಿದ್ದರೆ ಪರಿತಪಿಸುತ್ತಿದ್ದರು, ನಮ್ಮ ಗೆಳೆತನ ಬಹಳ ವರ್ಷ ಮುಂದುವರಿಯಿತು."[೭]

ಅವಮಾನ ಮತ್ತು ನಗು: "ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಒಬ್ಬ ದಲಿತನ ಮೇಲೆ ಹಲ್ಲೆ ನಡೆದಿತ್ತು. ನಾವು ಆ ಊರಿಗೆ ಹೋದೆವು. ಅವನ ತಲೆಗೆ ಭಾರಿ ಪೆಟ್ಟಾಗಿತ್ತು. ತಲೆಗೆ ಬ್ಯಾಂಡೇಜ್ ಹಾಕಿದ್ದರು. ಪತ್ರಿಕಾ ಪ್ರಚಾರಕ್ಕೆ ಅವನ ಪೋಟೋ ಕೊಡೋಣ ಎಂದು ಪೋಟೋ ತೆಗೆಸಲು ಹೇಳಿದೆವು. ಪೋಟೋದಲ್ಲಿ ಅವನು ನಗುತ್ತಿದ್ದ. ಛಾಯಾಗ್ರಾಹಕ ಪೋಟೋ ತೆಗೆಯುವಾ ಇವನನ್ನು ಸ್ಮೈಲ್ ಎಂದನಂತೆ. ಆದ್ದರಿಂದ ಈತ ನಕ್ಕುಬಿಟ್ಟಿದ್ದ. ಇದರಿಂದ ಏಟು ತಿಂದವನ ಕೇಸು ದುರ್ಬಲವಾಯಿತು."[೮]

ಈ ಮೇಲಿನ ಮೂರೂ ಸನ್ನಿವೇಶಗಳು ಮೇಲ್ನೋಟಕ್ಕೆ ಹಾಸ್ಯವಾಗಿ ಕಂಡರೂ, ವ್ಯವಸ್ಥೆಯು ತನಗೆ ತಾನೇ ವಿಮರ್ಶೆ ಮಾಡಿಕೊಳ್ಳಲು ಸಾಧ್ಯವಾಗುವಂತಹ ನಿರೂಪಣೆಗಳನ್ನು ಒಳಗೊಂಡಿವೆ. ಇಲ್ಲಿ ದಲಿತರ ಬದುಕು ಅಪಮಾನಗಳಲ್ಲಿ ಕೊಚ್ಚಿ ಹೋಗದೆ ಪರಿವರ್ತನೆಯ ಕಡೆಗೆ ಚಲಿಸುತ್ತಿರುವ ಸ್ಥಿತಿಯ ಮೇಲೆ ಆತ್ಮಕಥನಕಾರರು ನಂಬಿಕೆ ಇಟ್ಟಿದ್ದಾರೆ ಮತ್ತು ಅದನ್ನು ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ. 'ಮುದ್ದೇ ಮುದ್ದೇ', 'ಅಸ್ಪೃಶ್ಯತೆ–ರುಚಿಯಾದ ತಿಂಡಿ,' ಫೋಟೊ ಪ್ರಕರಣಗಳು ಎಲ್ಲಿಯೂ ವಿಷಾದವಾಗಿ ಅಭಿವ್ಯಕ್ತಿಗೊಳ್ಳದೆ, ಅಪಮಾನ ಮತ್ತು ಹಿಂಸೆಗಳನ್ನು ಯಾವ ಭೀತಿಗಳಿಲ್ಲದೆ ಅಭಿವ್ಯಕ್ತಿಗೊಂಡಿವೆ. ಈ ಮೂಲಕ ಸಮಾಜವು ತನ್ನನ್ನು ತಾನೇ ಪರಿಶೀಲಿಸಿಕೊಳ್ಳಲು ಪ್ರೇರಣೆ ನೀಡಿದಂತಿದೆ. ಈ ರೀತಿಯ ಅಭಿವ್ಯಕ್ತಿಗೆ ಕಾರಣಗಳೇನು ಎಂಬುದನ್ನು ಗುರುತಿಸಬೇಕಿದೆ. ಸಿದ್ಧಲಿಂಗಯ್ಯ ಅವರು ಆತ್ಮಕಥೆ ರಚನೆ ಮಾಡಿದ ಕಾಲಕ್ಕೂ ಹಿಂದೆ ಸಾಕಷ್ಟು ಆತ್ಮಕಥೆಗಳು ರಚನೆಗೊಂಡಿವೆ. ಹಿಂದಿನ ದಲಿತ ಆತ್ಮಕಥೆಗಳ ನಿರೂಪಣೆಯಲ್ಲಿ ಅಪಮಾನಿತ ಬದುಕಿನ ವಿವರಣೆಯೇ ಹೆಚ್ಚು ಕಂಡುಬಂದಿರುವುದರಿಂದ ದಲಿತ ಬದುಕಿನೊಳಗಿನ ಚೈತನ್ಯಾತ್ಮಕತೆಯನ್ನು ಸಮಾಜದ ಮುಂದಿಡುವ ಕಾರಣಕ್ಕಾಗಿ ಮೇಲಿನ ಅಭಿವ್ಯಕ್ತಿ ಕ್ರಮ ಬಳಸಿರಬಹುದು. ಜಾತಿ, ವರ್ಗ ಅಸಮಾನತೆಗಳು ಬದಲಾಗುವುದರ ಕುರಿತು ಆತ್ಮಕಥನಕಾರರಿಗೆ ಇರುವ ಭರವಸೆಗಳು ಸಹ ಕಾರಣವಾಗಿರಬಹುದು. ಇದರ ಜೊತೆಗೆ ಆತ್ಮಕಥನಕಾರರು ಆತ್ಮಕಥೆ ಬರೆಯುವ ಕಾಲದಲ್ಲಿನ ವೈಯಕ್ತಿಕ, ಸಾಮುದಾಯಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಲ್ಲಿ ಉಂಟಾಗಿರುವ ಬದಲಾವಣೆಗಳು ಕೂಡ ಭಿನ್ನ ನಿರೂಪಣೆಗಳಿಗೆ ಕಾರಣವಾಗಿರಬಹುದಾಗಿದೆ.

೮.೧.೪. ಚಂಪೂ ಮಾದರಿ, ಹೋರಾಟದ ಹಾಡುಗಳು: ಆತ್ಮಕಥೆಗಳಲ್ಲಿ ಸಾಮಾನ್ಯವಾಗಿ ಗದ್ಯವೇ ಪ್ರಧಾನ ಅಭಿವ್ಯಕ್ತಿ ಮಾದರಿಯಾದರೂ, ಗದ್ಯದ ಜೊತೆಗೆ ಪದ್ಯಗಳು ಸಂದರ್ಭನುಸಾರವಾಗಿ ನಿರೂಪಣೆಗೊಂಡಿವೆ. ಹೋರಾಟದ ಹಿನ್ನೆಲೆಯುಳ್ಳ ಆತ್ಮಕಥನಕಾರರಲ್ಲಿ ಈ ರೀತಿಯ ಅಭಿವ್ಯಕ್ತಿಗಳು ಹೆಚ್ಚೆಚ್ಚು ನಿರೂಪಿತಗೊಂಡಿವೆ.'ಗೌರ್ಮೆಂಟ್ ಬ್ರಾಹ್ಮಣ' ಹಾಗೂ 'ಬದುಕು ಬಯಲು' ಆತ್ಮಕಥೆಗಳಲ್ಲಿ ಇಂತಹ ಅಭಿವ್ಯಕ್ತಿ ಮಾದರಿಗಳಿವೆ.

ಅ. "ಚಹ ಸುಡುತ್ತಿತ್ತು

"ಕಪ್ಪು"

ಮೌನವಾಗಿತ್ತು

ಅಡಿಯಲ್ಲಿಯೇ ಹಾಸಿಕೊಂಡ

ಕಾಫಿ!

ಅತ್ತ ಉಗುಳಲಾಗದ

ಇತ್ತ ನುಂಗಲಾರದ ಕುತ್ತು."[೯]

ಆ. ಕುರುಕ್ಷೇತ್ರಕ್ಕಿಳಿದಿದ್ದೀವಿ

ಪಾಪ! ಎನಬೇಡಿ,

ಥೂ! ಎಂದು ದೂರ ತಳ್ಬೇಡಿ

ನಮ್ಮ ಹಕ್ಕು ನಮ್ಮ ಘನತೆ

ಪಡೆದೇ ತೀರ್ತೀವಿ,

ಅಡ್ಡ ಬರಬೇಡಿ." [೧೦]

ಮೇಲಿನ ಎರಡೂ ಕವನಗಳು ಗದ್ಯ ಪ್ರಕಾರವಾದ ಆತ್ಮಕಥೆಗಳಲ್ಲೂ ಕಾಣುವಂತವುಗಳಾಗಿದ್ದು, ಈ ಅಭಿವ್ಯಕ್ತಿ ಮಾದರಿಗೆ ಲೇಖಕರ ಹೋರಾಟದ ಹಿನ್ನೆಲೆಗಳೇ ಕಾರಣವಾಗಿವೆ. ಹೋರಾಟದ ಹಿನ್ನೆಲೆಯುಳ್ಳ ಆತ್ಮಕಥೆಗಳ ವಿಶಿಷ್ಟತೆ ಎಂದರೆ ಕೆಲವೊಮ್ಮೆ ಕವನ ಮತ್ತೆ ಕೆಲವೊಮ್ಮೆ ಹೋರಾಟದ ಹಾಡುಗಳು. ಹೀಗೆ ಹಲವು ಬಗೆಯ ಚಂಪೂ ಮಾದರಿಯ ಅಭಿವ್ಯಕ್ತಿಗಳು ಕಂಡುಬರುತ್ತವೆ. ಇವು ಅವಮಾನ ಮತ್ತು ಪ್ರತಿರೋಧಗಳನ್ನು ಸಾಂಕೇತಿಕರಿಸುತ್ತವೆ. ಕರ್ನಾಟಕದ ಸಂದರ್ಭದಲ್ಲಿ ನಡೆದ ದಲಿತ, ಬಂಡಾಯ ಚಳವಳಿಯಲ್ಲಿ ಆತ್ಮಕಥನಕಾರರೂ ಭಾಗವಹಿಸಿದ ಪರಿಣಾಮ ಹಾಗೂ ಆತ್ಮಕಥನಕಾರರು ಮೂಲತಃ ಕವಿಗಳು, ಕವಯಿತ್ರಿಯರು ಇರುವ ಕಾರಣಗಳಿಂದ ಈ ಬಗೆಯ

ಅಭಿವ್ಯಕ್ತಿಗೆ ಕಾರಣಗಳಾಗಿವೆ. ಈ ಅಭಿವ್ಯಕ್ತಿ ಮಾದರಿಯು ಎಸ್.ಎಲ್.ಭೈರಪ್ಪ ಹಾಗೂ ನಾಗಲೋಟಿಮಠ ಅವರ ಆತ್ಮಕಥೆಗಳಲ್ಲಿ ಕಂಡುಬರುವುದಿಲ್ಲ. ಬಹುಶಃ ಹೋರಾಟಗಳ ಹಿನ್ನೆಲೆಗಳು ಭೈರಪ್ಪ ಅವರಿಗೆ ಇಲ್ಲದಿರುವುದು ಇದಕ್ಕೆ ಕಾರಣವಾಗಿರಬಹುದಾಗಿದೆ. ಈ ಬಗೆಯ ಅಭಿವ್ಯಕ್ತಿ ಮಾದರಿಯು ಓದುಗ ವಲಯ ಸುಲಭವಾಗಿ ಓದಿಸಿಕೊಂಡು ಹೋಗುವಂತೆ ಮಾಡುವಲ್ಲಿ ಸಫಲವಾಗಿವೆ ಮತ್ತು ಆಶಯವನ್ನು ಹೆಚ್ಚು ಅರ್ಥಪೂರ್ಣವಾಗಿ ಹಿಡಿದಿಡುವಲ್ಲಿ ಪ್ರಮುಖ ಪಾತ್ರವಹಿಸಿವೆ. ಮೇಲೆ ಉಲ್ಲೇಖಿಸಿದ ಈ ರೀತಿಯ ಹೋರಾಟದ ಹಾಡುಗಳು ಮತ್ತು ಉಪಕಥೆಗಳು ಓದುಗ ವಲಯದಲ್ಲಿ ಒಂದು ಬಗೆಯ ಸಮ ಸಮಾಜವನ್ನು ನಿರ್ಮಿಸಲು ಪ್ರೇರಣೆ ನೀಡುವಂತೆ ಅಭಿವ್ಯಕ್ತಿಗೊಂಡಿವೆ.

**೮.೧.೫. ಆತ್ಮಕಥೆಗಳ ಶೀರ್ಷಿಕೆಗಳು** : ಅಸ್ಪೃಶ್ಯತೆಯ ಹಿನ್ನೆಲೆಯ ಆತ್ಮಕಥನಕಾರರ ಆತ್ಮಕಥೆಗಳು ಬಹುತೇಕ ತಮ್ಮ ಸಮುದಾಯದ ಹೆಸರುಗಳನ್ನೇ ('ಮಣೆಗಾರ', 'ಸಂಬೋಳಿ') ಆತ್ಮಕಥೆಗಳ ಶೀರ್ಷಿಕೆಗಳನ್ನಾಗಿ ಮಾಡಿಕೊಂಡಿದ್ದರೆ, ದಲಿತೇತರ ಆತ್ಮಕಥೆಗಳಲ್ಲಿ ('ಭಿತ್ತಿ', 'ಬಿಚ್ಚಿದ ಜೋಳಿಗೆ') ಸಮುದಾಯ ಕೇಂದ್ರಿತ ಶೀರ್ಷಿಕೆಗಳು ಕಂಡುಬಂದಿರುವುದಿಲ್ಲ.

ಅಸ್ಪೃಶ್ಯ ಹಿನ್ನೆಲೆಯ ಆತ್ಮಕಥೆಗಳ ಶೀರ್ಷಿಕೆಗಳಿಗೆ ಕಾರಣಗಳೆಂದರೆ:

೧. ಮರಾಠಿ ದಲಿತ ಆತ್ಮಕಥೆಗಳು ೭೦-೮೦ರ ದಶಕದಲ್ಲಿ ತಮ್ಮ ಸಮುದಾಯದ ಹೆಸರುಗಳನ್ನೇ ಸ್ವಾಭಿಮಾನದ ಸಂಕೇತಗಳನ್ನಾಗಿ ಬಳಸಿದವು. ಇದು ಕನ್ನಡದ ದಲಿತ ಆತ್ಮಕಥೆಗಳ ಮೇಲೆಯೂ ಪ್ರಭಾವ ಬೀರಿತು. ೨. ತನಗಾದ ಅವಮಾನ ತನ್ನದಷ್ಟೆ ಅಲ್ಲದೆ ಇಡೀ ತನ್ನ ಸಮುದಾಯದ್ದು ಎಂದು ಹೇಳುವುದು. ೩. ಜಾತಿ ಹೆಸರನ್ನು ಹೇಳಲು ಹಿಂಜರಿಯುವ ತನ್ನ ಸಮುದಾಯದವರಲ್ಲಿ ಸ್ವಾಭಿಮಾನವನ್ನುಂಟು ಮಾಡುವುದು. ೪. ಇತರೆ ಓದುಗರಿಗೂ ತಳಸಮುದಾಯಗಳ ಬದುಕಿನ ಪರಿಚಯವಾಗಲಿ ಹೀಗೆ ಹಲವು ಕಾರಣಗಳು ಕಂಡುಬರುತ್ತವೆ.

ದಲಿತೇತರ ಆತ್ಮಕಥೆಗಳ ಶೀರ್ಷಿಕೆಗಳಿಗೆ ಕಾರಣಗಳು ಹೀಗಿವೆ: ೧. ದಲಿತರಂತೆ ತಮ್ಮ ಸಮುದಾಯದ ಹೆಸರನ್ನು ಸ್ವಾಭಿಮಾನದ ಸಂಕೇತವಾಗಿ ಬಳಸುವ ಆವಶ್ಯಕತೆ ಇಲ್ಲದಿರುವುದು. ೨. ದಲಿತರಿಗೆ ಜಾತಿ ಮತ್ತು ಜಾತೀಯತೆಗಳು ಉಂಟು ಮಾಡಿದ ಅಪಮಾನಗಳು ಸವರ್ಣೀಯ ಲೇಖಕರಲ್ಲಿ ಹೆಚ್ಚು ಕಂಡುಬಂದಿಲ್ಲದಿರುವುದು.೩. ಸವರ್ಣೀಯ ಸಮುದಾಯಗಳ ಹೆಸರುಗಳು ಬೈಗುಳಗಳಾಗಿಯೋ ಅಥವಾ ನಿಂದಕಗಳಾಗಿಯೋ ಬಳಕೆಯಾಗದೆ. ಗೌರವ ಸೂಚಕ ಪದಗಳಾಗಿ ರೂಪುಗೊಂಡಿರುವುದು. ೪. ದಲಿತ ಆತ್ಮಕಥೆಗಳು ಹಿಂದೆ ಬಳಸಿರುವ ಶೀರ್ಷಿಕೆ ಮಾದರಿಗಳನ್ನು ಮೀರುವ ಕಾರಣಗಳಿರಬಹುದು.

ಕನ್ನಡ ಆತ್ಮಕಥೆಗಳ ಶೀರ್ಷಿಕೆಗಳು ಇಡೀ ಆತ್ಮಕಥೆಗಳ ಕಸುವನ್ನು ತಮ್ಮೊಳಗೆ ಮಿಳಿತಗೊಳಿಸಿಗೊಂಡಿವೆ. ಅಸ್ಪೃಶ್ಯ ಹಿನ್ನೆಲೆಯ ಆತ್ಮಕಥೆಗಳ 'ಮಣೆಗಾರ', 'ಸಂಬೋಳಿ' ಮುಂತಾದ ಶೀರ್ಷಿಕೆಗಳು ಓದುಗರಿಗೆ ತಕ್ಷಣಕ್ಕೆ ಸ್ವಜಾತೀಕರಣದಂತೆ ಕಂಡರೂ, ಆತ್ಮಕಥೆಯನ್ನು ಓದಿದಾಗ

ಬೇರೆಯೇ ಆದ ಅನುಭವವನ್ನು ನೀಡುತ್ತವೆ. ಇಲ್ಲಿ ಸ್ವಜಾತಿ ಶ್ರೇಷ್ಠೀಕರಣವಿಲ್ಲ. ಬದಲಿಗೆ ತಮ್ಮ ಸಮುದಾಯದ ವಾಸ್ತವ ಬದುಕಿನ ಅಪಮಾನಿತ ಮತ್ತು ಭರವಸೆಯ ಅನುಭವಗಳ ದೀರ್ಘ ಸರಮಾಲೆಯಿದೆ. ಇವುಗಳನ್ನು ಓದುಗರಿಗೆ ತಲುಪಿಸುವಲ್ಲಿ ಆತ್ಮಕಥೆಗಳು ಯಶಸ್ವಿಯಾಗಿವೆ. ದಲಿತೇತರ ಆತ್ಮಕಥೆಗಳ ಶೀರ್ಷಿಕೆಗಳಿಗೆ ಅಸ್ಪೃಶ್ಯ ಆತ್ಮಕಥೆಗಳಿಗೆ ಇರಬಹುದಾದ ಒತ್ತಡವಿಲ್ಲ. ಅನುಭವಗಳ ಸೃಜನಶೀಲ ಅಭಿವ್ಯಕ್ತಿ ಇವುಗಳ ಮುಖ್ಯ ಉದ್ದೇಶವಾಗಿರುವಂತೆ ಕಾಣುತ್ತದೆ. ದಲಿತ ಆತ್ಮಕಥೆಗಳ ಶೀರ್ಷಿಕೆಗಳಿಗಿರುವ ಸಾಮಾಜಿಕ ಒತ್ತಡಗಳಿಗೆ ಮುಖಾಮುಖಿಯಾಗುವ ಅನಿವಾರ್ಯತೆಗಳು, ದಲಿತೇತರ ಆತ್ಮಕಥೆಗಳಿಲ್ಲ.

**೮.೧.೬. ತಳ ಸಮುದಾಯಗಳು ಮತ್ತು ಕೆಲವು ಅಸಹಿಷ್ಣುತೆಯ ಅಪಮಾನಿತ ಪದಗಳು**

ಇತ್ತೀಚಿನ ಸಂವಾದಗಳಲ್ಲಿ, ಚರ್ಚೆಗಳಲ್ಲಿ ದಲಿತರಿಗೆ ಸಿಗುವ ಅವಕಾಶಗಳ ಕುರಿತ ಚರ್ಚೆ ಜರುಗುತ್ತಲೇ ಇರುತ್ತವೆ. ಇವು ಅಸಹಿಷ್ಣುತೆಯ ಭಾಗವಾಗಿದ್ದೂ, ಅಸ್ಪೃಶ್ಯರ ಒಡಲಾಳವನ್ನು ಮರೆಮಾಚುತ್ತವೆ. ಇಂತಹ ಸಂದರ್ಭಗಳಲ್ಲೆಲ್ಲ ಅಸ್ಪೃಶ್ಯರನ್ನೂ ಕುರಿತು ವಿಶೇಷ ಪದಗಳನ್ನು ಬಳಸಲಾಗುತ್ತದೆ. 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ ಶೀರ್ಷಿಕೆಯಾಗಿರಬಹುದು, ಇದರಲ್ಲೇ ಬರುವ 'ದೇವರ ಮಕ್ಕಳು' ಎನ್ನುವ ಪದವಾಗಿರಬಹುದು, 'ಗೊಂದಲಿಗ್ಯಾ' ಆತ್ಮಕಥೆಯಲ್ಲಿನ "ನೀವೇನಪ್ಪ ಎಸ್.ಸಿ. ಎಸ್.ಟಿ ಅಂದ್ರ ಸರಕಾರದ ಮಕ್ಳು! ಇವತ್ತ ನಾಳೇ ನಿಮ್ಮದ ಕಾಲ ಐತಿ. ನೀವು ಬೇಡಿದಂತ ನೌಕರಿ ಸಿಗತಾವ ಅಂದರು"[೧೨] ಎನ್ನುವ ಆರೋಪಗಳಿರಬಹುದು, ಇವು ದಮನಿತರಿಗೆ ಸರ್ಕಾರ ಕೊಡುವ ಸವಲತ್ತುಗಳು, ವಿನಾಯಿತಿಗಳು, ಮೀಸಲಾತಿ ಕುರಿತ ಸವರ್ಣೀಯರ ಅಸಹಿಷ್ಣುತೆಯ ಪ್ರತೀಕವಾಗಿವೆ. ಜೊತೆಗೆ ಅವಕಾಶವಂಚಿತರನ್ನು ನಿಂದಿಸುವ ಪರಿಭಾಷೆಗಳೂ ಆಗಿವೆ. ಇಂತಹ ನಿಂದನೆಗಳು ಆತ್ಮಕಥನಕಾರರಿಗೆ ಅಪಮಾನವನ್ನುಂಟು ಮಾಡಿರುವುದನ್ನು ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

೮.೧.೭. ಶಾಲಾ ವ್ಯವಸ್ಥೆ ಮತ್ತು ಅಪಮಾನಗಳು: ಸಾಂಸ್ಕೃತಿಕ ಭಿನ್ನತೆಗಳನ್ನು ಸ್ವತಃ ಗೌರವಿಸುವ ಮತ್ತು ಮಕ್ಕಳಲ್ಲಿಯೂ ಗೌರವಿಸುವ ಮನೋಭಾವನೆಯನ್ನುಂಟು ಮಾಡಬೇಕಿದ್ದ ಶಿಕ್ಷಕರು, ತಾವೇ ಅವಮಾನಿಸುವವರಾಗುವುದು ಶೈಕ್ಷಣಿಕ ವ್ಯವಸ್ಥೆಯೊಳಗಿನ ನೈತಿಕ ಸ್ವರೂಪವನ್ನೇ ಪ್ರಶ್ನೆ ಮಾಡುತ್ತದೆ. ಕೆಳಗಿನ ಸನ್ನಿವೇಶಗಳು ಶಾಲಾ ವ್ಯವಸ್ಥೆಯು ಜಾತಿ ಮತ್ತು ಲಿಂಗ ಕೇಂದ್ರಿತ ಎರಡೂ ಬಗೆಯ ಅವಮಾನಗಳಿಗೆ ಕಾರಣವಾಗುವುದನ್ನು ಸಾಂಕೇತಿಸುತ್ತವೆ. 'ಬದುಕು ಬಯಲು', 'ಗೌರ್ಮೆಂಟ್ ಬ್ರಾಹ್ಮಣ'ದ ಈ ಕೆಳಗಿನ ಉಲ್ಲೇಖಗಳನ್ನು ಗಮನಿಸಬೇಕು:

ಅ. "ಹುಡುಗರ ಆಟ ಆಡುತ್ತಿರಲಿಲ್ಲವೆಂಬ ಕಾರಣಕ್ಕೆ ಪಿ.ಟಿ ಮೇಷ್ಟ್ರು ಸಹ ಶಿಕ್ಷೆ ನೀಡಿದ್ದರು. ನನ್ನ ಕಿವಿ ಹಿಂಡಿ 'ನೀನು ಹುಡುಗೀನಾ? ಚಡ್ಡಿ ತೆಗಿ ನೋಡುತ್ತೇನೆ."[೧೩]

ಅ. "ನಮ್ಮ ಕೇರಿಯವರು ಒಟ್ಟು ತರಗತಿಯಲ್ಲಿ ನಾಲ್ಕು ಜನ. ದೇವಪ್ಪ, ಮಲ್ಲಪ್ಪ, ಬಸವಂತಪ್ಪ ಮತ್ತು ನಾನು. ನಾಳೆ ಕಸದ ಪಾಳಿ ಯಾರದಿದೆ ಎನ್ನುವುದನ್ನು ಕರಿ ಹಲಗೆಯ ಮೇಲೆ ದೇವ್ಯಾ, ಮಲ್ಯಾ ಎಂದು ಹೆಸರು ಬರೆಯುತ್ತಿದ್ದರು. ಕರಿ ಹಲಗೆಯ ಮೇಲೆ 'ನಾಳಿನ ಕಸದ ಪಾಳಿ–ಮಾಲಕತ್ತಿ' ಎಂದು ಬರೆದಿದ್ದರು. ಮಾಲಕತ್ತಿ ಎಂದು ಬರೆದಿದ್ದನ್ನು ಕ ಕಾರ ತೆಗೆದು ಗ ಕಾರ ಬರೆಯಲು ಹವಣಿಸುತ್ತಿದ್ದೆ. ತರಗತಿಗೆ ಬಂದ ಗುರುಗಳು 'ಕತ್ತಿ ಅಂತ ಬರದ್ರ ಏನಾಯ್ತು? ಕತ್ತಿ ಕತ್ತಿನೇ ಕತ್ತೆಲ್ಲೆದರ ಕುದುರ್ಯಾಕ್ಕದೇನ?' ಎಂದು ಮನ ತುಂಬುವವರೆಗೆ ಹೊಡೆದರು."[೧೩]

ಮೇಲಿನ ಎರಡೂ ಘಟನೆಗಳು ಜಾತ್ಯತೀತ, ಲಿಂಗಾತೀತ ಸ್ಥಳವಾಗಿರಬೇಕಾಗಿದ್ದ ಶಾಲೆಯಲ್ಲಿ ನಡೆದಿವೆ. ಅರವಿಂದ ಮಾಲಗತ್ತಿ ಮತ್ತು ರೇವತಿಯವರು ಬಾಲ್ಯದಲ್ಲಿಯೂ, ಮದರಿ ಅವರು ವೃತ್ತಿ ಬದುಕಿನಲ್ಲಿಯೂ ಅಪಮಾನಗಳನ್ನು ಅನುಭವಿಸುವುದು ಇಲ್ಲಿ ಕಂಡುಬರುತ್ತದೆ. ಮೊದಲನೆಯ ಸನ್ನಿವೇಶದಲ್ಲಿ ಲಿಂಗ ಸಮನ್ವಯ ಶಿಕ್ಷಣವನ್ನು ಪ್ರತಿಪಾದಿಸಬೇಕಾಗಿದ್ದ ಶಿಕ್ಷಕನೇ ಶೋಷಕನಾದರೆ, ಎರಡನೆಯ ಸನ್ನಿವೇಶದಲ್ಲಿ 'ಕತ್ತೆಲ್ಲೆರ ಕುದುರ್ಯಾಕ್ಕದೇನ' ಎಂದು ಹೇಳುವುದು ಅಸ್ಪೃಶ್ಯರನ್ನು ಹತ್ತಿಕ್ಕುವ ಉದ್ದೇಶ ಹೊಂದಿರುವಂತೆ ಕಾಣುತ್ತದೆ. ಹೀಗೆ ಶೈಕ್ಷಣಿಕ ವ್ಯವಸ್ಥೆಯೊಳಗೆ ಲಿಂಗಾಧಾರಿತ ಮತ್ತು ಧರ್ಮಾಧಾರಿತ ತರತಮಗಳಾಗುವುದನ್ನು ಕಾಣಬಹುದಾಗಿದೆ.

೮.೧.೮. ಕಾಲ, ಸನ್ನಿವೇಶ ಆಧಾರಿತ ಅವಮಾನ ಮತ್ತು ಗೌರವಗಳು: ಒಬ್ಬನೇ ವ್ಯಕ್ತಿಗೆ ಕಾಲ, ಸನ್ನಿವೇಶ, ಸಂದರ್ಭಗಳು ಕೆಲವೊಮ್ಮೆ ಅವಮಾನಗಳನ್ನುಂಟು ಮಾಡಿದರೆ ಮತ್ತೆ ಕೆಲವೊಮ್ಮೆ ಗೌರವವನ್ನುಂಟು ಮಾಡುತ್ತವೆ. ಇದರರ್ಥ ಅವಮಾನ ಮತ್ತು ಗೌರವಗಳು ಕಾಲದಿಂದ ಕಾಲಕ್ಕೆ ಪಲ್ಲಟವಾಗುತ್ತಿರುತ್ತವೆ. ಉದಾಹರಣೆಗೆ 'ಗೊಂದಲಿಗ್ಯಾ'ದಲ್ಲಿ ಲೇಖಕರು ಬರೆದುಕೊಳ್ಳುವ ಸನ್ನಿವೇಶ ಹೀಗಿದೆ. "ಮನೆಯ ಹೊರಗೆ ಗೊಂದಲಿಗರನ್ನು ಸ್ವಾಗತಿಸಲು ಬಂದ ಗುರುಗಳು ನನ್ನನ್ನು ನೋಡಿದರು. ಏ ಮದರಿ ಬಂದಾನಲ್ಲ ಅವನೂ ನಿಮ್ಮ ಕೂಡ ಕತೆ ಹೇಳತಾನ ಏನ ಎಂದು ನಕ್ಕರು. ಉಳಿದ ಗೊಂದಲಿಗರೊಂದಿಗೆ ನನ್ನ ಕಾಲುಗಳಿಗೂ ಗುರುಗಳು, ಅವರ ಶ್ರೀಮತಿ ಅವರ ಮಕ್ಕಳು ನಮಸ್ಕರಿಸಿದರು. ಮರುದಿನದಿಂದ ಮತ್ತೆ ಪಾಠ ಹೇಳುವಾಗ ಹೊರಗೆ ಕುಳಿತುಕೊಳ್ಳಬೇಕಾಗುತ್ತಿತ್ತು"[೧೪] ಎನ್ನುವ ವಿವರಗಳಿವೆ. ಮೇಲಿನ ಸನ್ನಿವೇಶದಲ್ಲಿ ಭಿನ್ನ ಭಿನ್ನ ಸನ್ನಿವೇಶ ಮತ್ತು ಎರಡು ಸ್ಥಳಗಳಿದ್ದು, ಒಂದು ಕಡೆ ಅಪಮಾನವಿದೆ ಮತ್ತೊಂದು ಕಡೆ ಗೌರವವಿದೆ. ಮದರಿಯವರು ಬೆಳಗಿನ ಸಮಯದಲ್ಲಿ ವಿದ್ಯಾರ್ಥಿಯಾಗಿದ್ದಾಗ ಶಾಲೆಯಲ್ಲಿ ಅಸ್ಪೃಶ್ಯತೆಗೆ ಒಳಗಾಗಿ ತರಗತಿಯ ಹೊರಗಡೆ ಕೂತು ಪಾಠ ಕೇಳುವ ಸ್ಥಿತಿ ಕಂಡುಬರುತ್ತದೆ. ಇಲ್ಲಿ ಅವಮಾನಕ್ಕೆ ಒಳಗಾದ ಮದರಿಯವರು ರಾತ್ರಿಯ ಸಮಯದಲ್ಲಿ ತನ್ನ ಗುರುಗಳ ಮನೆಗೆ ಗೊಂದಲ ಹಾಕಲು ತನ್ನ ಹಿರಿಯರ ಜೊತೆ ಹೋಗುತ್ತಾರೆ. ಆಗ ಶಾಲೆಯಲ್ಲಿ ತರಗತಿಯಿಂದ ದೂರ ಕೂರಿಸುವ ಮೂಲಕ ಅಸ್ಪೃಶ್ಯತೆಯನ್ನಾಚರಿಸಿದ ಗುರುಗಳು ತಮ್ಮ ಕುಟುಂಬ ಸಮೇತ ಮದರಿಯವರ ಕಾಲಿಗೆ

ಬೀಳುತ್ತಾರೆ. ಇಲ್ಲಿ ಅವಮಾನಕ್ಕೆ, ಗೌರವಕ್ಕೆ ಒಳಗಾಗುತ್ತಿರುವುದು ಒಬ್ಬರೆಯಾದರೂ ಆಗುತ್ತಿರುವ ಸನ್ನಿವೇಶ, ಕಾಲ, ಸ್ಥಳ ಬೇರೆ ಬೇರೆಯಾಗಿವೆ. ಕರಾವಳಿ ಭಾಗದಲ್ಲಿ ಗದ್ದೆ ಕೆಲಸಕ್ಕೆ ಬಂದಾಗ ಪರವ, ಪಮ್ಮದ, ನಲಿಕೆ ಸಮುದಾಯಗಳ ಮೇಲೆ ಭೂಮಾಲಿಕ ಧಣಿಗಳು ನಿಂದನೆಗಳನ್ನು ಮಾಡಿದರೆ, ಇವೇ ಸಮುದಾಯದಿಂದ ಬಂದವರು ಭೂತಾರಾಧನೆಗೆ ತೊಡಗಿಸಿಕೊಂಡಾಗ ಅದೇ ಭೂಮಾಲಿಕರು ಕಾಲಿಗೆ ಬೀಳುತ್ತಾರೆ. ಇಲ್ಲಿಯೂ ಒಂದು ಸಮುದಾಯ ಗದ್ದೆಯಲ್ಲಿ ನಿಂದನೆಗೆ ಒಳಗಾದರೆ, ಧಾರ್ಮಿಕ ಆಚರಣೆಯಲ್ಲಿ ಮಾತ್ರ ಗೌರವಕ್ಕೆ ಒಳಗಾಗುತ್ತದೆ. ಈ ತರಹದ ಘಟನೆಗಳ ಮೂಲಕ ಭಾರತ ದೇಶದ ಸಾಂಸ್ಕೃತಿಕ ವಿಚಿತ್ರಗಳನ್ನು ಆತ್ಮಕಥೆಗಳು ಸಾಕ್ಷೀಕರಿಸುತ್ತವೆ.

೮.೧.೯. ಆತ್ಮವಿಮರ್ಶಾತ್ಮಕತೆ ಮತ್ತು ಮರೆಮಾಚುವಿಕೆ: ಕೆಲವು ಆತ್ಮಕಥನಕಾರರು ಓದುಗರ ಸಿಂಪತಿಯನ್ನು ಪಡೆಯಲು ತಮ್ಮ ಬದುಕೇ ಶೋಷಣೆಗಳಿಂದ ಕೂಡಿದೆ ಎನ್ನುವಂತೆ ಅಭಿವ್ಯಕ್ತಿಸುವ ಸಾಧ್ಯತೆ ಇರುತ್ತದೆ. ಆದರೆ ಈ ಕೆಳಗೆ ಚರ್ಚಿಸಿರುವ ಆತ್ಮಕಥನಕಾರರು ಕೇವಲ ಶೋಷಿತ ಸಂಗತಿಗಳ ಬಗ್ಗೆ ಹೇಳದೇ ತಮ್ಮಿಂದಲೂ ಆಗಿರುವ ಶೋಷಣೆಗಳನ್ನು ಅಭಿವ್ಯಕ್ತಿಸಿಕೊಂಡಿದ್ದರೆ. ಮತ್ತೆ ಕೆಲವು ಆತ್ಮಕಥೆಗಳಲ್ಲಿ ಅಷ್ಟಾಗಿ ಆಸಕ್ತಿವಹಿಸಿಲ್ಲದಿರುವುದನ್ನು ಮತ್ತು ಮರೆಮಾಚುವುದನ್ನು ಕಾಣಬಹದು.

ಮೊದಲನೆಯದಾಗಿ ಆತ್ಮವಿಮರ್ಶೆಗೆ ಸಂಬಂಧಿಸಿದಂತೆ ಗಮನಿಸುವುದಾದರೆ 'ಮಣೆಗಾರ'ದಲ್ಲಿ ದಲಿತರಲ್ಲೇ ಎಡಗೈ ಎಂದು ಕರೆಯಲಾಗುವ ಮಾದಿಗ ಸಮುದಾಯವು ತನ್ನದೇ ಉಪ ಜಾತಿಯಾದ ದಕ್ಕಲರನ್ನು ಹಟ್ಟಿಯ ಒಳಗಡೆಯೇ ಬಿಟ್ಟುಕೊಳ್ಳದಿರುವುದನ್ನು ಗಮನಿಸಬಹುದು. ಜೊತೆಗೆ 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಲೇಖಕರು "ನಮಗಿಂತಲೂ ಕೆಳ ವರ್ಗದ ಇನ್ನೊಂದು ತಂಡವೂ ಅಲ್ಲಿತ್ತು. ಅವರು ಈ ಮೂರು ಪಂಕ್ತಿಗೆ ಸಂಬಂಧ ಪಟ್ಟವರಲ್ಲ. ಹೀಗಾಗಿ ಅವರಿಗೆ ನಮಗಿಂತಲೂ ಕೊನೆಗೆ ಊಟ. ಅವರಲ್ಲಿ ಅಡ್ವಿ ಚೊಂಚರು, ಲೋಲ್ಯಾರು, ಕುಂಚಿಕೊರವರು ಇರುತ್ತಿದ್ದರು. ಇವರನ್ನು ಕಂಡು ನಾವು ಹೇಸುತ್ತಿದ್ದೆವು. ಇವರು ಬೇಡಿ ತಿನ್ನುವುದನ್ನೆ ವೃತ್ತಿಯಾಗಿಸಿಕೊಂಡವರಾಗಿದ್ದರು"[೧೫] ಎಂದು ಬರೆಯುತ್ತಾರೆ. ಮೇಲ್ಕಂಡ ಸನ್ನಿವೇಶಗಳನ್ನು ಗಮನಿಸಿದಾಗ ಆತ್ಮಕಥನಕಾರರು ತಮ್ಮ ಸಮುದಾಯಗಳು ಅವಮಾನಕ್ಕೆ ಒಳಗಾಗುತ್ತಾ, ಇತರೆ ಸಮುದಾಯಗಳನ್ನೂ ಶೋಷಿಸುತ್ತಿರುವುದರ ಬಗ್ಗೆ ಹೇಳಿಕೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ. ಇದು ಆತ್ಮವಿಮರ್ಶೆಯ ಭಾಗವಾಗಿದ್ದು, ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಆತ್ಮಕಥೆಗಳ ಮೂಲ ಗುಣ ಆತ್ಮವಿಮರ್ಶೆಯಾಗಿರುವ ಕಾರಣದಿಂದಲೇ ಕೆಲವು ಆತ್ಮಕಥನಕಾರರು ಸ್ವ(ಸಮುದಾಯ)ವಿಮರ್ಶೆ ಮಾಡಿಕೊಂಡಿರಬಹುದಾಗಿದೆ. ಸಾಮಾಜಿಕ ಶ್ರೇಣೀಕರಣಗಳು ಬದುಕಿನ ಅನುಭವಗಳಾಗಿ ದೊರೆತಿರುವ ಕಾರಣಗಳಿಂದ ಈ ರೀತಿ ಇತರೆ ಸಮುದಾಯಗಳ ಮೇಲಿನ ಶೋಷಣೆಯನ್ನು ಅಭಿವ್ಯಕ್ತಿಸಲಾಗಿದೆ.

ಆತ್ಮಕಥನಕಾರರು ಇತರೆ ತಳಸಮುದಾಯಗಳ ಅಪಮಾನಗಳನ್ನು ತನ್ನ ಅಪಮಾನವೆಂದು ಭಾವಿಸಿರಬೇಕು ಈ ಕಾರಣಗಳಿಂದ ಆತ್ಮವಿಮರ್ಶೆ ಮಾಡಿಕೊಂಡಿರಬಹುದಾಗಿದೆ.

ಮೇಲ್ಕಂಡ ವಿವರಗಳು ಆತ್ಮವಿಮರ್ಶೆ ಮಾಡಿಕೊಂಡಿರುವುದಕ್ಕೆ ಸಂಬಂಧಿಸಿದ್ದರೆ, ಈ ಆತ್ಮವಿಮರ್ಶಾತ್ಮಕ ಗುಣವು 'ಊರುಕೇರಿ'ಯಲ್ಲಿ ಅಷ್ಟಾಗಿ ಕಂಡುಬಂದಿಲ್ಲರುವುದನ್ನು ಗುರುತಿಸಬಹುದಾಗಿದೆ. ಸವರ್ಣೀಯರು ದಲಿತರೊಳಗಡೆಯೇ ಶೋಷಣೆಗಳಿವೆ ಎಂದು ಆರೋಪಿಸುವರೆಂಬ ಕಾರಣಗಳಿಂದಲೊ ಅಥವಾ ತಮ್ಮ ಸಮುದಾಯವು ತಮಗಿಂತ ತಳಸಮುದಾಯಗಳನ್ನು ಶೋಷಣೆ ಮಾಡುತ್ತಿದೆ ಎಂಬುದನ್ನು ಉದ್ದೇಶಪೂರ್ವಕವಾಗಿ 'ಮರೆಮಾಚಬೇಕೆಂದೋ'; ಹೀಗೆ ಹಲವು ಕಾರಣಗಳಿಗೆ ಆತ್ಮವಿಮರ್ಶೆ ಮಾಡಿಕೊಳ್ಳದಿರುವುದನ್ನು ಗುರುತಿಸಬಹುದಾಗಿದೆ. ಮೇಲಿನವುಗಳಿಗಿಂತ ಭಿನ್ನವಾಗಿ 'ಭಿತ್ತಿ'ಯಲ್ಲಿ ಎಸ್.ಎಲ್.ಭೈರಪ್ಪ ಅವರು ತಮ್ಮೂರಿನಲ್ಲಿನ ಜಾತೀಯತೆಯನ್ನು ಜಾಣ್ಮೆಯ ಮೂಲಕ ಮರೆಮಾಚುವುದನ್ನು ಕಾಣುತ್ತೇವೆ. "ನಾನು ಹುಟ್ಟಿ ಬೆಳೆದು ಸುತ್ತಾಡಿದ ಹಳ್ಳಿಗಳೆಲ್ಲಲ್ಲ ಹತ್ತು ಹಲವಾರು ಜಾತಿಗಳಿದ್ದರೂ. ಒಂದು ಜಾತಿಯು ಮತ್ತೊಂದರಲ್ಲಿ ಊಟ ಮಾಡದಿದ್ದರೂ ಪರಸ್ಪರ ಮಾನವೀಯತೆ ಪ್ರೀತಿ ಅಂತಃಕರಣಗಳಿಗೆ ಎಂದೂ ಕೊರತೆ ಇರಲಿಲ್ಲ"[೧೬] ಎಂದು ಎಸ್.ಎಲ್ ಭೈರಪ್ಪ ಅವರು ಹೇಳುವರು. ಲೇಖಕರ ಮಾತುಗಳನ್ನಿಲ್ಲಿ ಎಚ್ಚರಿಕೆಯಿಂದ ಗಮನಿಸಬೇಕಿದೆ. ಜಾತಿ, ಜಾತಿಗಳ ನಡುವೆ ಊಟ ಮಾಡುತ್ತಿರಲಿಲ್ಲ ಎನ್ನುವ ಮಾತಾಗಲಿ ಅಥವಾ ಅದೇ ಆತ್ಮಕಥೆಯಲ್ಲಿನ ಸಮುದಾಯಗಳ ನಡುವಿನ ತರತಮಗಳಾಗಲಿ ಇವು ಜಮೀನ್ದಾರಿ ವ್ಯವಸ್ಥೆಯ ದಬ್ಬಾಳಿಕೆ ಮತ್ತು ಸಮುದಾಯಗಳೊಳಗಿನ ಅಪಮಾನಗಳನ್ನು ಸಾಂಕೇತಿಸುತ್ತವೆ. ಇವು ಲೇಖಕರು ಹೇಳುವ ಪ್ರೀತಿ, ಅಂತಃಕರಣಗಳನ್ನು ನಿರಾಕರಿಸುತ್ತವೆ. ಹೀಗಾಗಿ ಲೇಖಕರ ಅಭಿಪ್ರಾಯವು ತೇಲಿಸುವ, ಮರೆಮಾಚುವ ರೀತಿಯಲ್ಲಿದ್ದು, ಬಹುಶಃ ಅಸ್ಪೃಶ್ಯತೆಯ ಅನುಭವಗಳು ಲೇಖಕರಿಗೆ ಅನುಭವಕ್ಕೆ ಬಂದಿಲ್ಲದ ಕಾರಣವು ಈ ರೀತಿಯ ಅಭಿಪ್ರಾಯಕ್ಕೆ ಕಾರಣವಾಗಿರಬಹುದಾಗಿದೆ.

### ೮.೨. ವರ್ಗ: ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ

ವರ್ಗ ಅವಮಾನಗಳು ಸಾಮಾನ್ಯವಾಗಿ ಎಲ್ಲಾ ಜಾತಿಗಳಲ್ಲಿ ಕಾಣುವ ಸಾಮಾನ್ಯ ಸಂಗತಿಯಾದರೂ, ಎಲ್ಲಾ ಸಮುದಾಯಗಳಿಗೂ ಒಂದೇ ರೀತಿಯಲ್ಲಿ ಆಗುವುದಿಲ್ಲ. ಪ್ರಸ್ತುತ ಅಧ್ಯಾಯದಲ್ಲಿ ಇಂತಹ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ.

**೮.೨.೧.** ಸಾಂಸ್ಕೃತಿಕ, ಆರ್ಥಿಕ ಶ್ರೇಷ್ಠತೆ ಮತ್ತು ಕನಿಷ್ಠತೆ: ಭಾರತೀಯ ಸಮಾಜದಲ್ಲಿ ಕೆಲವು ಸಮುದಾಯಗಳಿಗೆ ಶ್ರೇಷ್ಠತೆಯ ಅವಕಾಶಗಳಿದ್ದರೂ, ಆರ್ಥಿಕ ಕನಿಷ್ಠತೆಯು ಅವಮಾನಗಳನ್ನುಂಟು ಮಾಡುತ್ತವೆ, ಸವರ್ಣೀಯರಿಗೆ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ನಂತರ ವರ್ಗ ಸಂಬಂಧಿ ಅವಮಾನಗಳು ಇಲ್ಲವಾದರೆ, ಅಸ್ಪೃಶ್ಯ ಸಮುದಾಯಗಳು ಆರ್ಥಿಕವಾಗಿ ಸಬಲರಾದರೂ ಸಾಮುದಾಯಿಕ ಅವಮಾನಗಳು ಅವರಿಗೆ ಕಾಡುತ್ತಲೇ ಇರುತ್ತವೆ.

ಅ. ಸಾಂಸ್ಕೃತಿಕ ಶ್ರೇಷ್ಠತೆ ಕುರಿತ 'ಭಿತ್ತಿ'ಯಲ್ಲಿನ ಒಂದು ಪ್ರಸ್ತಾವ ಹೀಗಿದೆ. "ಮೇಷ್ಟ್ರು ಇಲ್ಲಿ ಮಾಡ್ತೀನಿ ಅಂತ ಯಾರಿಗೂ ಹೇಳಬೇಡ. ಲಿಂಗಾಯತರ ಮನೇಲಿ ತಿಂತಾನೆ ಅಂತ ಗೊತ್ತಾಗಿ ಈಗ ವಾರ ಕೊಟ್ಟಿರೊ ಮನೆಯೋರು ತಪ್ಪಿಸಿ ಬಿಟ್ಟರೆ ಕಷ್ಟ. ಅಷ್ಟರಲ್ಲಿ ಬೇರೆ ಎಲ್ಲಾದರೂ ವಾರ ಸಿಕ್ಕಿದರೆ ನಮ್ಮ ಮನೇದ ಬಿಡು. ಒಟ್ಟಿನಲ್ಲಿ ನಮ್ಮದು ರಿಸರ್ವ್ ಜಾಗ ಅಂತ ತಿಳಕೊ"[೧೭] ಎಂದು ಬರುತ್ತದೆ.

ಆ. ಸಾಂಸ್ಕೃತಿಕ ಕನಿಷ್ಠತೆಯ ಕುರಿತ 'ಸಂಬೋಳಿ'ಯಲ್ಲಿ ಲೇಖಕರು "ನಮ್ಮೂರ ಒಕ್ಕಲಗಿರ ಹಟ್ಟಿಗೆ ಮಾತ್ರ ನಾವು ಉಪಾಧಾನ್ಕೆ ಹೋಗ್ತಿರಲಿಲ್ಲ. ನನ್ನ ದೊಡ್ಡಪ್ಪ ಚಿಕ್ಕುಡುಗನಿದ್ದಾಗ ಒಂದ್ಸಾತಿ ಒಕ್ಕಲಿಗರಟ್ಟಿಗೆ ಹೋಗ್ಬುಟ್ಟಿದ್ನಂತೆ, ಯಾರ್ದೋ ಮನೆ ಬಾಗ್ಲಾಗೆ ನಿಂತ್ಕಂಡು 'ಶ್ರೀಮನ್ ನಾರಾಯ್ಣ ಗೋವಿಂದಾ ಗೋವಿಂದಾ' ಅಂದಿದ್ನಂತೆ ಯಾರೋ ಒಕ್ಕಲಿಗಿರವ್ನು ಆಚ್ಗೆ ಬಂದು ದೊಡ್ಡಪ್ನ ಕಣ್ತುಂಬ ನೋಡಿ ಒಳಕೊಗಿ ಒಂದು ಸುಳ್ಟೆಕಡ್ಡಿ ತಕಂಡ್ಬಂದು ಚೆನ್ನಾಗಿ ಚಚ್ಚಿದ್ನಂತೆ"[೧೮] ಎಂದು ಬರೆದುಕೊಳ್ಳುತ್ತಾರೆ.

ಮೇಲಿನ ಎರಡೂ ಸನ್ನಿವೇಶಗಳನ್ನು ವಿಶ್ಲೇಷಿಸಿದಾಗ ಸವರ್ಣೀಯರಾದ ಎಸ್.ಎಲ್.ಭೈರಪ್ಪ ಅವರು, ಅಸ್ಪೃಶ್ಯರಾದ ಲಕ್ಷ್ಮಣ್ ಅವರು ಹಸಿವಿನ ಬಡತನವನ್ನು ಅನುಭವಿಸಿರುವುದು ಕಂಡುಬರುತ್ತದೆ. ಆದರೂ ಇಲ್ಲಿ ಗಮನಿಸಲೇಬೇಕಾದ ಸಂಗತಿಯೊಂದಿದೆ. ಭೈರಪ್ಪ ಅವರಿಗೆ ಬ್ರಾಹ್ಮಣೇತರ ಕುಟುಂಬಗಳು ವಾರಾನ್ನ ನೀಡಿ ಹಸಿವನ್ನು ಅಲ್ಪಮಟ್ಟಿಗೆ ನೀಗಿಸುವ ಪ್ರಯತ್ನವಾದರೂ ಮಾಡಿವೆ. ಬ್ರಾಹ್ಮಣರಿಗೆ ಊಟ ಹಾಕುವುದರಿಂದ ತಮಗೆ ಶ್ರೇಷ್ಠತೆಯ ಭಾವ ಉಂಟಾಗುವುದೆಂಬ ಪಾರಂಪರಿಕ 'ನಂಬಿಕೆ'ಗಳು ವಾರಾನ್ನ ದೊರೆಯುವುದಕ್ಕೆ ಕಾರಣವಾಗಿವೆ. ಇದರ ಜೊತೆಗೆ ಬ್ರಾಹ್ಮಣರು ತಮಗಿಂತ ತಳ ಸಮುದಾಯಗಳ ಮನೆಗೆ ಊಟ ಮಾಡಬಾರದೆಂಬ ಮಡಿವಂತಿಕೆ 'ಲಿಂಗಾಯತರ ಮನೇಲಿ ತಿಂತಾನೆ ಅಂತ ಯಾರಿಗೂ ಹೇಳಬೇಡ' ಎನ್ನುವ ಮಾತಿನಲ್ಲಿ ಸ್ಪಷ್ಟವಾಗಿದೆ. ಇವೆರಡೂ ಜಾತಿ ವ್ಯವಸ್ಥೆಯ ಹೈರಾರ್ಕಿಯ ಫಲಗಳಾಗಿದ್ದು, ಎಸ್.ಎಲ್ ಭೈರಪ್ಪ ಅವರಿಗೆ ಇಲ್ಲಿ ಲಭ್ಯವಾಗಿರುವುದು ಸಾಂಸ್ಕೃತಿಕ, ಸಾಮಾಜಿಕ ಶ್ರೇಷ್ಠತೆಯಾಗಿದೆ. ಈ ಕಾರಣಗಳಿಗಾಗಿಯೇ ಅವರಿಗೆ ಹಸಿವನ್ನು ನೀಗಿಸಿಕೊಳ್ಳಲು ಹಲವು ಅವಕಾಶಗಳು ದೊರೆತಿವೆ. ಇದೇ ರೀತಿಯ ಹಸಿವು ನೀಗಿಸಿಕೊಳ್ಳುವ ಅವಕಾಶ ಅಸ್ಪೃಶ್ಯರಿಗೆ ಲಭ್ಯವಾಗದೆ ಹಲ್ಲೆಗೆ ಒಳಗಾಗುವುದು ಕಂಡುಬರುತ್ತದೆ. ಭೈರಪ್ಪ ಅವರಿಗೆ ಇರುವ ಸಾಮಾಜಿಕ ಶ್ರೇಷ್ಠತೆಗಳು ಅಸ್ಪೃಶ್ಯರಿಗಿಲ್ಲದೆ, ಅಸ್ಪೃಶ್ಯರು ಬೇಡುವುದನ್ನು ಸಹ 'ಮೇಲ್ಜಾತಿಗಳು' ಸಹಿಸದಂತೆ ಮಾಡಿವೆ. ಇಲ್ಲಿ ಅಸ್ಪೃಶ್ಯರಿಗೆ ಲಭ್ಯವಾಗಿರುವುದು ಸಾಂಸ್ಕೃತಿಕ ಮತ್ತು ಆರ್ಥಿಕ ಕನಿಷ್ಠತೆಗಳು ಈ ವ್ಯತ್ಯಾಸಗಳನ್ನು ಆತ್ಮಕಥೆಗಳು ಬಹಳ ನಿಚ್ಚಳವಾಗಿ ಮಂಡಿಸುತ್ತವೆ.

ಅ. 'ಭಿತ್ತಿ'ಯಲ್ಲಿ "ಶನಿವಾರ ಒಬ್ಬರ ಮನೆಗೆ ಭಿಕ್ಷಾನ್ನಕ್ಕೆ ಹೋದಾಗ 'ಒಂದು ಹಿಡಿ ಅನ್ನ ಮೇಲೆ ಸಾರು. ಅರ್ಧ ಹಿಡಿ ಅನ್ನದ ನಂತರ ಮಜ್ಜಿಗೆ. ಅಪ್ಪ ಸತ್ತರೂ ತಡಕೊಳ್ಳಬಹುದು ಅರೆ

ಹೊಟ್ಟೆ ತಡಕೊಳ್ಳುವುದು ಕಷ್ಟ ಎಂಬ ಗಾದೆ ನಿಜವಾಯಿತು.' ಇನ್ನೊಂದಿಷ್ಟು ಅನ್ನ ಅಂದೆ' 'ಹಾಕಿದ್ದೆನಲ್ಲ, ಮಜ್ಜಿಗೆಗೆ ಅಂತ ಏನಾಯ್ತು? ಎಂದರು.' ನಾನು ಉತ್ತರ ಹೇಳಲಿಲ್ಲ. ಆಕೆ ಒಳಗೆ ಹೋಗಿ ಇನ್ನರ್ಧ ಹಿಡಿ ಅನ್ನ ತಂದು ಹಾಕಿ ಮಜ್ಜಿಗೆ ಬಡಿಸಿದರು. ನಾನು ತಿಂದ ಮೇಲೆ ಗೋಮಯ ಹಾಕಿ ಹೋಗಿ ಬರ್ತಿನಿ ಎಂದಾಗ 'ಮುಂದಿನ ವಾರದಿಂದ ನಮ್ಮ ಮನೆಗೆ ಬರಬೇಡ. ಬೇರೆ ಕಡೆ ನೋಡಿಕೊ"[೧೯] ಎಂದು ನಿಂದಿಸುವ ವಿವರಗಳಿವೆ.

**ಆ.** 'ಮಣೆಗಾರ'ದಲ್ಲಿ ಸಾಂಸ್ಕೃತಿಕ ಕನಿಷ್ಠತೆ ಕುರಿತ ಸನ್ನಿವೇಶಕ್ಕೆ ಸಂಬಂಧಿಸಿದಂತೆ ಲೇಖಕರು "ಅಸ್ಪೃಶ್ಯರ ಮೊದಲ ಮಂತ್ರಿ ಚೆನ್ನಿಗರಾಮಯ್ಯನವರು ಮೈಸೂರು ಚಾಮುಂಡಿ ಬೆಟ್ಟ ದೇವಸ್ಥಾನಕ್ಕೆ ಹೋದಾಗ ಅಲ್ಲಿನ ಜಾತಿವಾದಿಗಳು ಅವರು ಪ್ರವೇಶಿಸಿದಂತೆ ತಡೆದರು"[೨೦] ಎಂದು ಬರೆಯುತ್ತಾರೆ.

ಮೇಲೆ ಉಲ್ಲೇಖವಾಗಿರುವ ಮೊದಲ ಸನ್ನಿವೇಶವು ಆರ್ಥಿಕ ಕನಿಷ್ಠತೆಯ ಕಾರಣಕ್ಕೆ ಎಸ್.ಎಲ್. ಭೈರಪ್ಪ ಅವರು ಅವಮಾನ ಅನುಭವಿಸುವುದನ್ನು ಮತ್ತು ಆರ್ಥಿಕ ಪರಿಸ್ಥಿತಿ ಸುಧಾರಿಸಿದ ನಂತರ ಅವಮಾನಗಳು ಇಳಿಮುಖವಾಗುವುದನ್ನು ಸೂಚಿಸಿದರೆ, ಅಸ್ಪೃಶ್ಯರು ಆರ್ಥಿಕವಾಗಿ ಸಬಲರಾದರೂ ಸಾಂಸ್ಕೃತಿಕ ಕನಿಷ್ಠತೆಯ ಕಾರಣದಿಂದ ಅಪಮಾನಕ್ಕೆ ಒಳಗಾಗುವುದನ್ನು ಎರಡನೆಯ ಸನ್ನಿವೇಶದಲ್ಲಿ ಕಾಣಬಹುದಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿರುವ ಮೇಲ್ಜಾತಿ ಶ್ರೇಷ್ಠತೆ ಹಾಗೂ ಕೆಳಜಾತಿ ಕನಿಷ್ಠತೆಗಳು ವರ್ಗ ಅಪಮಾನಗಳ ಮೇಲೆಯೂ ಪ್ರಭಾವ ಬೀರಿರುವುದನ್ನು ಆತ್ಮಕಥೆಗಳಲ್ಲಿ ಗುರುತಿಸಬಹುದಾಗಿದೆ.

**೮.೨.೨. ಕಾಲ, ಪ್ರಜ್ಞೆ ಮತ್ತು ಸಂಘಟನೆಯ ಪ್ರಭಾವಗಳು:** ಅವಮಾನಗಳಿಗೆ ಮುಖಾಮುಖಿಯಾಗುವವರ ವೈಚಾರಿಕ ಮತ್ತು ಸಂಘಟನಾತ್ಮಕ ಹಿನ್ನೆಲೆಗಳು ಅವರು ತೋರುವ ಪ್ರತಿರೋಧದ ವಿಧಾನಗಳನ್ನು ನಿರ್ಧರಿಸುತ್ತವೆ.

**ಅ.** ಅವಮಾನಗಳಿಗೆ ವ್ಯಕ್ತಿಗಳು ತೋರುವ ಪ್ರತಿಕ್ರಿಯೆಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿ ಇರುವುದು ಸಹಜವಾದರು ಒಂದೇ ವ್ಯಕ್ತಿಯಲ್ಲೂ ಅದು ಭಿನ್ನವಾಗಿ ಕಾಣಲು ಸಾಧ್ಯವಿದೆ. ಬಾಲ್ಯದ ದಿನಗಳಲ್ಲಿ ಭೈರಪ್ಪ ಅವರು ಅಸಹಾಯಕರಾಗಿದ್ದರೆ, ಬಾಲ್ಯದ ನಂತರದ ದಿನಗಳಲ್ಲಿ ಪ್ರತಿರೋಧ ತೋರುವ ಸಂಗತಿ 'ಭಿತ್ತಿ'ಯಲ್ಲಿ ಕೆಳಗಿನಂತಿವೆ. ಭೈರಪ್ಪನವರ ತಾಯಿಯ ಸಹಕಾರದಿಂದಲೇ ಸಂಪಮ್ಮ ತನ್ನ ಮಗುವನ್ನು ಉಳಿಸಿಕೊಂಡಿರುತ್ತಾಳೆ. ಭೈರಪ್ಪ ಅವರು ಕಷ್ಟದಲ್ಲಿರುವಾಗ ಇದೇ ಸಂಪಮ್ಮ ಸಹಾಯ ಮಾಡದೆ ಅವಮಾನ ಮಾಡುವುದು ಕಂಡುಬರುತ್ತದೆ. ಈ ಅವಮಾನವನ್ನು ಭೈರಪ್ಪ ಅವರು ಸಹಿಸಿಕೊಂಡರೆ ಅದೇ ಭೈರಪ್ಪನವರ ಅಜ್ಜಿ ಹಿಟ್ಟನ್ನು ಕೊಡದ ಸಂಪಮ್ಮಳಿಗೆ "ನಿನ್ನ ಹಿರೀಮಗನ್ನ ಮಾರಮ್ಮ ತಿಂದ್ಕಂಡು ಹೋಗಲಿ"[೨೧] ಎಂದು ಶಾಪ ಹಾಕುವ ಸನ್ನಿವೇಶವಿದೆ. ಇಲ್ಲಿ ಅವಮಾನಕ್ಕೆ ಪ್ರತಿರೋಧ ತೋರಿದ್ದನ್ನು ಗಮನಿಸಬಹುದು. ಬಾಲ್ಯದ ಅಸಹಾಯಕತೆಯು ವಯಸ್ಸಿನಲ್ಲಿ ಚಿಕ್ಕವರಾದ ಭೈರಪ್ಪ ಅವರು ಅವಮಾನವನ್ನು ಸಹಿಸಿಕೊಳ್ಳಲು ಕಾರಣವಾದರೆ,

ಅರಿವು ಮತ್ತು ಅನುಭವ ಹಿರಿಯಳಾದ ಅಜ್ಜಿ ಅವಮಾನಕ್ಕೆ ತಕ್ಕ ಪ್ರತಿರೋಧ ತೋರುವುದಕ್ಕೆ ಕಾರಣವಾಗಿದೆ.

ಇದೇ ಆತ್ಮಕಥೆಯಲ್ಲಿ ಲೇಖಕರು "ನೀನು ಈಗಿಂದೀಗ ನೌಕರಿ ಬಿಟ್ಟು ನಡಿ ಎಂದರು. ಹಂಗನ್ನಲಿಕ್ಕೆ ಬರೊದಿಲ್ಲರಿ ಎಂದೆ. ನಾನು ಹುಬ್ಬಳ್ಳಿಗೆ ಹೋಗಿ ಲೇಬರ್ ಆಫೀಸಿನಲ್ಲಿ ಕಂಪ್ಲೇಂಟ್ ಮಾಡಬೇಕಾಗ್ತದೆ. ಹೋಟೆಲ್ ನೌಕರರ ಸಂಘಕ್ಕೂ ತಿಳಿಸಿ ಸ್ಟ್ರೈಕ್ ಮಾಡಿಸಬೇಕಾಗುತ್ತದೆ. ಎಂದೆ. ಇವರಿಗೆ ಬುದ್ದಿ ಕಲಿಸಲು ರೈಲು ಹತ್ತಿ ಹುಬ್ಬಳ್ಳಿಗೆ ಹೋದೆ. ಲೇಬರ್ ಅಧಿಕಾರಿಗಳ ಕಛೇರಿಗೆ ಹೋದೆ. ಅರ್ಜಿ ಬರೆದು ಕೊಟ್ಟು ಬಂದೆ"[೨೨] ಎಂದು ಬರೆದುಕೊಳ್ಳುತ್ತಾರೆ ಬಾಲ್ಯದಲ್ಲಿ ಅವಮಾನವನ್ನು ಸಹಿಸಿಕೊಂಡ ಭೈರಪ್ಪ ಅವರು ರಾಣೇಬೆನ್ನೂರಿನ ಹೋಟೆಲ್ನಲ್ಲಿ ಮಾಲಿಕನಿಂದ ಆದ ಅವಮಾನವನ್ನು ಧಿಕ್ಕರಿಸಿ ಹೋಗಿ ದೂರು ನೀಡಿದ್ದು ಪ್ರತಿರೋಧವಾಗಿದೆ. ಈ ರೀತಿಯ ಬದಲಾವಣೆಗೆ ಕೇವಲ ವಯಸ್ಸಿನಲ್ಲಿ ಆಗಿರುವ ಬದಲಾವಣೆಯಷ್ಟೇ ಕಾರಣವಲ್ಲ ಇದರ ಜೊತೆಗೆ ಭೈರಪ್ಪ ಅವರ ಪ್ರಜ್ಞೆ ಹಾಗೂ ಕಾನೂನಿನ ತಿಳುವಳಿಕೆಯಲ್ಲಾಗಿರುವ ಬದಲಾವಣೆ ಕೂಡ ಕಾರಣವಾಗಿದೆ.

ಆ. ವೈಚಾರಿಕತೆ, ಸಂಘಟನೆಯ ಕೊರತೆಗಳು ಮತ್ತು ಪ್ರಭಾವಗಳು: ಲಕ್ಷ್ಮಣ ಗಾಯಕವಾಡರ 'ಉಚಲ್ಯಾ'ದಲ್ಲಿ ಕಾಲ ಮತ್ತು ಪ್ರಜ್ಞೆ ಹೇಗೆ ಪ್ರತಿರೋಧವನ್ನು ಭಿನ್ನ ಭಿನ್ನವಾಗಿಸುತ್ತವೆ ಎಂಬುದಕ್ಕೆ ಕೆಳಗಿನ ಸನ್ನಿವೇಶಗಳನ್ನು ಉದಾಹರಣೆಯಾಗಿ ನೋಡಬಹುದು. ಕಾರ್ಖಾನೆಗಳಲ್ಲಿ ಕಾರ್ಮಿಕರಿಗೆ ಸೂಪರ್‌ವೈಜರ್ ಹಲ್ಲೆ ನಡೆಸುತ್ತ ಪ್ರಾಣಿಗಿಂತಲೂ ಕಡೆಯಾಗಿ ನೋಡಿಕೊಳ್ಳುವ ಸನ್ನಿವೇಶದ ಕುರಿತು ಲೇಖಕರು "ಗಂಡನಿಂದ ಹೊಡೆತ ತಿನ್ನುವ ಹೆಂಡತಿಯಂತೆ ನಮ್ಮ ಗತಿಯಾಯಿತು. ಸೂಪರವೈಜರ ನಮ್ಮನ್ನು ಹೆಂಡತಿಗೆ ಹೊಡೆಯುವಂತೆ ಹೊಡೆಯುತ್ತಿದ್ದ. ಅಶ್ಲೀಲವಾಗಿ ಬೈಯುತ್ತಿದ್ದ. ಊಟ ಮುಗಿಸಿ ಬರಲು ವೇಳೆಯಾದರೆ ಹಸಿ ಬರಲಿನಿಂದ ಥಳಿಸುತ್ತಿದ್ದ. ಇಂಥ ಎಷ್ಟೋ ಅನ್ಯಾಯಗಳು ನೂಲಿನ ಗಿರಣಿಯಲ್ಲಿ ನಡೆಯುತ್ತಿತ್ತು"[೨೩] ಎಂದು ಹತಾಶೆ ವ್ಯಕ್ತಪಡಿಸುತ್ತಾರೆ.

ಇದೇ ಆತ್ಮಕಥೆಯಲ್ಲಿ "ನಮ್ಮ ಮೇಲಿನ ಶೋಷಣೆಯನ್ನು ವಿರೋಧಿಸಿ ಕಾರ್ಮಿಕರೆಲ್ಲ ಪ್ರಚಂಡ ಒಗ್ಗಟ್ಟಾಗಿ ಸಂಪಿನಲ್ಲಿ ಭಾಗವಹಿಸಿದೆವು. ಹದಿನೈದು ದಿನಗಳವರೆಗೆ ಸತತವಾಗಿ ಸಂಪು ಮುಂದುವರೆಯಿತು...ಕಾರ್ಮಿಕರ ಸಂಪು ಮುರಿಯುವ ಎಲ್ಲ ಪ್ರಯತ್ನ ನಡೆಯಿತು... ಮತ್ತಷ್ಟು ಕಾರ್ಮಿಕರಿಗೆ ಉಪವಾಸ ಸತ್ಯಾಗ್ರಹ ಆರಂಭಿಸುವಂತೆ ನಾನು ಕಾರ್ಮಿಕರಿಗೆ ಸೂಚಿಸಿದೆ.......ಶಿವಾಜಿ ಪಾಟೀಲ ತುಂಬಾ ಧಾಡಸಿ ಮನುಷ್ಯ; ಅವನು 'ಯಾರಿಗಾದರೂ ಹೆಚ್ಚು ಕಡಿಮೆ ಆತ ಅಂದರ ನಾವು ನಿಮ್ಮನ್ನು ಬಿಡಂಗಿಲ್ಲ.' ಎಂದು ಮೇನೇಜರಿಗೆ ಎಚ್ಚರಿಕೆ ನೀಡಿದ. ಸಾವಿರಾರು ಕಾರ್ಮಿಕರು ಮೇನೇಜರನ ಮನೆಗೆ ಕೆರಳಿ ಭೇಟಿ ಕೊಡಲಾರಂಭಿಸಿದರು"[೨೪] ಎನ್ನುವ ವಿವರಗಳಿವೆ.

ಮೇಲೆ ಉಲ್ಲೇಖಿಸಿರುವ ಮೊದಲ ಸನ್ನಿವೇಶದಲ್ಲಿ ಕಾರ್ಮಿಕರು ವರ್ಗ ಅವಮಾನವನ್ನು ಸಹಿಸುವ ಚಿತ್ರಣವಿದ್ದರೆ, ಎರಡನೆಯ ಸನ್ನಿವೇಶವು ಇವೇ ಅವಮಾನಗಳನ್ನು ಪ್ರತಿರೋಧಿಸುವ

ಸಂಗತಿಗಳನ್ನು ಒಳಗೊಂಡಿದೆ. ಈ ಭಿನ್ನತೆಗೆ ಕಾರಣಗಳು ಹೀಗಿವೆ: ಸ್ವಾತಂತ್ರ್ಯ ಸಿಗುವುದಕ್ಕೂ ಮೊದಲು ದಲಿತರು ಅನಕ್ಷರತೆ, ಕಾನೂನಿನ ಅರಿವಿಲ್ಲದಿರುವುದು ಹಾಗೂ ಇನ್ನಿತರ ಕಾರಣಗಳಿಗೆ ಅವಮಾನಗಳನ್ನು ಪ್ರತಿರೋಧಿಸದೆ ಇದ್ದರೆ; ಸ್ವಾತಂತ್ರ್ಯ ಸಿಕ್ಕ ನಂತರ ಶಿಕ್ಷಣ, ವೈಚಾರಿಕ ಬದುಕಿಗೆ ತೆರೆದುಕೊಂಡ ಕಾರಣ ಅವಮಾನಗಳನ್ನು ಪ್ರತಿರೋಧಿಸುವುದನ್ನು ಗುರುತಿಸಬಹುದು. ಈ ಕಾರಣಗಳಿಗಾಗಿಯೇ ವೈಚಾರಿಕ ಪ್ರಜ್ಞೆಯ ಲಕ್ಷ್ಮಣ ಗಾಯಕವಾಡ ಹಾಗೂ ಇತರೆ ಕಾರ್ಮಿಕರು ಸೇರಿ ಸಂಘಟಕರಾಗಿ ಹೋರಾಟ ಮಾಡಿ ಯಶಸ್ವಿಯಾಗಿದ್ದಾರೆ. ಇಲ್ಲಿ ಕಾರ್ಮಿಕರು ಸಂಘಟಿತರಾಗಿರುವುದು ಪ್ರತಿರೋಧಕ್ಕೆ ಮತ್ತಷ್ಟು ಬಲ ತಂದಿದೆ. ವ್ಯಕ್ತಿ ಒಬ್ಬನೇ ಇದ್ದಾಗ ಅವಮಾನವನ್ನು ಸಹಿಸುವುದೇ ಹೆಚ್ಚು ಅದೇ ಸಂಘಟನೆಯೊಂದಿಗೆ ಬೆರೆತಾಗ ಅದು ಹೋರಾಟಕ್ಕೆ ಮುನ್ನುಡಿಯಾಗುತ್ತದೆ. ಹೀಗೆ ಕಾರ್ಮಿಕ ಸಮುದಾಯಗಳ ಶೋಷಿತ ಬದುಕು, ಪ್ರತಿರೋಧಗಳ ಮೂಲಕ ಸ್ಥಿತ್ಯಂತರಗೊಳ್ಳುವುದನ್ನು ಆತ್ಮಕಥೆಯು ಕಾಣಿಸುತ್ತದೆ.

**೮.೨.೩.** ವೈರುಧ್ಯ ನಿಲುವುಗಳು: ಪ್ರಭುತ್ವ ಕುರಿತಾದ ಧೋರಣೆಯು ದಲಿತ ಆತ್ಮಕಥೆಗಳಲ್ಲಿ ಏಕಮುಖವಾಗಿಲ್ಲ ಬದಲಿಗೆ ವೈರುಧ್ಯಗಳಿಂದ ಕೂಡಿದೆ. ಸಿದ್ಧಲಿಂಗಯ್ಯ ಅವರು ತಮ್ಮ ಆತ್ಮಕಥೆಯನ್ನು ರಾಮಕೃಷ್ಣ ಹೆಗಡೆಯವರಿಗೆ ಅರ್ಪಣೆ ಮಾಡಿದ್ದರೆ, 'ಮಣೆಗಾರ'ದಲ್ಲಿ ದಲಿತರು ಹೆಗಡೆಯವರ ಆಡಳಿತದ ವಿರುದ್ಧ ಪ್ರತಿಭಟನೆ ಮಾಡುವ ವಿವರಗಳು ಹೀಗಿವೆ. "೧೯೮೩ ನೇ ಇಸವಿಯಲ್ಲಿ ರಾಮಕೃಷ್ಣ ಹೆಗಡೆ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ಆಗ ರಾಜ್ಯದಲ್ಲಿ ದಲಿತರ ಮೇಲೆ ನಡೆಯುತ್ತಿದ್ದ ಹಲ್ಲೆ, ದೌರ್ಜನ್ಯಗಳು ಎಲ್ಲೆ ಮೀರಿದ್ದವು. ನಾವೆಲ್ಲರು ಸೇರಿ ಮುಖ್ಯಮಂತ್ರಿಯವರ ಮನೆ ಮುಂದೆ ಪ್ರತಿಭಟನೆ ಮಾಡುತ್ತಿದ್ದಾಗ, ಮುಖ್ಯಮಂತ್ರಿಯವರು ತಮ್ಮ ಮನೆಯ ಹಿಂಬಾಗಿಲಿನಿಂದ ಹೊರಬಿದ್ದು ವಿಧಾನಸೌಧ ತಲುಪಿಯಾಗಿತ್ತು."[೨೫] ಸಿದ್ಧಲಿಂಗಯ್ಯ ಅವರು ಕೇವಲ ಸಾಹಿತಿ, ಹೋರಾಟಗಾರರಿಗೆ ಮಾತ್ರ ಬದುಕಿದವರಲ್ಲ, ವಿಧಾನ ಪರಿಷತ್ತಿನ ಸದಸ್ಯರು ಆಗಿದ್ದರು. ಅವರ 'ವೈಯಕ್ತಿಕ ಹಿತಾಸಕ್ತಿ'ಗಳಿಗಾಗಿಯೋ ಅಥವಾ ಹೆಗಡೆಯವರು ಸಮುದಾಯದ ಪರ ಕೆಲಸ ಮಾಡಿರಬಹುದಾದ ಸಾಧ್ಯತೆಗಳಿರುವುದಕ್ಕಾಗಿಯೋ ರಾಮಕೃಷ್ಣ ಹೆಗಡೆಯವರಿಗೆ ಸಿದ್ಧಲಿಂಗಯ್ಯ ಅವರು ಆತ್ಮಕಥೆಯನ್ನು ಅರ್ಪಣೆ ಮಾಡಿದ್ದಾರೆ. 'ಮಣೆಗಾರ'ದಲ್ಲಿ ರಾಮಕೃಷ್ಣ ಹೆಗಡೆಯವರ ಆಡಳಿತದಲ್ಲಿನ ದಲಿತ ವಿರೋಧಿ ನೀತಿಯ ಕಾರಣ ಪ್ರತಿಭಟನೆ ಮಾಡಿರುವುದು ಕಂಡುಬರುತ್ತದೆ. ಇಲ್ಲಿ ಬಹುತೇಕ ಅಸ್ಪೃಶ್ಯರು ರಾಮಕೃಷ್ಣ ಹೆಗಡೆಯವರ ಆಡಳಿತದಲ್ಲಿ ದಲಿತರ ಮೇಲಿನ ದೌರ್ಜನ್ಯಗಳನ್ನು ಕಡೆಗಣಿಸಿದ್ದಕ್ಕಾಗಿ ಹೋರಾಟ ಮಾಡುತ್ತಾರೆ. ಮೇಲಾಗಿ ಈ ಹೋರಾಟದಲ್ಲಿ ಪ್ರೊ ಬಿ. ಕೃಷ್ಣಪ್ಪನವರು ಇರುವುದು ಇದನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತದೆ.

**೮.೨.೪.** ಸಾಮಾಜಿಕ, ಆರ್ಥಿಕ, ಪ್ರಾದೇಶಿಕ ಹಿನ್ನೆಲೆಗಳು ಮತ್ತು ಅವುಗಳ ಪ್ರಭಾವಗಳು: ಸಾಮಾಜಿಕವಾಗಿ ಜಾತಿ, ಆರ್ಥಿಕವಾಗಿ ಬಡತನ, ಪ್ರಾದೇಶಿಕವಾಗಿ ಹಳ್ಳಿ ಮತ್ತು ನಗರ ಕೇಂದ್ರಿತ ಸನ್ನಿವೇಶಗಳು ಅವಮಾನ ಮತ್ತು ಪ್ರತಿರೋಧಗಳನ್ನು ಪ್ರಭಾವಿಸುತ್ತವೆ ಮತ್ತು ಭಿನ್ನವಾಗಿಸುತ್ತವೆ.

ಅ. ಗ್ರಾಮೀಣ ಭಾಗದಲ್ಲಿನ ಜಾತಿ ಮತ್ತು ವರ್ಗ ಕೇಂದ್ರಿತ ಅವಮಾನಗಳು: ವರ್ಗ ಮತ್ತು ಜಾತಿ ಒಂದಕ್ಕೊಂದು ಅಂತರ್‌ಸಂಬಂಧ ಹೊಂದಿದ್ದು, ಜಾತಿ ಮತ್ತು ವರ್ಗಗಳೆರಡು ಶ್ರೇಷ್ಠ-ಕನಿಷ್ಠತೆಯ ವ್ಯಸನಗಳನ್ನು ಒಳಗೊಂಡಿವೆ. ಕನ್ನಡ ಆತ್ಮಕಥೆಗಳನ್ನು ಗಮನಿಸಿದಾಗ ನಗರಗಳಿಗೆ ಹೋಲಿಸಿದರೆ ಗ್ರಾಮೀಣ ಬದುಕಿನಲ್ಲಿಯೇ ಜಾತಿ ಮತ್ತು ವರ್ಗ ಕೇಂದ್ರಿತ ಅವಮಾನಗಳು ಹೆಚ್ಚಾಗಿ ಕಾಣಸಿಗುತ್ತವೆ. ಅದರಲ್ಲೂ ಅಸ್ಪೃಶ್ಯರಿಗೆ ಹೆಚ್ಚು ಅವಮಾನಗಳಾಗುತ್ತವೆ. ಲಕ್ಷ್ಮಣ್‌ರ 'ಸಂಬೋಳಿ'ಯಲ್ಲಿ 'ಕಹಿನೆನ್ಪು' ಪ್ರಸಂಗವನ್ನು ನೋಡಬಹುದು. ಲೇಖಕರು ಹುಣಸೆ ಹಣ್ಣನ್ನು ಕೀಳಲು ಹೋದಾಗ "ನಿಮ್ಮಮ್ಮುನ್ ಗಂಡನ ಜಮೀನ್ನಾಗೆ ಸಿಹಿ ಉಣಿಸೇ ಮರ ಬೆಳ್ದದೆ ಅಂತ ತಿಳ್ಕಂಡಿದ್ದಿರೇನೋ ಬೋಳಿಮಕ್ಳ."[೨೬] ಎಂದು ನಿಂದಿಸುವ, ಲೇಖಕರಿಗೆ ಹೊಡೆಯುವ ಸನ್ನಿವೇಶವಿದೆ.

'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಲೇಖಕರು ಹಸಿವನ್ನು ತೀರಿಸಿಕೊಳ್ಳವ ಸಲುವಾಗಿ ಹತ್ತಿಯನ್ನು ಕದಿಯಲು ಹೋದಾಗ ಸಿಕ್ಕಿಕೊಂಡ ಕಾರಣ ಮಾಲಿಕನಿಂದ ಹೀನಮಾನವಾಗಿ ಹೊಡೆಸಿಕೊಂಡು "ನಿಮ್ಮ ಹುಟ್ಟು ಗುಣಾ ಹ್ಯಾಂಗ ಬಿಟ್ಟೀರಿ?....ದನದ ಚರ್ಮಾ ಸುಲ್ದು ತೆಗ್ದಂಗ ನಿಮ್ಮಾ ಚರ್ಮಾ ಸುಲ್ದು ತಗೀಬೇಕು, ಅಂದ್ರೆ ಬಿಡ್ತೀರಿ......."[೨೭] ಎಂದು ನಿಂದನೆಗೆ ಒಳಗಾಗುವ ಸನ್ನಿವೇಶವಿದೆ. ಮೇಲಿನ ಘಟನೆಗಳನ್ನು ಗಮನಿಸಿದಾಗ ಎರಡು ಪ್ರಶ್ನೆಗಳು ಉದಯಿಸುತ್ತವೆ. ಅವುಗಳಲ್ಲಿ ಮೊದಲನೆಯದು ಅಸ್ಪೃಶ್ಯರಿಗೇ ಏಕೆ ಬಡತನ, ಹಸಿವು ಮತ್ತು ಜಾತಿ ತಾರತಮ್ಯದ ಅವಮಾನಗಳು ಹೆಚ್ಚಾಗಿ ಆಗುತ್ತವೆ ಎಂಬುದು. ಎರಡನೆಯದು ಈ ಅವಮಾನಗಳು ಗ್ರಾಮಗಳಲ್ಲೆ ಯಾಕೆ ಹೆಚ್ಚು ಕಂಡುಬರುತ್ತವೆ ಎನ್ನುವುದು. ಅಸ್ಪೃಶ್ಯರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಹುತೇಕ ಹಿಂದುಳಿದಿರುವವರೇ ಆಗಿದ್ದು, ಸಂಪತ್ತಿನ ಅಸಮಾನ ಹಂಚಿಕೆಯು ಅಸ್ಪೃಶ್ಯರಿಗೆ ಅವಮಾನಗಳನ್ನು ಸ್ಥಾಯಿಭಾವವನ್ನಾಗಿಸಿದೆ. ಗ್ರಾಮಗಳಲ್ಲಿ ಜಾತಿ ಆಧಾರಿತ ವೃತ್ತಿಗಳನ್ನು ನೋಡಬಹುದು ಉಳುಮೆ ಮಾಡಲು ಭೂಮಿ ಇರುವುದಿಲ್ಲ. ಇದ್ದರೂ ಬಂಡವಾಳವಿರುವುದಿಲ್ಲ. ಸಾಲದ ಪ್ರಮಾಣ ಹೆಚ್ಚು. ಜಮೀನ್ದಾರಿಕೆಯ ದರ್ಪ. ಇವುಗಳೆಲ್ಲ ಅಸ್ಪೃಶ್ಯರಿಗೆ ವರ್ಗದ ಕಾರಣಕ್ಕೆ ಅವಮಾನಗಳಾಗಲು ಕಾರಣಗಳಾಗಿವೆ. ಏಕೆಂದರೆ ಹಸಿವು ಜೈವಿಕ ಉತ್ಪನ್ನವಾದರೂ ಅಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸಂಗತಿಗಳು ಪ್ರಭಾವ ಬೀರಿರುತ್ತವೆ. 'ಹಳ್ಳಿಗಳು ಜಾತಿಯ ಬಿಲಗಳು' ಎಂಬ ಡಾ. ಬಿ.ಆರ್ ಅಂಬೇಡ್ಕರ್ ಅವರ ಅಭಿಪ್ರಾಯದಂತೆ ಗ್ರಾಮಗಳು ಜಾತಿ ವ್ಯವಸ್ಥೆಯು ಗಟ್ಟಿಯಾಗಿ ನೆಲೆಗೊಂಡಿರುವ ತಾಣವಾಗಿದೆ. ಇಲ್ಲಿ ಸವರ್ಣೀಯರಿಂದ ದಲಿತರು ಅವಮಾನಕ್ಕೆ ಒಳಗಾಗುತ್ತಾರೆ. ಕಾರಣವೇನೆಂದರೆ ಹಳ್ಳಿಗಳು ಜಮೀನ್ದಾರಿ ವ್ಯವಸ್ಥೆ ಮತ್ತು ಜಾತಿ ವ್ಯವಸ್ಥೆಯ ಅಡಿಪಾಯದ ಮೇಲೆ ರಚನೆಗೊಂಡಿರುತ್ತವೆ. ಮೇಲ್ಜಾತಿಯವರಿಗಿರುವ ಸಾಮಾಜಿಕ, ಆರ್ಥಿಕ ಭದ್ರತೆಯು ಅಸ್ಪೃಶ್ಯರಲ್ಲಿ ಇರುವುದಿಲ್ಲ. ಅಭದ್ರತೆಯ ಕಾರಣಕ್ಕಾಗಿ ಪ್ರತಿಯೊಂದಕ್ಕೂ ಮೇಲ್ವರ್ಗವನ್ನೇ ಅವಲಂಬಿಸಿರುವುದು ಪ್ರಮುಖ ಕಾರಣವಾಗಿವೆ. ಇವುಗಳ ಜೊತೆಗೆ ದಲಿತರಲ್ಲಿ ಶಿಕ್ಷಣ ಮತ್ತು ಸಂಘಟನೆಯ ಕೊರತೆಗಳನ್ನು ಕಾಣಬಹುದಾಗಿದೆ.

ನಗರಗಳಲ್ಲಿ ಜಾತಿಯು ಮುಚ್ಚಿದ ವ್ಯವಸ್ಥೆಯಲ್ಲಿ ಇದ್ದರೆ ಹಳ್ಳಿಗಳಲ್ಲಿ ಜಾತಿವ್ಯವಸ್ಥೆಯು ತೆರೆದ ವ್ಯವಸ್ಥೆಯಲ್ಲಿ ಇರುತ್ತದೆ. ಜಾತಿ ಕಾರಣಕ್ಕಾಗಿ ಆಗುವ ಅವಮಾನಗಳು ಜಾತಿಸೂಚಕ ನಿಂದನೆಗಳನ್ನು ಒಳಗೊಂಡಿರುತ್ತವೆ. ಹಳ್ಳಿಯ ಪ್ರತಿಯೋರ್ವ ವ್ಯಕ್ತಿಯು ಯಾವ ಜಾತಿಗೆ ಸೇರಿರುತ್ತಾನೆ ಎಂಬುದು ಅನೇಕರಿಗೆ ತಿಳಿದಿರುತ್ತದೆ. ಅದರಲ್ಲೂ ಉತ್ತರ ಕರ್ನಾಟಕದ ಹಳ್ಳಿಗಳಲ್ಲಂತೂ ವ್ಯಕ್ತಿಯ ಹೆಸರಿನೊಂದಿಗೆ ಜಾತಿ ಹೆಸರನ್ನು ಸೇರಿಸಿ ಮತ್ತು ಆ ಜಾತಿ ಹೆಸರಿನಿಂದಲೇ ಗುರುತಿಸುವುದನ್ನು ಕಾಣಬಹುದು. ಹೀಗಾಗಿ ಕೆಲವೊಮ್ಮೆ ಅವು ಬೈಗುಳವಾಗಿಯೂ ಕಂಡುಬರುತ್ತವೆ. ಉದಾಹರಣೆಗೆ 'ಸಂಬೋಳಿ'ಯಲ್ಲಿ "ನನ್ನ ಕೆರ‍್ಗಳ್ಳ ಡುಕಿ ಕೊಡುಬಾರೋ ಮಾದಿಗ್ನಮ್ಮಗ್ನೆ......."[೨೮] ಎನ್ನುವುದರಲ್ಲಿ ಮಾದಿಗ್ನಮ್ಮಗ್ನೆ ಎನ್ನುವುದು ಜಾತಿ ಸೂಚಕ ನಿಂದನೆಯಾಗಿದೆ. ಕನ್ನಡದ ಬಹುತೇಕ ಆತ್ಮಕಥೆಗಳು ತನ್ನೊಡಲೊಳಗೆ ಗ್ರಾಮೀಣ ಭಾಗದ ಬದುಕನ್ನು ಕಟ್ಟಿಕೊಂಡಿವೆ. ಆತ್ಮಕಥನಕಾರರ ಬಾಲ್ಯವು ಗ್ರಾಮೀಣ ಪ್ರದೇಶದ ವಿವರಗಳನ್ನೇ ಹೆಚ್ಚಾಗಿ ಒಳಗೊಂಡಿರುವುದು, ಇದರ ಜೊತೆಗೆ ಹಳ್ಳಿಗಳಲ್ಲಿ ಜಾತೀಯತೆಯ ತೀವ್ರವಾದ ಪ್ರಭಾವವಿರುವುದು ತಳಸಮುದಾಯಗಳು ಅವಮಾನ ಅನುಭವಿಸುವುದಕ್ಕೆ ಕಾರಣಗಳಾಗಿವೆ. ಹೀಗೆ ಹಲವು ಕಾರಣಗಳು ಅಸ್ಪೃಶ್ಯತೆಯು ಗ್ರಾಮಗಳಲ್ಲಿ ಹೆಚ್ಚು ಕಂಡುಬರುವುದಕ್ಕೆ ಮತ್ತು ಜಾತಿ ಸೂಚಕ ಅವಮಾನಗಳು, ಹಲ್ಲೆಗಳಾಗುವುದಕ್ಕೆ ಕಾರಣಗಳಾಗಿವೆ.

ಈ ಹಲ್ಲೆ, ಅವಮಾನಗಳಿಗೆ ಪ್ರತಿರೋಧ ತೋರದಿರಲು ಕಾರಣಗಳು ಇಂತಿವೆ. ದಮನಿತರಿಗೆ ಬಾಲ್ಯದ ದಿನಗಳಲ್ಲಿ ಹೆಚ್ಚು ವೈಚಾರಿಕ ಪ್ರಜ್ಞೆ ಕಂಡುಬರದಿರುವುದು. ಶಿಕ್ಷಣ, ಸಂಘಟನೆಯ ಕೊರತೆ, ಆರ್ಥಿಕ ಬಲವಿಲ್ಲದ ಕಾರಣ ಪ್ರತಿಯೊಂದಕ್ಕೂ ಮೇಲ್ಜಾತಿಯವರನ್ನೇ ಅವಲಂಬಿಸಿರುವುದು ಮತ್ತು ಅವರನ್ನು ಎದುರು ಹಾಕಿಕೊಳ್ಳಲು ಬೇಕಾದ ಸಾಮರ್ಥ್ಯವಿಲ್ಲದಿರುವುದು. ಹೀಗೆ ಹಲವು ಕಾರಣಗಳಿಗಾಗಿ ನೇರ ಪ್ರತಿರೋಧಗಳಿಲ್ಲದಿದ್ದರೂ, ಪರ್ಯಾಯ ಮಾದರಿಯಲ್ಲಿ ಪ್ರತಿರೋಧಗಳನ್ನು ತೀರಿಸಿಕೊಳ್ಳುವುದು ಆತ್ಮಕಥೆಗಳಲ್ಲಿ ಪ್ರಕಟಗೊಂಡಿವೆ. ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ 'ಹೆಣದ ದುಡ್ಡು ಮತ್ತು ಮದುವೆಯ ಊಟ' ಸನ್ನಿವೇಶದಲ್ಲಿ ದಲಿತರಿಗೆ ಆಹಾರಕ್ಕೆ ಸಂಬಂಧಿಸಿದಂತೆ ಇದ್ದ ನಿರ್ಬಂಧಗಳನ್ನು ಮೀರಿ, ಊಟವಿದ್ದ ದಿನ ಮಕ್ಕಳೆಲ್ಲರು ತಲೆಗೆ ಎಣ್ಣೆ ಹಚ್ಚಿಕೊಂಡು; ಊಟವಾಗಿ ಕೈ ತೊಳೆದ ಬಳಿಕ ಕೈಯನ್ನು ಎಣ್ಣೆ ಹಚ್ಚಿದ ತಲೆಗೆ ಸವರಿ, ನಂತರ ಬಣ್ಣದ ಡಬ್ಬಿಗೆ ಅದ್ದಿ ಕೈಯನ್ನು ಒರೆಸಿಕೊಂಡು ಮತ್ತೆ ಊಟ ಮಾಡುವುದು ಜಮೀನ್ದಾರಿ ವ್ಯವಸ್ಥೆಗೆ ತೋರಿದ ಪ್ರತಿರೋಧವಾಗಿದೆ. ಇಲ್ಲಿ ದಲಿತರು ಅಸಹಾಯಕ ಬದುಕಿನೊಳಗೂ ಕೂಡ ಅವಮಾನಿಸುವ ವ್ಯವಸ್ಥೆಗೆ ಪರ್ಯಾಯ ತಂತ್ರಗಳ ಮೂಲಕ ಪ್ರತಿರೋಧ ತೋರುವ ಸಂಗತಿ ಕಂಡುಬರುತ್ತದೆ.

**ಆ.** ನಗರ ಭಾಗದ ಜಾತಿ ಮತ್ತು ವರ್ಗ ಕೇಂದ್ರಿತ ಅವಮಾನ ಮತ್ತು ಪ್ರತಿರೋಧಗಳು: ನಗರಗಳಲ್ಲಿ ಜಾತಿ ಮತ್ತು ವರ್ಗದ ಕಾರಣಕ್ಕಾಗಿ ಆಗುವಂತಹ ಅವಮಾನಗಳ ಪ್ರಮಾಣ

ಗ್ರಾಮಗಳಿಗೆ ಹೋಲಿಸಿದರೆ ಕಡಿಮೆ ಪ್ರಮಾಣದಲ್ಲಿವೆ. ಅವಮಾನಗಳು ಪರೋಕ್ಷ ಮಾದರಿಯಲ್ಲಿದ್ದರೆ, ಪ್ರಜ್ಞೆಯ ಭಾಗವಾಗಿ ಪ್ರತಿರೋಧಗಳು ಕಂಡುಬರುತ್ತವೆ. ಉದಾಹರಣೆಗೆ 'ಸಂಬೋಳಿ'ಯಲ್ಲಿ ಲೇಖಕರು "ಪ್ಯಾಟಿಯಾಗೆ ಗುರ್ತು ಪರಿಚಯ ಇಲ್ದೋರತ್ರಾ ಜಾತಿ ಸುಳ್ಳು ಹೇಳ್ಬುಟ್ರೆ ನಮ್ಗೆ ಏನೂ ಕಷ್ಟ ಬರಲ್ಲ ಮತ್ತು ಪಟ್ಣದಾಗೆ ಗುರ್ತು ಪರಿಚಯ ಇಲ್ಲ ಕಡೆ ನಾವು ಎಲ್ಲರಂತೆ ಬದುಕಬಹುದೆಂಬ ಸತ್ಯಾಸತ್ಯತೆಯನ್ನು ನಾನು ಕಂಡ್ಕಂಡಿದ್ದೆ"[೨೯] ಎನ್ನುತ್ತಾರೆ.

ನಗರ ವ್ಯವಸ್ಥೆಯ ಬಗ್ಗೆ ಲಕ್ಷ್ಮಣ್ ರವರು ಹೇಳಿರುವ ಮೇಲಿನ ಮಾತುಗಳು ನಗರಗಳಲ್ಲಿನ ಜಾತಿ ವ್ಯವಸ್ಥೆಯ ಒಂದು ಮುಖವನ್ನು ತೋರಿಸುತ್ತದೆ. ನಗರಗಳಿಗೆ ವಲಸೆ ಬರುವುದು ಮತ್ತು ಜಾತಿಸೂಚಕ ಹೆಸರುಗಳು ಕಡಿಮೆ ಇರುವ ಕಾರಣ ಜಾತಿ ವ್ಯವಸ್ಥೆಯು ನಗರಗಳಲ್ಲಿ 'ಮುಚ್ಚಿದ' ಸ್ವರೂಪದಲ್ಲಿದ್ದರೂ ಬಾಡಿಗೆ ಮನೆ ಕೊಡುವಾಗ ಅಸ್ಪೃಶ್ಯರನ್ನು, ಮಾಂಸಾಹಾರಿಗಳನ್ನು ದೂರ ಇಡುವ ಸನ್ನಿವೇಶಗಳು ಕಂಡುಬರುತ್ತವೆ. ಬಾಡಿಗೆ ಮನೆ ಪಡೆಯುವಲ್ಲಿ ಲಕ್ಷ್ಮಣ ಗಾಯಕವಾಡ ಅವರ ಆತ್ಮಕಥೆಯಲ್ಲಿ ಜಾತಿ ಕಾರಣಕ್ಕಾಗಿ ಅವಮಾನ ಅನುಭವಿಸುವುದನ್ನು ಗಮನಿಸಬಹುದಾಗಿದೆ. ಮನೆ ಕಟ್ಟುವಾಗ ಇಲ್ಲದಿರುವ ಯಾವ ತಾರತಮ್ಯಗಳು ಗೃಹಪ್ರವೇಶ ಮಾಡಿದ ತಕ್ಷಣ ಅನ್ವಯವಾಗುವುದು ಮೂಢ ಮಡಿವಂತಿಕೆಯೇ ಆಗಿದೆ. ಇವುಗಳ ನಡುವೆಯೂ ನಗರಗಳಲ್ಲಿ ತಳಸಮುದಾಯಗಳು ಅಲ್ಪಮಟ್ಟಿಗೆ ಶಿಕ್ಷಣ ಪಡೆದ ಪರಿಣಾಮ ಮತ್ತು ಸಂಘಟನೆ, ಹೋರಾಟಗಳ ಸಂಪರ್ಕದಿಂದ ಅವಮಾನ ಮತ್ತು ಪ್ರತಿರೋಧದ ಪ್ರಜ್ಞೆ ಹಳ್ಳಿಗಳಿಗಿಂತ ಹೆಚ್ಚು ಕಂಡುಬರುತ್ತದೆ.

'ಮಣೆಗಾರ', 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಗಳಲ್ಲಿ ಗ್ರಾಮೀಣ ಬದುಕು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಜಾತಿ ಕಾರಣಕ್ಕಾಗಿ ಆಗುವಂತಹ ಅವಮಾನದ ಪ್ರಮಾಣ ಕೂಡ ಹೆಚ್ಚಾಗಿಯೇ ಇವೆ. 'ಊರುಕೇರಿ'ಯಲ್ಲಿ ನಗರಕೇಂದ್ರಿತ ಬದುಕು ಹೆಚ್ಚಾಗಿರುವುದರಿಂದ ಅವಮಾನದ ಪ್ರಮಾಣ ಕಡಿಮೆ ಪ್ರಮಾಣದಲ್ಲಿ ಕಾಣುತ್ತವೆ. ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ" ಆತ್ಮಕಥೆಯ ನಾಳಿನ ಕಸದ ಪಾಳಿ ಮಾಲಕತ್ತಿ' ಎಂಬ ಪ್ರಸಂಗದಲ್ಲಿ ದಲಿತ ಮಕ್ಕಳಿಗೆ ಮಾತ್ರ ಶಿಕ್ಷಣದಿಂದ ವಂಚಿಸುವ ಮತ್ತು "ಕತ್ತಿ.......ಕತ್ತಿನೇ......ಕತ್ತೇಲ್ಲರೆ ಕುದುರ್‍ಯಾಕ್ಕದೇನ"[೩೦] ಎಂದು ಮಾಲಗತ್ತಿಯವರಿಗೆ ಅವಮಾನಿಸಿದ ಪ್ರಸಂಗ ಹಳ್ಳಿಗಳಲ್ಲಿ ಕಂಡುಬರುತ್ತದೆ. ಆದರೆ ಇದೇ 'ಊರುಕೇರಿ' ಆತ್ಮಕಥೆಯಲ್ಲಿ ಈ ಬಗೆಯಲ್ಲಿ ಅವಮಾನ ಮಾಡುವ ಪರಿಕಲ್ಪನೆ ಅಷ್ಟಾಗಿ ಕಂಡುಬಂದಿಲ್ಲ. ಹೀಗೆ ಗ್ರಾಮ ಮತ್ತು ನಗರ ಬದುಕಿನಲ್ಲಿನ ಅವಮಾನ ಮತ್ತು ಪ್ರತಿರೋಧಗಳ ವ್ಯತ್ಯಾಸಗಳನ್ನು ಆತ್ಮಕಥೆಗಳು ಕಾಣಿಸುತ್ತವೆ.

'ಮಾತಂಗಿ ದೀವಟಿಗೆ'ಯಲ್ಲಿ ಸಮತಾ ಅವರು "ಸೂಪರ್ ಮಾರ್ಕೆಟ್‌ನ ಮೈದಾನದಲ್ಲಿ ಹರಿಯಾಣ ಕಾಟನ್ ಹ್ಯಾಂಡ್ ಲೂಮ್ ಬಟ್ಟೆ ಅಂಗಡಿ ಹಾಕಲಾಗಿತ್ತು. ಬಟ್ಟೆ ಮಾರಲು ಹುಡುಗಿಯರು ಬೇಕಾಗಿದ್ದಾರೆ ಎಂದಿತ್ತು....ಅಂದು ಹತ್ತು ರೂಪಾಯಿಗಾಗಿ ಇಡೀ ಒಂದು ದಿನ

ಬಟ್ಟೆ ಅಂಗಡಿಯಲ್ಲಿ ಸೀರೆ ಮಾರುವ ಕೆಲಸ ನಾನು ಮಾಡಿದೆ"[೩೧] ಎಂದು ಬರೆದುಕೊಳ್ಳುತ್ತಾರೆ. 'ಮಾತಂಗಿ ದೀವಟಿಗೆ'ಯ ಈ ಸನ್ನಿವೇಶವು ನಗರಗಳಲ್ಲಿ ಬಡತನ ನೀಗಿಸಿಕೊಳ್ಳಲು ಇರುವ ಪರ್ಯಾಯ ಮಾರ್ಗಗಳನ್ನು ವ್ಯಕ್ತಪಡಿಸುತ್ತಿದೆ. ನಗರಗಳಲ್ಲಿ ಹಳ್ಳಿಗಳಿಗೆ ಹೋಲಿಸಿದರೆ ಬಡತನ ನೀಗಿಸಿಕೊಳ್ಳಲು ಹಲವು ಅವಕಾಶಗಳು ದೊರೆಯುತ್ತವೆ. ಇದರರ್ಥ ನಗರಗಳಲ್ಲಿ ಬಡತನದ ಬದುಕು ಇರುವುದಿಲ್ಲವೆಂದಲ್ಲ. ವ್ಯಾಪಾರಿ ಮನೋಭಾವನೆಗಳು, ಬದುಕಲು ಹಲವು ವೃತ್ತಿ ಪರ ಅವಕಾಶಗಳಿರುವ ಕಾರಣಕ್ಕಾಗಿಯೇ ನಗರಗಳಿಗೆ ವಲಸೆ ಹೋಗುವ ಪ್ರಮಾಣ ಹೆಚ್ಚು. ಹೀಗಾಗಿ ನಗರಗಳಲ್ಲಿ ವರ್ಗ ಕೇಂದ್ರಿತ ಅವಮಾನಗಳು ಅಲ್ಪಮಟ್ಟಿಗಿರುವುದನ್ನು 'ಮಾತಂಗಿ ದೀವಟಿಗೆ'ಯು ಸ್ಪಷ್ಟಪಡಿಸುತ್ತದೆ. ನಗರಗಳಲ್ಲಿ ಪ್ರಜ್ಞೆಯ ಭಾಗವಾಗಿ ಪ್ರತಿರೋಧಗಳು ಕಾಣಿಸುತ್ತವೆ. ಸಾಮಾನ್ಯವಾಗಿ ಗ್ರಾಮಗಳ ವ್ಯಾಪ್ತಿಗಿಂತ ನಗರಗಳ ವ್ಯಾಪ್ತಿ ಹಿರಿದಾಗಿರುತ್ತದೆ. ನಗರಗಳ ಮೂಲ ಸ್ಥಳಗಳಲ್ಲಿ ಮಾತ್ರ ಗ್ರಾಮಗಳಲ್ಲಿರುವಂತೆ ಜಾತಿ ಹಟ್ಟಿಗಳಿದ್ದರೂ, ವಲಸೆ ಹೆಚ್ಚಾದಂತೆ ಬೇರೆ ಬೇರೆ ಹಿನ್ನೆಲೆಯ ಸಮುದಾಯಗಳು ಸೇರಿಕೊಂಡು ಮತ್ತು ಶಿಕ್ಷಣ, ಸಂಘಟನೆಗಳ ಪ್ರಭಾವದಿಂದ ದಲಿತರಲ್ಲಿ ಸ್ವಾಭಿಮಾನದ ಪ್ರಜ್ಞೆಯೂ ಜಾಗೃತಗೊಂಡಿದೆ.

'ಸಂಬೋಳಿ'ಯಲ್ಲಿ ಲೇಖಕರು "ನಮ್ಮ ಕಾಲೇಜಿನ ಪ್ರಾಣಿಶಾಸ್ತ್ರದ ಪ್ರಯೋಗಾಲಯದ ಅಟೆಂಡರ್ ಪಿ.ಎಸ್. ಶಿವಪ್ರಸಾದ್ ಮೂರ್ತಿ ಲಿಂಗಾಯಿತರವನು. ಅವನ ಮನೆಯಲ್ಲಿ ಭಗವಾನ್ ಬುದ್ಧನಿಗೆ ಸಂಬಂಧಿಸಿದ ಪುಸ್ತಕ ಇದೆ ಎಂದು ತಿಳಿಯಿತು. ಓದಿ ಕೊಡಲು ಕೇಳಿದೆ. ಮೂರ್ತಿ ಅದಕ್ಕೆ ಒಪ್ಪಿದರು. ಆಗವರ ಮನೆ ಅಷ್ಟು ದೂರ ಇರ್ಬೇಕಾದ್ರೆ ಏನೂ ಹೇಳದೆ, ಕೇಳದೆ ಓಡೋದ. ಒಂದು ಮರದ ಬೆಂಚು ತಂದು ಮನೆಯ ಹೊರಗಡೆ ಹಾಕಿ 'ಕುಂತ್ಕಳೋ' ಎಂದ. ಅವರ ಮನೆಯ ಹೊರಗಡೆಯ ಬಾಗ್ಲಲಿದ್ದ ಬೆಂಚಿನ ಮೇಲೆ ಕುಳಿತುಕೊಳ್ಳುವುದು ನನ್ನ ಸ್ವಾಭಿಮಾನಕ್ಕೆ ಅಗೌರವ ಎಂದು ಭಾವಿಸಿ ಪುಸ್ತಕ ತೆಗೆದುಕೊಳ್ಳದೆ ಮರಳಿದೆ"[೩೨] ಎಂದು ವಿವರಿಸುತ್ತಾರೆ. ಪ್ರಸ್ತುತ ಸನ್ನಿವೇಶದಲ್ಲಿ ಸಹೋದ್ಯೋಗಿ ಮಿತ್ರನು ಮಾಡುವ ಜಾತೀಯತೆಯಾಗಿರಬಹುದು ಅಥವಾ ಬಾಡಿಗೆ ಮನೆ ಕೊಡುವಲ್ಲಿ ಜಾತಿ ಕೇಳುವುದಾಗಿರಬಹುದು. ಇಲ್ಲಿ ಮಾತಿನೊಳಗಡೆ ಅವಮಾನಗಳು ನಡೆಯುವುದಿಲ್ಲ. ಜಾಣ ಮೌನದಿಂದ ಅವಮಾನವನ್ನುಂಟು ಮಾಡಲಾಗುತ್ತದೆ. ಇದಕ್ಕೆ ಪ್ರತಿರೋಧವು ಯಾವ ಪರ್ಯಾಯ ಮಾರ್ಗಗಳನ್ನು ಹಿಡಿಯದೆ ನೇರವಾಗಿ ಅವಮಾನಿಸುವ ಸನ್ನಿವೇಶವನ್ನು ನಿರಾಕರಿಸುವುದು ಕಾಣುತ್ತದೆ. ನಿರಾಕರಣೆ ಮಾಡುವುದರ ಮೂಲಕ ಮಾತ್ರ ಪ್ರತಿರೋಧಗಳು ಕಾಣದೆ ಕೆಲವೊಮ್ಮೆ ಸಂಘಟನಾತ್ಮಕ ಹೋರಾಟಗಳನ್ನು ಮಾಡುವುದು ಸಹ ಕಂಡುಬರುತ್ತದೆ. ಶಿಕ್ಷಣ ಪಡೆದ ಹಾಗೂ ವೈಚಾರಿಕ ಪ್ರಭಾವಕ್ಕೂ ಒಳಗಾದ ಲಕ್ಷ್ಮಣ ಗಾಯಕವಾಡ ಅವರು ಶೋಷಣೆಗೆ ಒಳಗಾದ ಕಾರ್ಮಿಕರನ್ನೆಲ್ಲಾ ಒಂದುಗೂಡಿಸಿ ತಮ್ಮನ್ನು ಶೋಷಣೆ ಮಾಡುತ್ತಿದ್ದ ಬಂಡವಾಳಶಾಹಿಗಳ ವಿರುದ್ಧ ಹೋರಾಟ ಮಾಡುವುದನ್ನು ಆತ್ಮಕಥೆಯಲ್ಲಿ ಗುರುತಿಸಬಹುದಾಗಿದೆ.

## ೮.೩. ಲಿಂಗ : ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ

ಪಿತೃಪ್ರಧಾನ ಸಂಸ್ಕೃತಿಯ ಉತ್ಪನ್ನವಾಗಿ ಲಿಂಗ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಲಿಂಗ ವ್ಯವಸ್ಥೆಯೊಳಗಿನ ಶ್ರೇಣೀಕರಣಗಳನ್ನು ತೌಲನಿಕ ವಿಧಾನಗಳ ಮೂಲಕ ಚರ್ಚೆ ಮಾಡಲಾಗುತ್ತದೆ.

### ೮.೩.೧. ಪತಿಯೊಂದಿಗಿದ್ದರು, ತೊರೆದರು ಅವಮಾನಗಳು:

ಅ. ಭಾರತೀಯ ಸಮಾಜದಲ್ಲಿ ಮಹಿಳೆ ನಿರ್ಬಂಧಗಳನ್ನು ಮೀರಿ ತನ್ನಿಚ್ಚೆಯ ಬದುಕು ಸಾಗಿಸುವುದು ಬಹಳ ಸವಾಲಿನ ಕೆಲಸವಾಗಿದೆ. ಇಂತಹ ಸನ್ನಿವೇಶಗಳನ್ನು ಈ ಕೆಳಗಿನಂತೆ ಗಮನಿಸಬಹುದು. 'ಅನುದಿನದ ಅಂತರಗಂಗೆ'ಯಲ್ಲಿ ಪ್ರತಿಭಾ ಅವರು "ಹಠಾತ್ತಾಗಿ ಇವನು ಹೊಡೆದಾಗ ನನಗೆ ಇಡೀ ಜಗತ್ತೇ ಬದಲಾಗಿ ಬಿಟ್ಟ ಹಾಗಾಯಿತು. ಒಂದು ಆವರಣ ಕಳಚಿ ಬಿದ್ದು ಇನ್ನೊಂದು ಮಾಧ್ಯಮಕ್ಕೆ ಪ್ರವೇಶಿಸಿದ ಹಾಗೆ. ನೋವಿಗೆ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು"[೩೩] ಎಂದು ನಿವೇದಿಸಿಕೊಳ್ಳುತ್ತಾರೆ.

ಆ. ಪುರುಷನ ನೆರವಿಲ್ಲದೆ ಮಹಿಳೆ ಬದುಕುವುದೇ ಅಸಾಧ್ಯವೆಂಬ ನಂಬಿಕೆಯು ಸಮಾಜದಲ್ಲಿದೆ. ಈ ಕಾರಣಕ್ಕಾಗಿ ಪತಿಯ ಹಿಂಸೆಯನ್ನು ತೊರೆದು ಒಂಟಿಯಾಗಿ ಬದುಕುವ ಮಹಿಳೆಯನ್ನು 'ಗಂಡ ಬಿಟ್ಟವಳೆಂದು' ತುಚ್ಛವಾಗಿ ಕಾಣಲಾಗುತ್ತದೆ. ಉಮಾಶ್ರೀಯವರ 'ಬೆಂಕಿ ಬೆಡಗು'ದಲ್ಲಿ ಗಂಡನ ಹಿಂಸೆ ತಾಳಲಾರದೆ ತವರಿಗೆ ಬಂದ ಮಗಳನ್ನು ಅದರಲ್ಲೂ ಗರ್ಭಿಣಿಯೆಂದು ಸಹ ನೋಡದೆ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. ಗಂಡನ ಆಶ್ರಯವಿಲ್ಲದ ಮಹಿಳೆ ಸಮಾಜದ, ಅಷ್ಟೇ ಅಲ್ಲದೆ ಕುಟುಂಬದ ಒಳಗೂ ಹೇಗೆ ಮೂದಲಿಕೆಗಳಿಗೆ ಒಳಗಾಗುತ್ತಾಳೆ ಎಂಬುದನ್ನು ಲೇಖಕಿಯು "ಗಂಡನ ಬಿಟ್ಟವಳನ್ನ ಮನೇಲಿ ಇಟ್ಕಂಡಿದಾಳೆ ಎಂಬ ದೂರು. ನನ್ನ ಮಾನ ಮರ್ಯಾದೆಯನ್ನೆಲ್ಲ ಹರಾಜು ಹಾಕ್ದೆ ಮುಂತಾಗಿ ಅಮ್ಮನ ಕಿರಿಕಿರಿ, ಮೂದಲಿಕೆ. ಅತಿ ಹೆಚ್ಚು ಅವಾಚ್ಯ ಶಬ್ದ ಬಳಕೆ....."[೩೪] ಎಂಬ ಮಾತುಗಳಲ್ಲಿ ಕಾಣಿಸುತ್ತಾರೆ.

ಇ. ಸಾರಾ ಅಬೂಬಕ್ಕರ್ ಅವರು 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು'ನಲ್ಲಿ "ನನ್ನದೇ ಪ್ರಾಯದ ಹುಡುಗಿಯೊಬ್ಬಳಿಗೆ ೧೨ನೇ ವರ್ಷದಲ್ಲಿ ಮದುವೆಯಾಗಿ ೧೩ನೇ ವರ್ಷಕ್ಕೆ ಅವಳ ಗಂಡ ತಲಾಕ್ ನೀಡಿದ. ಈಗ ಮುದುಕನೊಬ್ಬನು ಆಕೆಯನ್ನು ಮದುವೆಯಾಗುವೆನೆಂದು ಮುಂದೆ ಬಂದಾಗ.... ಆ ಮುದುಕನನ್ನೆ ಮದುವೆಯಾಗಿ ಪಡಬಾರದ ಪಾಡು ಪಟ್ಟಳು"[೩೫] ಎಂದು ಬರೆದುಕೊಳ್ಳುತ್ತಾರೆ. 'ಅನುದಿನದ ಅಂತರಗಂಗೆ', 'ಬೆಂಕಿ ಬೆಡಗು', 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಈ ಮೂರು ಆತ್ಮಕಥನಾತ್ಮಕ ಪ್ರಸಂಗಗಳಲ್ಲಿನ ಮೇಲೆ ಉಲ್ಲೇಖಿಸಿದ ಸನ್ನಿವೇಶಗಳು ಮಹಿಳೆಯರ ಜಾತಿ, ಧರ್ಮ ಬೇರೆಯಾದರೂ ವೈವಾಹಿಕತೆಯೊಳಗಿನ ದೌರ್ಜನ್ಯ ಅಪಮಾನಗಳನ್ನುಂಟು ಮಾಡಿದೆ ಎಂಬುದನ್ನು ಮಂಡಿಸುತ್ತವೆ. ಜೊತೆಗೆ ಮಹಿಳೆ ಸಂಸಾರದ

ಒಳಗೂ, ಹೊರಗೂ ಅನುಭವಿಸುವ ಅವಮಾನಗಳನ್ನು ಹೇಳುತ್ತಿವೆ. ಇಲ್ಲಿ ಗಂಡನೊಂದಿಗೆ ಇದ್ದಾಗ ಹಲ್ಲೆಗೆ ಒಳಗಾಗುತ್ತ ಸ್ವಾತಂತ್ರ ಕಳೆದುಕೊಂಡ ಸ್ಥಿತಿಯಲ್ಲಿ ಪ್ರತಿಭಾ ಇದ್ದರೆ, ಗಂಡನನ್ನು ತೊರೆದು ಉಮಾಶ್ರೀಯವರು, ಮತ್ತೆ ಕೆಲವೊಮ್ಮೆ ಗಂಡನೇ ಹೆಂಡತಿಯನ್ನು ತೊರೆದಿದ್ದಕ್ಕೆ ಸಾರಾ ಅಬೂಬಕ್ಕರ್ ಅವರ ಗೆಳತಿ ಅವಮಾನಗಳನ್ನು ಅನುಭವಿಸುವುದು ಕಂಡುಬರುತ್ತದೆ. ಹೀಗಾಗಿ ಪತಿಯು ಪತ್ನಿಯನ್ನು ತೊರೆದರು, ಪತ್ನಿಯೇ ಪತಿಯನ್ನು ತೊರೆದರೂ ಅವಮಾನಕ್ಕೆ ಒಳಗಾಗುವುದು ಮಾತ್ರ ಪತ್ನಿಯೇ ಆಗಿರುತ್ತಾಳೆ ಎಂಬುದನ್ನು ಮೂರೂ ಸನ್ನಿವೇಶಗಳು ಸಾದರಪಡಿಸುತ್ತವೆ.

೮.೩.೨. ಕೌಟುಂಬಿಕ ಹಿಂಸೆಗಳಿಂದ ತತ್ತರಿಸಿದ ಬದುಕು ನಿಧಾನವಾಗಿ ಅದರೊಳಗಡೆಯೇ ಚಲನಶೀಲತೆಯನ್ನು ಕಟ್ಟಿಕೊಂಡರೆ, ಮತ್ತೆ ಕೆಲವೊಮ್ಮೆ ಹಿಂಸೆಗಳಿಂದ ಹೊರ ಬರುವುದರ ಮೂಲಕ ಪ್ರತಿರೋಧ ತೋರುವುದನ್ನು ಕಾಣಬಹುದು. ಪ್ರತಿಭಾ ನಂದಕುಮಾರ್ ಅವರು ತನ್ನನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ಅಪಮಾನಿಸುವ ಗಂಡನನ್ನು ತೊರೆಯದೆ ಪರ್ಯಾಯ ಮಾರ್ಗಗಳ ಮೂಲಕ ಪ್ರತಿರೋಧ ತೋರುತ್ತ ಬದುಕನ್ನು ಮುಖಾಮುಖಿಯಾಗಿದ್ದಾರೆ. ಸಿನಿಮಾ ನೋಡುವುದರ ಮೇಲೆ ಇದ್ದ ಗಂಡನ ನಿರ್ಬಂಧವನ್ನು ಮೀರಿ ಗೆಳತಿಯರ ಹೆಸರಲ್ಲಿ ಸಿನಿಮಾಕ್ಕೆ ಹೋಗುವಂತೆ ಸಂದರ್ಭವನ್ನು ನಿಭಾಯಿಸುವುದು ಮತ್ತು ತನ್ನ ಇಚ್ಛೆಯನ್ನು ಈಡೇರಿಸಿಕೊಳ್ಳುವುದು ಪತಿಯ ಅನುಮಾನಕ್ಕೆ ಮಾಡಿದ ಪರ್ಯಾಯ ಮಾದರಿಯ ಪ್ರತಿರೋಧವೇ ಆಗಿದೆ. ಅದೇ ರೀತಿಯಲ್ಲಿ ತನ್ನ ಪತಿ ತನ್ನನ್ನೆ ಮನೆಯೊಳಗೆ ಸೇರಿಸದಿದ್ದಾಗ ಉಮಾಶ್ರೀಯವರು "ಏಳಮ್ಮಾ ಮೇಲೆ.... ಎಂದು ಮಗಳನ್ನು ಎತ್ತಿಕೊಂಡು ಹೊರನಡೆದೆ"[೬] ಎಂದು ಬರೆದುಕೊಳ್ಳುತ್ತಾರೆ. ಬದುಕಿನಲ್ಲಿ ಅವಮಾನಗಳಿರುತ್ತವೆ ಆದರೆ ಅವಮಾನವೇ ಬದುಕಾದಾಗ ಮನುಷ್ಯ ಬೇರೆಯದ್ದೇ ಆದ ಮಾರ್ಗವನ್ನು ಹಿಡಿಯಬೇಕಾಗುತ್ತದೆ. ಇಲ್ಲಿ ಉಮಾಶ್ರೀಯವರು ಸಹ ಗಂಡನ ಅತಿಯಾದ ಅವಮಾನಗಳನ್ನು ಸಹಿಸಲಾರದೆ ಅವಮಾನಿಸುವ ವ್ಯವಸ್ಥೆಯನ್ನು ನಿರಾಕರಿಸಿ ಹೋಗುವುದು ದಿಟ್ಟತನದ ಪ್ರತಿರೋಧವಾಗಿದೆ. ಹೀಗೆ ಕುಟುಂಬದ ಭಾಗವಾಗಿಯೂ, ಹೊರಗೆ ಬರುವುದರ ಮೂಲಕವೂ ಪ್ರತಿರೋಧ ತೋರುವ ಸನ್ನಿವೇಶಗಳು ಆತ್ಮಕಥೆಗಳಲ್ಲಿವೆ.

೮.೩.೩. ಲೇಖಕರ ಆತ್ಮಕಥೆಗಳಲ್ಲಿ ಪತ್ನಿ ಹಾಗೂ ಲೇಖಕಿಯರ ಆತ್ಮಕಥೆಗಳಲ್ಲಿ ಪತಿಯ ಪ್ರಸ್ತಾವಗಳಿವೆ:

ಅ. ಲೇಖಕರ ಆತ್ಮಕಥೆಗಳಲ್ಲಿ ಪತ್ನಿ: ಆತ್ಮಕಥನಕಾರರು ತಮ್ಮ ಪತಿ, ಪತ್ನಿಯರನ್ನು ಆತ್ಮಕಥೆಗಳಲ್ಲಿ ನಿರೂಪಿಸಿರುವ ಸ್ವರೂಪಗಳನ್ನು ಕುರಿತು ವಿಶ್ಲೇಷಿಸುವುದು ಸಾಂಸ್ಕೃತಿಕವಾಗಿ ಅಗತ್ಯದ ವಿಷಯವಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ಕೆಲವು ಆತ್ಮಕಥನಕಾರರ ಆತ್ಮಕಥೆಗಳಲ್ಲಿ ಪತ್ನಿಯ ಗೈರು ಹಾಜರಿ ಕಂಡುಬರುತ್ತದೆ. 'ಭಿತ್ತಿ' 'ಬಿಚ್ಚಿದ ಜೋಳಿಗೆ', 'ಮಣೆಗಾರ', ಮುಂತಾದ ಆತ್ಮಕಥೆಗಳಲ್ಲಿ ಲೇಖಕರ ಮಡದಿಯರ ಬಗ್ಗೆ ಹೆಚ್ಚು ಪ್ರಸ್ತಾಪವಿಲ್ಲ 'ಊರುಕೇರಿ', 'ಗೌರ್ಮೆಂಟ್ ಬ್ರಾಹ್ಮಣ' ಇನ್ನಿತರ ಕೆಲವು ದಲಿತ ಆತ್ಮಕಥೆಗಳಲ್ಲೂ ಅದರ ಪ್ರಸ್ತಾಪವೇ ಇಲ್ಲವೆನ್ನಬಹುದು. ಲೇಖಕರು

ತಮ್ಮ ಮಡದಿಯರ ಬಗ್ಗೆ ಹೇಳದೇ ಇರುವುದಕ್ಕೆ ಹಲವು ಕಾರಣಗಳಿರಬಹುದು. ಕೌಟುಂಬಿಕ ಸಂಗತಿಗಳ ಬಗ್ಗೆ ಹೇಳುವುದು ತಮ್ಮ ಘನತೆಗೆ ತಕ್ಕುದಲ್ಲ ಎಂದು ಭಾವಿಸಿರಬಹುದು; ಆತ್ಮಕಥೆಯು ಕೇವಲ ಸಾಧನೆಗಳನ್ನು ತೋರ್ಪಡಿಸಿಕೊಳ್ಳುವ ಮಾಧ್ಯಮ ಎಂದು ತಿಳಿದಿರಬಹುದು. ತನ್ನ ಬದುಕಿಗಾಗಿ ಶ್ರಮಿಸಿದ ಹೆಂಡತಿಯ ಮೌಲ್ಯವನ್ನು ಲೇಖಕರು ಗಂಭೀರವಾಗಿ ಪರಿಗಣಿಸಿಲ್ಲದಿರಬಹುದು. ಕೆಲವು ಆತ್ಮಕಥೆಗಳು ವಿವಾಹ ಪೂರ್ವ ವಿವರಗಳನ್ನು ಹೆಚ್ಚು ಒಳಗೊಂಡಿರುವ ಕಾರಣದಿಂದಲೂ ಪತ್ನಿಯ ಗೈರು ಹಾಜರಿ ಇರಬಹುದು.

ಕೆಲವು ಆತ್ಮಕಥೆಗಳಲ್ಲಿ ಪತ್ನಿಯು ಗೌಣವಾಗಿದ್ದರೆ ಮತ್ತೆ ಕೆಲವು ಆತ್ಮಕಥೆಗಳಲ್ಲಿ ಪತ್ನಿಯನ್ನು ಅವಮಾನಗೊಳಿಸುವುದರ ಕುರಿತು ವೈಯಕ್ತಿಕವಾಗಿ ಮತ್ತು ಸಾಮುದಾಯಿಕವಾಗಿ ಆತ್ಮವಿಮರ್ಶೆ ಮಾಡಿಕೊಳ್ಳುವುದು ಕಂಡುಬರುತ್ತದೆ. 'ಗೊಂದಲಿಗ್ಯಾ'ದಲ್ಲಿ "ಹೆಣ್ಣು ಹೆರಿಗೆಯಾದ ಆರೇಳು ದಿನಕ್ಕೆ ದುಡಿಯಲು ಕಳುಹಿಸುತ್ತಾರೆ"[೩೭] ಎಂದು ಬರುತ್ತದೆ. 'ಉಚಲ್ಯಾ'ದಲ್ಲಿ ಲೇಖಕರು "ಹೆಂಡತಿ ಬಾಗಿಲಲ್ಲಿ ನಿಂತರೆ ನನಗೆ ಸಂಶಯ. ಸಿಟ್ಟಿನಿಂದ ಆಕೆಯನ್ನು ಥಳಿಸುತ್ತಿದ್ದೆ. ವೈನಿ ಛಬೂಳ ನಡತೆ ಸರಿಯಾಗಿಲ್ಲವೆಂದು ಹೇಳಿ ನನ್ನ ತಲೆ ಕೆಡಿಸುತ್ತಿದ್ದಳು. ಒಮ್ಮೆ ಅನುಮಾನದಿಂದ ಮನೆಯೊಳಗೆ ಹೋದ ಬಳಿಕ ಸರಕ್ಕನೆ ಬಾಗಿಲು ಹಾಕಿಕೊಂಡೆ. ಆಕೆ ಭಯದಿಂದ ಕಿರುಚಿದಳು. ನಾನು ಹುಣಸೇ ಬರಲಿನಿಂದ ಚೆನ್ನಾಗಿ ಥಳಿಸಿದೆ. ಕಾಲಮೇಲೆ ಬಿದ್ದು ಹೊರಳಾಡಿದಳು. 'ನಾನೇನೂ ಮಾಡಿಲ್ಲರಿ. ನಿಮ್ಮ ಕಾಲಿಗೆ ಬೀಳ್ತೇನೆ.' ಎಂದು ಗೋಗರೆದರಳು. ನಂತರ ಒಂದು ಸತ್ಯ ಗೊತ್ತಾಯಿತು. ಹೆಂಡತಿಯು ಶಿವಾನ ಮನೆಗೆ ಹೋಗಿರಲಿಲ್ಲ. ಮನೆ ಮಾಲಿಕನ ಹೆಂಡತಿಯ ಜೊತೆ ಹರಟೆ ಹೊಡೆಯುತ್ತಾ ಕೂತಿದ್ದಳಂತೆ. ನಿಜವಾದ ಕಾರಣ ತಿಳಿದು ಸುಮ್ಮನೆ ಹೊಡೆದೆನಲ್ಲ ಎಂದು ಮಮ್ಮಲ ಮರುಗಿದೆ"[೩೮] ಎಂದು ಬರೆಯುತ್ತಾರೆ. ಈ ಸನ್ನಿವೇಶಗಳಲ್ಲಿ ಪ್ರಾಮಾಣಿಕತೆ ಇದೆ. ಇಲ್ಲಿ ಆತ್ಮಕಥನಕಾರರು ತಾವು ಶೋಷಣೆಗೊಳಗಾಗಿದ್ದನ್ನು ಮಾತ್ರ ವಿವರಿಸದೆ, ತಾವು ಕೂಡ ಶೋಷಕರಾಗಿದ್ದನ್ನು ಪಶ್ಚಾತ್ತಾಪದ ನೆಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ಇ. ಲೇಖಕಿಯರ ಆತ್ಮಕಥೆಗಳಲ್ಲಿ ಪತಿ : ಮಹಿಳಾ ಆತ್ಮಕಥನಕಾರರ ಕೆಲವು ಆತ್ಮಕಥೆಗಳಲ್ಲಿ ಪತಿಯ ಪಾತ್ರವು ಪ್ರಮಾಣಾತ್ಮಕವಾಗಿ ಮತ್ತು ಗುಣಾತ್ಮಕವಾಗಿ ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತದೆ. ಇಲ್ಲಿ ಪತಿಯು ಶೋಷಿಸುವ ಪುರುಷ ಪ್ರಧಾನ ಮನಸ್ಥಿತಿಯ ಪ್ರತಿನಿಧಿಯಾಗಿ ಪ್ರಕಟಗೊಂಡಿದ್ದಾನೆ. ಪ್ರತಿಭಾ ಅವರ 'ಅನುದಿನದ ಅಂತರಗಂಗೆ' ಯಲ್ಲಿ ಪ್ರತಿಭಾ ಅವರು ಮಲ್ಲಾಡಿಹಳ್ಳಿ ಸ್ವಾಮಿಗಳ ಶತಮಾನೋತ್ಸವದ ಕವಿಗೋಷ್ಠಿಯಲ್ಲಿ ಭಾಗವಹಿಸಲು ಪತಿಯ ಅನುಮತಿ ಕೇಳಿದಾಗ "ಮಲ್ಲಾಡಿಹಳ್ಳಿಗೆ ಯಾಕೆ ಹೋಗಬೇಕು? ಅಗತ್ಯವಿಲ್ಲ, ಸುಮ್ಮನೆ ಮನೆಯಲ್ಲಿರು..........ನಾನು ಹೇಳುತ್ತಿದ್ದೇನೆ, 'ಹೋಗಬೇಡಾ"[೩೯] ಎಂದು ನಿರ್ಬಂಧಿಸುವ ವಿವರಗಳಿವೆ.

'ಬೆಂಕಿ ಬೆಡಗು'ದಲ್ಲಿ ಉಮಾಶ್ರೀಯವರು ತಾಯಿಗೆ ಆರೋಗ್ಯ ಸರಿ ಇಲ್ಲದ ಕಾರಣ ಮನೆಗೆ ಕಳಿಸಿಕೊಡಿ ಎಂದಾಗ "ಮನೆಯ ಹೊರಗಡೆ ಕಾಲಿಟ್ಟರೆ ಕಾಲನ್ನು ಕತ್ತರಿಸಿ ಹಾಕ್ತೇನೆ' ಎಂದು ಆರ್ಭಟಿಸಿದ"[೪೦] ಸನ್ನಿವೇಶವಿದೆ. ಮೇಲಿನ ಎರಡೂ ಪ್ರಸಂಗಗಳಲ್ಲಿ ಪತಿಯು ಪತ್ನಿಯ ಶೋಷಕನಾಗಿರುವುದು ಕಂಡುಬರುತ್ತದೆ. ಲೇಖಕರ ಆತ್ಮಕಥೆಗಳಲ್ಲಿ ಗೌಣವಾಗಿದ್ದ ಪತ್ನಿಯು ತಾನೇ ಒಂದು ಆತ್ಮಕಥೆ ಬರೆದಾಗ ಅದರಲ್ಲಿ ಅವರ ಗಂಡನ ಬದುಕೇ ಬಹುತೇಕ ಪುಟವನ್ನು ಆಕ್ರಮಿಸಿಕೊಂಡಿರುತ್ತದೆ. ಉದಾಹರಣೆಗೆ ಪಿ. ಲಂಕೇಶ ಅವರ 'ಹುಳಿಮಾವಿನ ಮರ'ದಲ್ಲಿ ಅವರ ಹೆಂಡತಿಯ ಪಾತ್ರ ಗೌಣವಾಗಿದ್ದರೆ. ಅವರ ಮಡದಿ ಬರೆದ 'ಹುಳಿಮಾವು ಮತ್ತು ನಾನು' ಆತ್ಮಕಥೆಯಲ್ಲಿ ಬಹುತೇಕ ಲಂಕೇಶ್ ಅವರೇ ಆವರಿಸಿಕೊಂಡಿದ್ದಾರೆ. ಲೇಖಕರ ಆತ್ಮಕಥೆಗಳಿಗೆ ಹೋಲಿಸಿದರೆ ಲೇಖಕಿಯರ ಆತ್ಮಕಥೆಗಳಲ್ಲಿಯೇ ಕೌಟುಂಬಿಕ ಚಿತ್ರಣಗಳು ಹೆಚ್ಚು ಕಂಡುಬರುತ್ತವೆ. ಇಲ್ಲೆಲ್ಲ ಪತಿಗೆ ಸಹಕಾರ ನೀಡಿರುವುದು ಕೆಲವು ಹೇರಲ್ಪಟ್ಟಿರುವ ನಂಬಿಕೆಗಳು. ಲೇಖಕಿಯರ ಆತ್ಮಕಥೆಗಳಲ್ಲಿ ಸಂಸಾರ ಕುರಿತ ನೋವು, ಅಪಮಾನಗಳ ಪ್ರಮಾಣಗಳು ಹೆಚ್ಚಾಗಿ ಪ್ರಕಟಗೊಂಡಿವೆ. ದುಡಿಯುವ ಮಹಿಳೆಯಾದರೂ, ಗೃಹಿಣಿಯಾದರೂ ಆಕೆಯ ಆದ್ಯ ಕರ್ತವ್ಯ ಸಂಸಾರದ ಸೌಖ್ಯವನ್ನು ನೋಡಿಕೊಳ್ಳುವುದು ಹಾಗೂ ಪ್ರತಿಯೊಂದಕ್ಕೂ ಗಂಡನ ಅನುಮತಿ ಪಡೆಯುವುದು. ಇನ್ನು ಹಲವು ಕಾರಣಗಳಿಗಾಗಿ ಕೌಟುಂಬಿಕತೆಯು ಲೇಖಕರ ಆತ್ಮಕಥೆಗಳಲ್ಲಿ ಬಹುತೇಕ ಗೌಣವಾಗಿರುತ್ತದೆ.

**೮.೩.೪.** ಪ್ರಜ್ಞೆಯ ಭಾಗವಾಗಿ ಕೌಟುಂಬಿಕ ಪ್ರತಿರೋಧಗಳು: ಚರಿತ್ರೆಯೊಳಗಡೆ ಶೋಷಣೆಗಳನ್ನು ಪ್ರಶ್ನಿಸದೇ ಒಪ್ಪಿಕೊಳ್ಳುವ ಘಟನೆಗಳೂ ನಡೆದಿವೆ. ಅದೇ ರೀತಿ ಮಾನವೀಯ ಹಕ್ಕುಗಳ ಅರಿವು ಬಂದ ಕಾರಣ ಪ್ರಶ್ನಿಸುವ ಜಾಣ್ಮೆಗಳು ನಡೆದಿವೆ. ಈ ಕೆಳಗಿನ ಸನ್ನಿವೇಶಗಳು ಸಮಾನತೆಯ ಅರಿವು ಹೊಂದಿರುವ ಕುಟುಂಬಗಳು ಹೊಂದಿರಬಹುದಾದ ವೈಚಾರಿಕ ಪ್ರಜ್ಞೆಯ ಸಂಕೇತವಾಗಿವೆ. ಇಲ್ಲಿ ಲೇಖಕಿಯರು ಬೇರೆ ಬೇರೆ ಧಾರ್ಮಿಕ ಹಿನ್ನೆಲೆ ಹೊಂದಿದ್ದರು ಪ್ರತಿರೋಧಗಳಲ್ಲಿ ಸಾಮ್ಯತೆಗಳಿರುವುದನ್ನು 'ಮಾತಂಗಿ ದೀವಟಿಗೆ' ಮತ್ತು 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಬರಹಗಳಲ್ಲಿ ಗುರುತಿಸಬಹುದಾಗಿದೆ.

ಅ. 'ಮಾತಂಗಿ ದೀವಟಿಗೆ'ಯಲ್ಲಿ ಸಮತಾ ಅವರ ಅಕ್ಕನನ್ನು ದೇವದಾಸಿ ಪದ್ಧತಿಗೆ ಒಳಪಡಿಸುವ ಪ್ರಯತ್ನಕ್ಕೆ ಲೇಖಕರ ತಾಯಿ ತೋರುವ ಪ್ರತಿರೋಧ ಹೀಗಿದೆ. "ಆ ದಿನಗಳಲ್ಲಿ 'ಮಾದಿಗ ಯುವತಿ'ಯರನ್ನು ಪ್ರತಿಯೊಂದು ಮನೆಯಲ್ಲಿ ಒಬ್ಬರಂತೆ ಅದು ಹಿರಿಯ ಮಗಳನ್ನು 'ದೇವದಾಸಿ'ಯಾಗಿ ಬಿಡುವ ಪದ್ಧತಿ ಹೆಚ್ಚಾಗಿತ್ತು. ದೇವರು, ಧರ್ಮ, ಸಂಪ್ರದಾಯ, ಆಚರಣೆ, ಮೌಢ್ಯತೆ. ಅನಕ್ಷರತೆ ಕಂದಾಚಾರವೇ ಅವರ ಜೀವನದ ಭಾಗವಾಗಿತ್ತು. ಯಾರು ಎಷ್ಟೇ ಹೇಳಿದರು ಅವ್ವಾ ಅಪ್ಪ ಅವರಿಗೆ ತಿಳಿವಳಿಕೆ ನೀಡಿ ಕಳುಹಿಸುತ್ತಿದ್ದರು. ಅವ್ವಾ ಗಟ್ಟಿಗಿತ್ತಿ ಯಾರ ಮಾತಿಗೂ ಹೆದರಲಿಲ್ಲ. ಮಾರನೆಯ ದಿನವೇ ತಂದೆಯ ಜೊತೆಗೆ ಎಂ.ಎಸ್ ಅಡ್ಮಿಶನ್‌ಗೆ ಬಳ್ಳಾರಿ ಮೆಡಿಕಲ್ ಕಾಲೇಜ್‌ಗೆ ಕಳುಹಿಸಿದಳು."[೪೧]

**ಆ.** ಸಾರಾ ಅಬೂಬಕ್ಕರ್ ಅವರು ಶಿಕ್ಷಣ ಪಡೆಯಲು ಮುಂದಾದಾಗ ಶಿಕ್ಷಣ ಪಡೆಯಲು ಸಾಧ್ಯವಾಗದಂತೆ ಮಾಡುವ ಹಲವು ಪ್ರಯತ್ನಗಳು ನಡೆದವು. ಮಗಳಿಗೆ ಶಿಕ್ಷಣ ಕೊಡಿಸಬೇಕೆಂಬ ತಂದೆ, ಸಹೋದರರ ನಿರ್ಧಾರದ ಕಾರಣ ಸಾರಾ ಅವರು ಅವಮಾನಿಸುವ ವ್ಯವಸ್ಥೆಯನ್ನು ಪ್ರತಿರೋಧಿಸುವ ಪ್ರಯತ್ನದಲ್ಲಿ ಗೆಲ್ಲುವ ಸನ್ನಿವೇಶ ಹೀಗಿದೆ. "ಹೆಣ್ಣು ಮಕ್ಕಳಿಗೆ ವಿದ್ಯೆ ಕೊಡಕೂಡದೆಂದು ಖುರಾನ್‌ನಲ್ಲಿ ಎಲ್ಲೂ ಹೇಳಿಲ್ಲವಲ್ಲ? ಮುಂದಿನ ಜನಾಂಗವನ್ನು ಪೋಷಿಸಿ ಉತ್ತಮ ಪ್ರಜೆಯಾಗಿ ಮುಂದೆ ತರಬೇಕಾದವಳು ತಾಯಿಯಾದುದರಿಂದ ಹೆಣ್ಣಿಗೇ ವಿದ್ಯಾಭ್ಯಾಸದ ಅಗತ್ಯವಿದೆ ಎಂದು ಮಹಮದ್ ಪೈಗಂಬರರು ಬೋಧಿಸಿದ್ದಾರೆ. ಆದರಿಂದ ನನ್ನ ಮಗಳ ವಿದ್ಯಾಭ್ಯಾಸದ ಕುರಿತು ಯಾರು ಏನೂ ಹೇಳಬೇಕಾಗಿಲ್ಲ.... ನನ್ನ ತಂದೆಯ ದೃಢ ನಿರ್ಧಾರದೆದರು, ನನ್ನ ಹಿರಿಯಣ್ಣನ ನಿರಂತರ ಪ್ರೋತ್ಸಾಹದೆದರು ನನ್ನ ತಾಯಿಯೇ ಆಗಲಿ ಇತರ ಯಾರೇ ಆಗಲಿ ಏನೂ ಮಾಡುವಂತಿರಲಿಲ್ಲ"[೪೨] ಎನ್ನುವ ವಿವರಗಳಿವೆ. ಪ್ರಭುತ್ವವು ಹೆಣ್ಣನ್ನು ತನ್ನ ಹಿತಾಸಕ್ತಿ ಮತ್ತು ಅಧೀನದಲ್ಲಿಟ್ಟುಕೊಳ್ಳುವುದರ ಭಾಗವಾಗಿ ದೇವದಾಸಿ, ಮಹಿಳೆಯರನ್ನು ಅನಕ್ಷರಸ್ಥರನ್ನಾಗಿಯೇ ಉಳಿಸುವ ಪದ್ಧತಿಗಳು ಆಚರಣೆಯಲ್ಲಿವೆ. ಇಂತಹ ಪುರುಷ ಪ್ರಧಾನ ಸಂಸ್ಕೃತಿಯ ಆಚರಣೆಗಳು ಇಂದು ಬದಲಾವಣೆಯ ಕಡೆಗೆ ಚಲಿಸುತ್ತಿವೆ. ಮೇಲಿನ ಎರಡೂ ಸನ್ನಿವೇಶಗಳು ತಮ್ಮ ಮೇಲಿನ ಹೇರಿಕೆ ಸಂಸ್ಕೃತಿಯನ್ನು ಪ್ರತಿರೋಧಿಸುತ್ತಿವೆ. ಈ ಪ್ರತಿರೋಧ ಧಾರ್ಮಿಕ ಕಟ್ಟುಪಾಡುಗಳ ವಿರುದ್ಧವಷ್ಟೇ ಅಲ್ಲದೆ ಇಂತಹ ಕಟ್ಟುಪಾಡುಗಳಿಂದ ತಮ್ಮ ಕುಟುಂಬದ ಬಿಡುಗಡೆಯೂ ಆಗಿದೆ. ಇಲ್ಲಿ ಧರ್ಮ ಬೇರೆ ಬೇರೆಯಾದರು ಉಂಟಾಗಿರುವ ಪ್ರತಿರೋಧ ಮಾತ್ರ ಒಂದೇ ಆಗಿದೆ. ಅಮಾನವೀಯ ಕಟ್ಟುಪಾಡುಗಳನ್ನು ವಿರೋಧಿಸುವುದರ ಹಿಂದೆ ಮುಖ್ಯವಾಗಿ ಕಾಣುವುದು ಪಾಲಕರು ಪ್ರಜ್ಞಾವಂತರಾಗಿರುವುದು. ಶಿಕ್ಷಣ, ವೈಚಾರಿಕತೆಯ ಪ್ರಭಾವ. ಸಾರಾ ಅವರ ತಂದೆ ಮತ್ತು ಸಹೋದರರು ಧಾರ್ಮಿಕ ಮೌಢ್ಯತೆಗೆ ಪ್ರತಿರೋಧ ತೋರಿದರೆ, ಸಮತಾ ಅವರ ತಂದೆ ಮತ್ತು ತಾಯಿ ಅನಕ್ಷರಸ್ಥರಾಗಿದ್ದರು ಜಾತೀಯತೆಯ ಕಂದಾಚಾರಗಳಿಗೆ ಪ್ರತಿರೋಧ ತೋರುತ್ತಾರೆ. ಧಾರ್ಮಿಕ ಮೌಢ್ಯತೆ ಮತ್ತು ಜಾತೀಯತೆಯ ಕಂದಾಚಾರಗಳೆರಡೂ ಹೆಣ್ಣನ್ನು ಶೋಷಿಸುವ ಪ್ರಕ್ರಿಯೆಗಳೇ ಆಗಿದ್ದು ಇವುಗಳನ್ನು ಆತ್ಮಕಥನಕಾರರ ಪಾಲಕರು ಸಮರ್ಥವಾಗಿ ಮೀರಿರುವುದನ್ನು ಆತ್ಮಕಥೆಗಳು ಪ್ರಕಟಪಡಿಸಿವೆ.

**೮.೩.೫.** ಹೆಣ್ಣಾಗಿದ್ದಕ್ಕೆ ಮತ್ತು ಹೆಣ್ಣಾಗಿ ಬದಲಾಗಿದ್ದಕ್ಕೆ ಅವಮಾನಗಳು: ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವು ಸಂಗತಿಗಳನ್ನು ಮೌಖಿಕವಾಗಿ ಪ್ರಧಾನೀಕರಿಸಲಾಗಿದೆ. ಮೇಲ್ಜಾತಿ, ಪುರುಷ, ಶ್ರೀಮಂತ ಹೀಗೆ ಕೆಲವು ಸಂಗತಿಗಳು ಪ್ರಧಾನ ಸ್ತರಗಳಲ್ಲಿ ರೂಪಿತಗೊಂಡರೆ ಕೆಳಜಾತಿ, ಬಡವ, ಮಹಿಳೆ, ತೃತೀಯ ಲಿಂಗಿಗಳು ಹೀಗೆ ಇನ್ನೂ ಕೆಲವು ಸಂಗತಿಗಳು ಅಧೀನತೆಗೆ ಒಳಪಟ್ಟಿವೆ. ಹೀಗೆ ಅಧೀನತೆಗೆ ಒಳಪಟ್ಟು ಹೆಣ್ಣಾದ ಕಾರಣಕ್ಕೆ ಪ್ರತಿಭಾ ನಂದಕುಮಾರ್, ಉಮಾಶ್ರೀಯವರು ಅವಮಾನಗಳನ್ನು ಅನುಭವಿಸಿದರೆ ಹೆಣ್ಣಾಗಿ ಬದಲಾಗಿದ್ದಕ್ಕಾಗಿ (ತೃತೀಯ ಲಿಂಗಿ) ರೇವತಿ,

ಸ್ಮೈಲಿಂಗ್ ವಿದ್ಯಾ ಅವರು ಅವಮಾನ ಅನುಭವಿಸುವುದು ಕಂಡುಬರುತ್ತದೆ. ರೇವತಿಯವರ 'ಬದುಕು ಬಯಲು' ಆತ್ಮಕಥೆಯಲ್ಲಿ ಲೇಖಕರು "ಅವನ ಕಾಲಿಗೆ ಬಿದ್ದೆ. ಬೂಟುಗಾಲಲ್ಲಿ ಒದ್ದ. ಅಲ್ಲೇ ಆ ಕ್ಷಣ ಬಟ್ಟೆ ಬಿಚ್ಚು ಅಂದ. ನಗ್ನವಾಗಿ ನಿಂತಿದ್ದಾಗ ಆಪರೇಷನ್ ಆದ ಕಡೆ ಲಾಠಿ ಇಟ್ಟು ಹೆಂಗಸಿನ ತರ ಕಾಲು ಅಗಲಿಸಿ ನಿಂತ್ಕೋ ಅಂತ ಒತ್ತಾಯಿಸಿದ. ಮತ್ತೆ ಮತ್ತೆ ಲಾಠಿ ಇಟ್ಟು, 'ಒಳಗೆ ಹೋಗುತ್ತಾ? ಅಥವಾ ಒಳಗೆ ಹೋಗೋಕೆ ಆಗದೇ ಇರೋ ಪ್ರದೇಶಾನಾ? ಸೆಕ್ಸ್ ಹೆಂಗೆ ಮಾಡ್ತೀಯಾ ನೀನು?"[೪೩] ಎಂದು ಅಪಮಾನಕ್ಕೆ ಒಳಗಾಗುವುದನ್ನು ಬರೆದುಕೊಳ್ಳುತ್ತಾರೆ. ದೈಹಿಕ ಬದಲಾವಣೆಗಳಾಗಿದ್ದಕ್ಕಾಗಿ ಅನುಭವಿಸುವ ಅವಮಾನಗಳು ತೃತೀಯ ಲಿಂಗಿಗಳ ಆತ್ಮಕಥೆಗಳಲ್ಲಿನ ಬಹು ಮುಖ್ಯವಾದ ಅಂಶವಾಗಿವೆ. ಈ ಬದಲಾವಣೆಯು ಪ್ರಕೃತಿಯ ಸಹಜ ಪ್ರಕ್ರಿಯೆಗಳಲ್ಲಿ ಒಂದು ಎನ್ನುವ ವೈಜ್ಞಾನಿಕ ಮನೋಭಾವನೆಯನ್ನು ನಮ್ಮ ವ್ಯವಸ್ಥೆಯು ರೂಢಿಸಿಕೊಂಡಿಲ್ಲದಿರುವುದು; ತೃತೀಯ ಲಿಂಗಿಗಳು ಅನೇಕ ಸಂಕಟಗಳನ್ನು ಅನುಭವಿಸುವಂತೆ ಮಾಡಿದೆ. ಮಹಿಳಾ ಆತ್ಮಕಥೆಗಳಲ್ಲಿ ಲೇಖಕಿಯರು ಅನುಭವಿಸುವ ಅಪಮಾನಗಳಾಗಲಿ, ತೃತೀಯ ಲಿಂಗಿಗಳ ಲೈಂಗಿಕ ಸಂಗತಿಗಳ ಆರಕ್ಷಕನೇ ಕುರಿತು ಕೇಳುವ ಪ್ರಶ್ನೆಗಳಾಗಲಿ ಹೆಣ್ಣಾಗಿದ್ದಕ್ಕೆ ಮತ್ತು ಹೆಣ್ಣಾಗಿ ಬದಲಾಗಿದ್ದಕ್ಕೆ ಅನುಭವಿಸುವ ಅಪಮಾನಗಳಾಗಿವೆ. ಇಂತಹ ಅಪಮಾನಿತ ಸಂಗತಿಗಳನ್ನು ಆತ್ಮಕಥೆಯು ಅತ್ಯಂತ ವಿಷಾದದ ಧ್ವನಿಯಲ್ಲಿ ಕಾಣಿಸುತ್ತವೆ.

### ೮.೪. ಧರ್ಮ : ಅವಮಾನ ಮತ್ತು ಪ್ರತಿರೋಧಗಳ ತೌಲನಿಕ ವಿಶ್ಲೇಷಣೆ

ಧಾರ್ಮಿಕತೆ ಮತ್ತು ದೇಶಪ್ರೇಮವು ಜನರ ಬದುಕಿನಲ್ಲಿ ಸಹಜವಾಗಿ ಇರಬೇಕಾದ ಸಂಗತಿಯಾಗಿದ್ದೂ, ಇತ್ತೀಚಿನ ದಿನಗಳಲ್ಲಿ ಇವೆರಡನ್ನು ಮತ್ತೊಬ್ಬರಿಂದ ಹೇರಲ್ಪಡುವ, ಕೃತಕ ಸನ್ನಿವೇಶಗಳು ಜನಸಾಮಾನ್ಯರಲ್ಲಿ ಹಲವು ಬಿಕ್ಕಟ್ಟುಗಳನ್ನುಂಟು ಮಾಡಿವೆ.

೮.೪.೧ ಸಮುದಾಯ, ಕಾಲ ಮತ್ತು ಪ್ರಾದೇಶಿಕತೆ: ಸಮುದಾಯಗಳನ್ನು ಸೂಚಿಸುವ ಹೆಸರುಗಳು ಕಾಲದಿಂದ ಕಾಲಕ್ಕೆ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದನ್ನು ರಂಜಾನ್ ದರ್ಗಾ ಅವರ 'ನನ್ನ ಪರಿಸರ ಮತ್ತು ಕಾವ್ಯ' ಮತ್ತು ಮೊಹಿದೀನ್ ಅವರ 'ನನ್ನೊಳಗಿನ ನಾನು' ಪಠ್ಯಗಳಲ್ಲಿ ಕ್ರಮವಾಗಿ ಗುರುತಿಸಬಹುದಾಗಿದೆ.

ಅ. ರಂಜಾನ್ ದರ್ಗಾ ಅವರು "ಹಿಂದುಗಳು ಬಡ ಮುಸ್ಲಿಮರನ್ನು ಅನೇಕ ಪ್ರಸಂಗಗಳಲ್ಲಿ ಹರಿಜನರನ್ನು ನೋಡುವಂತೆಯೆ ನೋಡುವ ಹಳ್ಳಿಯ ಪರಿಸರದಲ್ಲಿ ನನ್ನ ಬಾಲ್ಯ ಕಳೆಯಿತು. ನನ್ನ ನೆನಪಿನ ಹಗೆಯಲ್ಲಿ ಕೈ ಹಾಕಿದಾಗ ಮೊದಲು ಸಿಗುವ ನೆನಪು ಈ ಜಾತಿಯ ಕರಾಳತನಕ್ಕೆ ಸಂಬಂಧಿಸಿದುದು."[೪೪] ಎಂದು ಹತಾಶಿಸುತ್ತಾರೆ.

ಆ. 'ನನ್ನೊಳಗಿನ ನಾನು'ದಲ್ಲಿ "ಮುಸ್ಲಿಮರು ಮತಾಂಧರು ಹಿಂದೂ ದ್ವೇಷಿಗಳು, ದೇಶ ದ್ರೋಹಿಗಳು, ಅವರಿಗೆ ಗಲ್ಫ ದೇಶಗಳಿಂದ ಹಣ ಬರುತ್ತದೆ."[೪೫] ಎಂದು ಆರೋಪಿಸುವ ಸನ್ನಿವೇಶಗಳಿವೆ.

ರಂಜಾನ್ ದರ್ಗಾ ಅವರು ತಮ್ಮ ಸಮುದಾಯವನ್ನು ಜಾತಿ ಎಂದೇ ಬರೆದಿದ್ದಾರೆ. ಇದಕ್ಕೆ ಎರಡು ಕಾರಣಗಳಾಗಿವೆ. ಉತ್ತರ ಕರ್ನಾಟಕ ಹೆಚ್ಚು ಹಳ್ಳಿಗಳಿರುವ ಪ್ರದೇಶ. ಇಲ್ಲಿ ಮುಸ್ಲಿಂ ಎಂಬುದು ಜಾತಿಯೇ ಆಗಿದೆ. ಏಕೆಂದರೆ ಹಳ್ಳಿಗರಿಗೆ ಅಂದಿನ ಕಾಲದಲ್ಲಿ ಜಾತಿ ಎಂಬುದು ಮಾತ್ರ ಗೊತ್ತಿರುತ್ತಿತ್ತು. ಇದರ ಜೊತೆಗೆ ದರ್ಗಾ ಅವರ ಬಾಲ್ಯದ ದಿನಗಳಲ್ಲಿ ಕೋಮುವಾದವು ಪರಿಪೂರ್ಣವಾಗಿ ಉಲ್ಬಣವಾಗಿಲ್ಲದ ಕಾಲವಾಗಿತ್ತು. ಹೀಗೆ ಹಲವು ಕಾರಣಗಳಿಗೆ ಮುಸ್ಲಿಂ ಎಂಬುದು ಪ್ರತ್ಯೇಕ ಧರ್ಮವಾಗದೆ ಪ್ರತ್ಯೇಕ ಜಾತಿಯಾಗಿದೆ. ಇದಕ್ಕೆ ಭಿನ್ನವಾಗಿ ಬಿ. ಎ. ಮೊಹಿದೀನ್‌ರವರು ತಮ್ಮ ಆತ್ಮಕಥೆಯಲ್ಲಿ ಮುಸ್ಲಿಂ ಎಂಬುದನ್ನು ಧರ್ಮವಾಗಿಯೇ ಬಳಸಿದ್ದಾರೆ. ಕರಾವಳಿ ಭಾಗವು ಕೋಮು ಸಂಘರ್ಷ ತೀವ್ರವಾಗಿರುವ ಸ್ಥಳವಾಗಿರುವುದು ಮೊದಲನೆಯ ಕಾರಣವಾದರೆ, ಪ್ರಸ್ತುತ ದಿನಮಾನಗಳಲ್ಲಿ ಆತ್ಮಕಥೆ ಪ್ರಕಟಗೊಳ್ಳುತ್ತಿರುವುದು ಎರಡನೆಯ ಕಾರಣವಾಗಿದೆ. ಈ ಎರಡೂ ಕಾರಣಗಳಿಂದ ಮುಸ್ಲಿಂ ಎಂಬುದು ಮೊಹಿದೀನ್ ಅವರಲ್ಲಿ ಧರ್ಮಸೂಚಿಯಾಗಿದೆ. ಹೀಗೆ ಸಮುದಾಯ ಸೂಚಕದಲ್ಲಾಗಿರುವ ಬದಲಾವಣೆಯೂ ಏಕಕಾಲಕ್ಕೆ ಕೋಮುಸಂಘರ್ಷದಲ್ಲಿನ ಬದಲಾವಣೆಯನ್ನು ಪ್ರತಿನಿಧಿಸುತ್ತದೆ.

**೮.೪.೨.** ಆಹಾರ ಅವಮಾನ ಮತ್ತು ಪ್ರತಿರೋಧ: ಸಸ್ಯಾಹಾರ ಮತ್ತು ಮಾಂಸಾಹಾರಗಳೆರಡು ಕೇವಲ ಆಹಾರಗಳಷ್ಟೇ ಆಗದೇ ಅವು ಕೂಡ ತರತಮಗಳ ಭಾಗವಾಗಿವೆ. ಮಾಂಸಾಹಾರದೊಳಗಡೆಯೇ ದನದ ಮಾಂಸ ಸೇವಿಸುವವರನ್ನು ಅವಮಾನಿಸುವ ಸನ್ನಿವೇಶಗಳು ಫಕೀರ್ ಮುಹಮ್ಮದ್ ಕಟ್ಪಾಡಿಯವರ 'ಮುಸ್ಲಿಂ ಸಂವೇದನೆಯ ಕಥಾ ಪ್ರಪಂಚ'ದಲ್ಲಿ ಕಂಡುಬಂದರೆ, ಎಲ್ಲಪ್ಪ ಕೆ.ಕೆಪುರ ಅವರ 'ಕೇರಿಯಿಂದ ತೇರಿಗೆ' ಆತ್ಮಕಥೆಯಲ್ಲಿ ಆಹಾರದ ಕುರಿತ ನಿರ್ಬಂಧಗಳನ್ನು ಮೀರುವ ತಂತ್ರಗಳು ಪ್ರತಿರೋಧಗಳಾಗಿವೆ.

"ಈ ಪೇಟೆ ಶಾಲೆಯಲ್ಲಿ ನನಗೆ ಅಚ್ಚರಿಯ ಸಂಗತಿಯೊಂದು ತಿಳಿದು ಬಂತು. ಅದೆಂದರೆ ನಾನು ಬ್ಯಾರಿ' ಎಂಬ ನಿಕೃಷ್ಟ ಜಾತಿಗೆ ಸೇರಿದವನೆಂಬುದು! ನನ್ನ ಸಹಪಾಠಿಗಳಲ್ಲಿ ಮೇಲ್ಜಾತಿಗೆ ಸೇರಿದ ಹುಡುಗನೊಬ್ಬ ಅವನು ನಂಬರ್ ಒಂದನೆಯ ಜಾತಿ, ಇವನು ನಂಬರ್ ಎರಡನೆಯ ಜಾತಿ, ಹೀಗೆ ಜಾತಿಗಳನ್ನು ಹೇಳುತ್ತಾ ನೀವು ದನತಿನ್ನುವವವರು ಆರನೆಯ ಜಾತಿ, ಕೊನೆಯದ್ದು ಎನ್ನುತ್ತಿದ್ದ."[೪೬]

ಕಟ್ಪಾಡಿಯವರು ವ್ಯಕ್ತಪಡಿಸಿರುವ ಮೇಲಿನ ಸನ್ನಿವೇಶವು ಅವಮಾನಗಳಿಗೆ ಸಂಬಂಧಿಸಿದ್ದಾದರೆ, 'ಕೇರಿಯಿಂದ ತೇರಿಗೆ'ಯಲ್ಲಿ ಪೋಲಿಸರ ದನ ತಿನ್ನಬಾರದೆಂಬ ನಿರ್ಬಂಧಗಳನ್ನು ಮೀರಿ ತಮ್ಮ ಆಹಾರದ ಹಕ್ಕನ್ನು ಪರ್ಯಾಯ ಮಾರ್ಗಗಳ ಮೂಲಕ ಚಲಾಯಿಸುವ ಸಂಗತಿಯನ್ನು ಲೇಖಕರು "ದನ ಕೊಯ್ಯುವ ಸ್ಥಳ ಕುಂಟೆ ಬಯಲಿಗೆ ಹೋಯಿತು. ಚೆಂಬಲ್‌ನಂತೆ ಗಾಢವೂ ನಿಗೂಢವೂ ಆಗಿತ್ತು. ರಾಜಾರೋಷವಾಗಿ ಸೀಮೆಜಾಲಿ ಬೇಲಿಗಳ ಮೇಲೆ, ಬುಟ್ಟಿ ತಟ್ಟೆಗಳ ಮೇಲೆ 'ಆರ್ಬಡ್ಸಿ'......

ರಿಬ್ಬನ್ನುಗಳಂತೆ ಮಾಂಸ ಹಾಕುವುದು ಬಿಟ್ಟು, ಗುಟ್ಟಾಗಿ ಚಪ್ಪರದೊಳಗೆ ಒಣಗಿ ಹಾಕುವ ವ್ಯವಸ್ಥೆ ಮಾಡಿಕೊಂಡೆವು, ಮಾಂಸದ ಸಾರು........ಸಿದ್ಧವಾದ ತಕ್ಷಣ ಅದನ್ನು ಗೌಪ್ಯವಾದ ಸ್ಥಳದಲ್ಲಿ ಅವಿತಿಟ್ಟು, ಗುಟ್ಟಾಗಿ........ ಊಟ ಮಾಡಿ ಖಾಲಿ ಮಾಡುತ್ತಿದ್ದೆವು."[೪೭] ಎಂದು ದಾಖಲಿಸುತ್ತಾರೆ.

ಮೇಲಿನ ಎರಡೂ ಪ್ರಸಂಗಗಳಲ್ಲಿ ಆಹಾರ ಅಪಮಾನದ ಸೂಚಕವಾಗಿ ಮುಸ್ಲಿಂ ಮತ್ತು ಮಾದಿಗ ಸಮುದಾಯಗಳೆರಡನ್ನೂ ನಿಂದನೆಗಳಿಗೆ ಒಳಪಡಿಸಿದೆ. ಜಾತಿ ಪಟ್ಟಿಯಲ್ಲಿ ಕೆಳಹಂತದ ಸ್ಥಾನ ನೀಡಿ ಅಪಮಾನಿಸಿವೆ. ಆದರೆ ಇಂತಹ ನಿರ್ಬಂಧಗಳನ್ನು ಮೀರುವ ತಂತ್ರಗಳು ಮಾತ್ರ ಪ್ರತಿರೋಧವಾಗಿರುವುದನ್ನು 'ಕೇರಿಯಿಂದ ತೇರಿಗೆ'ಯಲ್ಲಿ ನೋಡಬಹುದಾಗಿದೆ. ದನದ ಮಾಂಸವನ್ನು ಪೋಲಿಸರ ಕಣ್ಣಿಗೆ ಕಾಣದಂತೆ ಚಪ್ಪರದೊಳಗೆ ಒಣಗಿಸಿ, ಗುಟ್ಟಾಗಿ ಊಟ ಮಾಡುವುದು ದಮನಿತರು ಕಂಡುಕೊಂಡ ತಂತ್ರವಾಗಿದೆ. ಹೀಗೆ ದನದ ಆಹಾರವನ್ನು ಅವಲಂಬಿಸುವುದಕ್ಕೆ ವರ್ಗ ಹಿತಾಸಕ್ತಿಯೂ ಕಾರಣವಾಗಿದೆ. ಕಡಿಮೆ ದರದಲ್ಲಿ ಹೆಚ್ಚು ಮಾಂಸ ಸಿಗುವುದು ಮತ್ತು ಹಸಿವನ್ನು ನೀಗಿಸಿಕೊಳ್ಳಲು ಅನಿವಾರ್ಯವೂ ಆದ ಕಾರಣ ಇಲ್ಲಿ ಪ್ರತಿರೋಧಕ್ಕೆ ಕಾರಣವಾಗಿದೆ. ಆಹಾರ ಕೇಂದ್ರಿತ ಅಪಮಾನಗಳನ್ನು ಅಸಹಾಯಕ ಧ್ವನಿಯಲ್ಲಿ ಕಟ್ಟಾಡಿಯವರು ವ್ಯಕ್ತಪಡಿಸಿದರೆ, ಎಲ್ಲಪ್ಪ ಅವರ ಧ್ವನಿಯಲ್ಲಿ ನಿರ್ಬಂಧಗಳನ್ನು ಗೆದ್ದ ವಿಶ್ವಾಸವಿದೆ. ಒಟ್ಟಾರೆ ಆಹಾರ ಸಂಸ್ಕೃತಿಯ ಅಪಮಾನ ಮತ್ತು ಪ್ರತಿರೋಧಗಳು ವೈರುಧ್ಯ ಅಭಿವ್ಯಕ್ತಿಗೆ ಕಾರಣವಾಗಿರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ.

**೮.೪.೩.** ಪ್ರತಿರೋಧಗಳ ಭಿನ್ನ ಭಿನ್ನ ಪರಿಣಾಮಗಳು: ಆತ್ಮಕಥೆಗಳಲ್ಲಿ ಪ್ರತಿರೋಧಗಳು ಪ್ರಕಟವಾಗುವ ವಿಧಾನಗಳಲ್ಲಿ ಹೇಗೆ ಹಲವು ಬಗೆಗಳಿವೆಯೋ ಹಾಗೆಯೇ ಅವುಗಳು ಉಂಟು ಮಾಡುವ ಪರಿಣಾಮಗಳಲ್ಲು ನಾಲ್ಕು ಬಗೆಯಲ್ಲಿವೆ. ಅವುಗಳು ಈ ಕೆಳಗಿನಂತಿವೆ. ಮೊದಲನೆಯದಾಗಿ ಲೇಖಕರು ತೋರುವ ಕೆಲವು ಪ್ರತಿರೋಧಗಳು ಉದ್ದೇಶ ಸಾಧಿಸುವಲ್ಲಿ ಯಶಸ್ವಿಯಾಗಿವೆ. 'ಉಚಲ್ಯಾ'ದಲ್ಲಿನ ಕಾರ್ಮಿಕ ಹೋರಾಟಗಳು ತಮ್ಮ ಮೇಲಿನ ದೌರ್ಜನ್ಯವನ್ನು ತಡೆಯುವಲ್ಲಿ ಯಶಸ್ವಿಯಾಗಿರುವುದನ್ನು ಗುರುತಿಸಬಹುದಾಗಿದೆ.

ಕೆಲವು ಪ್ರತಿರೋಧಗಳು ತಾತ್ಕಾಲಿಕವಾಗಿ ಹಿನ್ನಡೆಯಾದರೂ ಪರಿಣಾಮದಲ್ಲಿ ದಮನಿತರ ಮೇಲೆ ಧನಾತ್ಮಕ ಪ್ರಭಾವ ಬೀರುವುದು ಎರಡನೆಯ ಮಾದರಿಯ ಪ್ರತಿರೋಧದ ಪರಿಣಾಮವಾಗಿದೆ. 'ಮಣೆಗಾರ'ದಲ್ಲಿ ಸತ್ತ ದನ ಎತ್ತಲಿಲ್ಲ ಎಂದು ದಲಿತರ ಮೇಲೆ ಮಾಡಿದ ಹಲ್ಲೆಯ ವಿರುದ್ಧದ ಹೋರಾಟ ಅಲ್ಪಮಟ್ಟಿಗೆ ಹಿನ್ನಡೆಯಾದರೂ ಆತ್ಮಕಥನಕಾರರಲ್ಲಿ ಮತ್ತು ದಮನಿತರಲ್ಲಿ ಹೋರಾಟದ ಜಾಗೃತಿ ಮೂಡಿಸುವಲ್ಲಿ ಪ್ರಧಾನ ಪಾತ್ರವಹಿಸಿರುವುದನ್ನು ನೋಡಬಹುದಾಗಿದೆ. ಇವುಗಳ ಜೊತೆಗೆ ಕೆಲವು ಪ್ರತಿರೋಧಗಳು ದಮನಿತರಲ್ಲಿ ಮಾನಸಿಕವಾಗಿ ನೆಮ್ಮದಿಯನ್ನುಂಟು ಮಾಡುತ್ತವೆ. 'ಭಿತ್ತಿ'ಯಲ್ಲಿನ ಆತ್ಯಂತಿಕ ಶಕ್ತಿಯ ಮೊರೆ ಹೋಗುವುದಾಗಿರಬಹುದು ಮತ್ತು ಅಪವಮಾನಗಳನ್ನು

ಪ್ರಶ್ನಿಸುವುದಾಗಿರಬಹುದು. ಇವು ಪರಿಣಾಮದಲ್ಲಿ ಮಾನಸಿಕ ನೆಮ್ಮದಿಯನ್ನುಂಟು ಮಾಡುತ್ತವೆ. ಕೆಲವು ಪ್ರತಿರೋಧಗಳು ಶೋಷಕರಲ್ಲಿ ಪರಿವರ್ತನೆಯನ್ನುಂಟು ಮಾಡುವಲ್ಲಿ ಯಶಸ್ವಿಯಾಗಿವೆ. 'ಮಾತಂಗಿ ದೀವಟಿಗೆ'ಯಲ್ಲಿ ಸಮತಾ ಅವರ ಅಣ್ಣನ ಮಾತಿನಿಂದ ಮಹಿಳೆಯೊಬ್ಬಳು ಸಮಾಜಮುಖಿ ಚಳವಳಿಯಲ್ಲಿ ತೊಡಗಿಸಿಕೊಂಡಿರುವುದನ್ನು ಇದಕ್ಕೆ ಉದಾಹರಣೆಯಾಗಿ ಕಾಣಬಹುದಾಗಿದೆ. ಒಟ್ಟಾರೆಯಾಗಿ ಕನ್ನಡ ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧಗಳು ಏಕಮುಖವಾಗಿಲ್ಲದೆ ಆಯಾ ವ್ಯಕ್ತಿ ಮತ್ತು ಸಮುದಾಯಗಳ ಸಾಮಾಜಿಕ, ಆರ್ಥಿಕ, ಲಿಂಗೀಯ ಹಿನ್ನೆಲೆಗಳನ್ನು ಆಧರಿಸಿ ಭಿನ್ನ ಭಿನ್ನವಾಗಿ ಅನುಭವಕ್ಕೆ ಬಂದಿರುವುದು ಮತ್ತು ಭಿನ್ನವಾಗಿ ಅಭಿವ್ಯಕ್ತಿಸಿರುವುದು ಕಂಡುಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಭೈರಪ್ಪ ಎಸ್.ಎಲ್., ಭಿತ್ತಿ, ಪು. ೧೫
೨. ಸಿದ್ಧಲಿಂಗಯ್ಯ, ಊರುಕೇರಿ, ಪು. ೨
೩. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೩
೪. ಅದೇ, ಪು. ೪೪
೫. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪು. ೨
೬. ಸಿದ್ಧಲಿಂಗಯ್ಯ, ಊರುಕೇರಿ, ಪುಟ.೪೬
೭ ಅದೇ, ಪು. ೭೩
೮. ಅದೇ, ಪು. ೧೦೯
೯. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೮೯
೧೦. ರೇವತಿ.ಎ, ಅನು:ದು.ಸರಸ್ವತಿ, ಬದುಕುಬಯಲು, ಪು. ೨೮೦
೧೧. ಮದರಿ ಎ.ಎಂ. ಗೊಂದಲಿಗ್ಯಾ, ಪು.೧೮೯
೧೨. ರೇವತಿ.ಎ, ದು.ಸರಸ್ವತಿ (ಅನು), ಬದುಕುಬಯಲು, ಪು.೪
೧೩. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪುಟ.೯
೧೪. ಮದರಿ ಎ.ಎಂ, ಗೊಂದಲಿಗ್ಯಾ, ಪು.೯೪
೧೫. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು.೪
೧೬. ಭೈರಪ್ಪ ಎಸ್.ಎಲ್, ಭಿತ್ತಿ, ಪು. ೨೫೧
೧೭. ಅದೇ, ಪು.೫೬
೧೮. ಲಕ್ಷ್ಮಣ್. ಎಂ, ಸಂಬೋಳಿ, ಪು. ೪೮
೧೯. ಭೈರಪ್ಪ ಎಸ್.ಎಲ್, ಭಿತ್ತಿ, ಪು. ೭೦
೨೦. ತುಂಬಾಡಿ ರಾಮಯ್ಯ, ಮಣೆಗಾರ, ಪು. ೯೬
೨೧. ಭೈರಪ್ಪ ಎಸ್.ಎಲ್., ಭಿತ್ತಿ, ಪುಟ. ೧೫೫

೨೨. ಅದೇ, ಪು. ೨೦೬

೨೩. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪುಟ.೭೮

೨೪. ಅದೇ ಪು. ೮೭

೨೫. ತುಂಬಾಡಿ ರಾಮಯ್ಯ, ಮಣೆಗಾರ, ಪುಟ. ೯೯

೨೬. ಲಕ್ಷ್ಮಣ್. ಎಂ, ಸಂಬೋಳಿ, ಪು. ೪೨

೨೭. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೩೧

೨೮. ಲಕ್ಷ್ಮಣ್. ಎಂ, ಸಂಬೋಳಿ, ಪುಟ. ೪೨

೨೯. ಅದೇ ಪು. ೪೮

೩೦. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಪು. ೯

೩೧. ಸಮತಾ ಬಿ. ದೇಶಮಾನೆ, ಮಾತಂಗಿ ದೀವಟಿಗೆ, ಪು. ೪೨

೩೨. ಲಕ್ಷ್ಮಣ್. ಎಂ, ಸಂಬೋಳಿ, ಪುಟ. ೧೦೫

೩೩. ಪ್ರತಿಭಾ ನಂದಕುಮಾರ್, ಅನುದಿನದ ಅಂತರಗಂಗೆ, ಪುಟ. ೧೮

೩೪. ಗಣಪತಿ ಬಿ, ಬೆಂಕಿ ಬೆಡಗು, ಪು.೩೪

೩೫. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಪು. ೧೩೮

೩೬. ಗಣಪತಿ ಬಿ, ಬೆಂಕಿ ಬೆಡಗು, ಪು. ೩೦

೩೭. ಮದರಿ ಎ.ಎಂ. ಗೊಂದಲಿಗ್ಯಾ, ಪು. ೨೩೧

೩೮. ಲಕ್ಷ್ಮಣ ಗಾಯಕವಾಡ, ಉಚಲ್ಯಾ, ಪು. ೭೪,೭೫

೩೯. ಪ್ರತಿಭಾ ನಂದಕುಮಾರ್, ಅನುದಿನದ ಅಂತರಗಂಗೆ, ಪು. ೮೦

೪೦. ಗಣಪತಿ ಬಿ ,ಬೆಂಕಿ ಬೆಡಗು, ಪು. ೨೮

೪೧. ಸಮತಾ ಬಿ. ದೇಶಮಾನೆ, ಮಾತಂಗಿ ದೀವಟಿಗೆ, ಪು. ೫೯

೪೨. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ೨೦೦೯, ಪುಟ. ೧೨೮,೧೨೯

೪೩. ರೇವತಿ.ಎ, ಅನು:ದು.ಸರಸ್ವತಿ, ಬದುಕುಬಯಲು, ಪು. ೧೮೪

೪೪. ರಂಜಾನ್ ದರ್ಗಾ, ಸಾಹಿತ್ಯ ಮತ್ತು ಸಮಾಜ, ಪು. ೭೩

೪೫. ಮುಹಮ್ಮದ್ ಕುಳಾಯಿ, ಮುಹಮ್ಮದ್ ಅಲಿ ಬಿ.ಎ. ಮೊಹಿದೀನ್, ನನ್ನೊಳಗಿನ ನಾನು, ಪು. ೧೭೨

೪೬. ಫಕೀರ್ ಮುಹಮ್ಮದ್ ಕಟ್ಪಾಡಿ, ಮುಸ್ಲಿಂ ಸಂವೇದನೆಯ ಕಥಾ ಪ್ರಪಂಚ, ಪು. ೩

೪೭. ಎಲ್ಲಪ್ಪ ಕೆ.ಕೆ.ಪುರ, ಕೇರಿಯಿಂದ ತೇರಿಗೆ, ಪು. ೧೯

ಅಧ್ಯಾಯ : ಒಂಬತ್ತು

# ಸಮಾರೋಪ

ಸಂಶೋಧನೆ ಎನ್ನುವುದು ಶೋಧಿಸುವ ಮತ್ತು ಅರ್ಥೈಸುವ ಎರಡೂ ಸಂಗತಿಗಳನ್ನು ಒಳಗೊಂಡಿರುತ್ತದೆ. ಪ್ರಸ್ತುತ ಸಂಶೋಧನೆ ಆತ್ಮಕಥೆಗಳನ್ನು ಅಧ್ಯಯನ ಕ್ಷೇತ್ರ ಮಾಡಿಕೊಂಡು ಮೇಲಿನ ಎರಡೂ ಪ್ರಕ್ರಿಯೆಗಳನ್ನು ಹಿಂಬಾಲಿಸಿಕೊಂಡು ಇಲ್ಲಿಗೆ ಬಂದು ತಲುಪಿದೆ. ಈ ತಲುಪುವ ಪ್ರಯಾಣದಲ್ಲಿ ಆತ್ಮಕಥೆಗಳು ಸದಾ ಸಹ ಪ್ರಯಾಣಿಕರಂತೆ ಜೊತೆಗೂಡಿ ಬಂದಿವೆ. ಹೀಗಾಗಿ ಆತ್ಮಕಥೆಗಳ ಮೇಲಿನ ಸಂಶೋಧನೆಯು ವಾಸ್ತವ ಸಮಾಜವನ್ನು ಅರಿಯುವ ಹಾಗೂ ಬದುಕುವ ಎರಡೂ ಕಲೆಯನ್ನು ಕಲಿಸಿಕೊಡುವಂತಹದ್ದಾಗಿದೆ. ಆತ್ಮಕಥೆಗಳ ಮೇಲಿನ ಈ ಅಧ್ಯಯನವು ಅವಮಾನ ಮತ್ತು ಪ್ರತಿರೋಧಗಳ ಹೊಸ, ಹೊಸ ಒಳನೋಟಗಳನ್ನು ತೆರೆದಿಟ್ಟಿದೆ. ಅವಮಾನಗಳು ಆತ್ಮಕಥನಕಾರರಿಗೆ ನೋವುಗಳನ್ನು ಕೊಟ್ಟಿದ್ದರೆ, ಪ್ರತಿರೋಧಗಳು ಹೊಸ ಬದುಕಿಗೆ ಅವಕಾಶ ಮಾಡಿಕೊಟ್ಟಿವೆ. ಅವಮಾನ ಮತ್ತು ಪ್ರತಿರೋಧಗಳೆಂಬ ಪರಿಕಲ್ಪನೆಗಳನ್ನು ಆತ್ಮಕಥೆಗಳಲ್ಲಿ ಶೋಧಿಸುತ್ತ ಹೊರಟಾಗ ಆತ್ಮಕಥೆಗಳಲ್ಲಿರುವ ಪರಿಕಲ್ಪನೆಗಳಿಗೂ, ವಾಸ್ತವ ಸಮಾಜಕ್ಕೂ ಇರುವ ಸಾಮ್ಯತೆಗಳು ಕಂಡುಬಂದವು. ಭಾರತೀಯ ಸಮಾಜವು ಪ್ರಮುಖವಾಗಿ ನಾಲ್ಕು ಅಡಿಪಾಯಗಳ ಮೇಲೆ ರಚನೆಗೊಂಡಿದೆ. ಜಾತಿ, ವರ್ಗ, ಲಿಂಗ, ಧರ್ಮ ಇವೆ ಆ ನಾಲ್ಕು ಅಡಿಪಾಯಗಳು. ಈ ಅಡಿಪಾಯಗಳನ್ನು ಅಧ್ಯಯನದ ಮುಖ್ಯ ಉಪಕರಣಗಳಾಗಿ ಇಟ್ಟುಕೊಂಡು ಸಂಶೋಧನೆಯಲ್ಲಿ ತೊಡಗಿಕೊಂಡಾಗ, ಅಡಿಪಾಯಗಳು ಈರುಳ್ಳಿಯ ಸಿಪ್ಪೆ ಪದರು ಬಿಟ್ಟುಕೊಳ್ಳುವಂತೆ ಬಿಟ್ಟುಕೊಳ್ಳತೊಡಗಿದವು. ಇವುಗಳು ಮಾಡಿರುವ ಮೊದಲ ಕೆಲಸವೆಂದರೆ ಮನುಷ್ಯ, ಮನುಷ್ಯನ ನಡುವೆ ಸಾಧ್ಯವಾದಷ್ಟು ಅಂತರ ಉಂಟು ಮಾಡುವುದು. ಈ ಅಂತರ ಏಕ ಮುಖವಾದದ್ದಲ್ಲ. ಬಹುಮುಖಿಯಾದದ್ದು. ಈ ಬಹುಮುಖಿ ಅಂತರಗಳೇ ಅವಮಾನ ಮತ್ತು ಪ್ರತಿರೋಧಗಳಿಗೆ ಕಾರಣಗಳಾಗಿವೆ.

ಆತ್ಮಕಥೆಗಳಲ್ಲಿನ ಅವಮಾನ ಮತ್ತು ಪ್ರತಿರೋಧಗಳು ಕಾಲ, ಸನ್ನಿವೇಶ, ಪ್ರಾದೇಶಿಕತೆ, ಉಪಜಾತಿಗಳನ್ನು ಅನುಸರಿಸಿ ಭಿನ್ನ ಭಿನ್ನವಾಗಿ ಅನುಭವಕ್ಕೆ ಬರುತ್ತವೆ ಎನ್ನುವುದು ಈ ಸಂಶೋಧನೆ ಗುರುತಿಸಿದ ಮುಖ್ಯ ಸಂಗತಿಗಳಲ್ಲೊಂದಾಗಿದೆ; ಹಾಗಾಗಿ ಭಾರತೀಯ ಸಮಾಜದಲ್ಲಿರುವ ಅವಮಾನಗಳ

ಹಲವು ಸ್ತರಗಳನ್ನು ಆತ್ಮಕಥೆಗಳ ಮೂಲಕ ಕಾಣಿಸಲಾಗಿದೆ. ಆಯಾ ಕಾಲಕ್ಕೆ ದಮನಿತ ಸಮುದಾಯಗಳು ನೀಡಿರುವ ಪ್ರತಿರೋಧಗಳು ಕೂಡ ಬೇರೆ ಬೇರೆ ಆಯಾಮಗಳನ್ನು ಹೊಂದಿದ್ದು; ಪ್ರತಿರೋಧಗಳು ಈ ಬಹಿಷ್ಕೃತ ಭಾರತವನ್ನು ಅಲ್ಪಮಟ್ಟಿಗಾದರು ವಿವೇಚನೆ ಮಾಡುವ ಭಾರತವನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿವೆ. ಇಲ್ಲಿ ಬಹಿಷ್ಕೃತ ಭಾರತ ಎಂಬುದು ಆತ್ಮಕಥೆಗಳೊಳಗಿನ ಜಗತ್ತಾಗಿದೆ. ಮೇಲಿನ ಎಲ್ಲವುಗಳನ್ನು ಪರಿಶೋಧಿಸಿ, ಸಂಸ್ಕರಿಸಿ ಸಂಶೋಧನಾ ಫಲಿತಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ಫಲಿತಗಳು

೧. ಭಾರತೀಯ ಜಾತಿ ವ್ಯವಸ್ಥೆಯಲ್ಲಿ 'ಪ್ರಧಾನ ಸಮುದಾಯಗಳು' 'ಅಧೀನ' ಸಮುದಾಯಗಳನ್ನು ಶೋಷಿಸುವ ಗುಣವನ್ನು ಹೊಂದಿವೆ. ಹೀಗಾಗಿ ಅಪಮಾನಕ್ಕೆ ಒಳಗಾದ 'ಅಧೀನ' ಸಮುದಾಯಗಳು ತಮಗಿಂತ 'ತಳ' ಮಟ್ಟದ ಸಮುದಾಯಗಳನ್ನು ಅವಮಾನಿಸುವ ಸಂಗತಿಗಳು ಆತ್ಮಕಥೆಗಳಲ್ಲಿ ಪ್ರಕಟವಾಗಿವೆ. 'ಭಿತ್ತಿ'ಯಲ್ಲಿ ಜಾತಿ ಜಾತಿಗಳ ನಡುವಿನ ಶ್ರೇಣೀಕರಣ ವ್ಯವಸ್ಥೆಯ ದೊಡ್ಡ ಪಟ್ಟಿಯೇ ದೊರೆಯುತ್ತದೆ. ಶಿವಚಾರದವರು ಮತ್ತು ಬ್ರಾಹ್ಮಣರು ನೊಣಬ ಲಿಂಗಾಯತರನ್ನು ನಡೆಸಿಕೊಳ್ಳುವ ರೀತಿ, ನೊಣಬ ಲಿಂಗಾಯತರು ಕುರುಬರನ್ನು ನಡೆಸಿಕೊಳ್ಳುವ ರೀತಿ ಹಾಗೂ ಎಡಗೈ, ಬಲಗೈ ಸಮುದಾಯಗಳನ್ನು ಈರುಳ್ಳಿಯ ಹೊರಗಿನ ಸಿಪ್ಪೆಯಂತೆ ಊರ ಹೊರಗಿಟ್ಟಿರುವುದು, ಕ್ಷೌರಿಕರು ಕೆಲವು ಜಾತಿಗಳಿಗೆ ಕ್ಷೌರ ಮಾಡದಿರುವುದು. ಹೀಗೆ ಜಾತಿ ಜಾತಿಗಳ ನಡುವಿನ ಶ್ರೇಣೀಕರಣವು ಒಂದು ಜಾತಿ ಮತ್ತೊಂದು ಜಾತಿಯನ್ನು ಅಪಮಾನಿಸುವುದರ ಸರಣಿ ಪ್ರಕ್ರಿಯೆಯನ್ನು ಕಾಣುತ್ತೇವೆ. ಈ ಅಪಮಾನಿಸುವ ಗುಣವು ಏಕಕಾಲಕ್ಕೆ ತಾವು ಮೇಲಿನವರು ಎಂಬ ಸುಖವನ್ನು ಮತ್ತು ಬೇರೆಯವರಿಂದ ತುಳಿತಕ್ಕೆ ಒಳಗಾಗುವ ದುರಂತವನ್ನೂ ಹೊಂದಿದೆ. ಈ ಇಬ್ಬಗೆತನವನ್ನು ಆತ್ಮಕಥೆಗಳು ಕಟ್ಟಿಕೊಡುತ್ತವೆ. ಈ ಕಾರಣಕ್ಕೆ ಕನ್ನಡ ಆತ್ಮಕಥೆಗಳು ಅನಧಿಕೃತ ಸಮಾಜಶಾಸ್ತ್ರೀಯ ಪಠ್ಯಗಳಂತೆ ತೋರುತ್ತವೆ.

೨. ಆತ್ಮಕಥೆಗಳಲ್ಲಿ ಅವಮಾನ ಮತ್ತು ಪ್ರತಿರೋಧಗಳ ಪ್ರಮಾಣವು ಹಾಗೂ ಗುಣಾತ್ಮಕವು ಆಯಾ ಸಮುದಾಯಗಳ ಶ್ರೇಣೀಕರಣದ ಮಟ್ಟವನ್ನು ಅವಲಂಬಿಸಿರುತ್ತದೆ. ಜಾತಿ ಕಾರಣಕ್ಕೆ ಅವಮಾನ ಅನುಭವಿಸುವುದು ಮತ್ತು ಪ್ರತಿರೋಧ ತೋರುವುದು ಸವರ್ಣೀಯರಿಗೆ ಹೋಲಿಸಿದರೆ ಪ್ರಮಾಣಾತ್ಮಕವಾಗಿ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿದ್ದ ಅಸ್ಪೃಶ್ಯರಲ್ಲೇ ಹೆಚ್ಚು ಕಂಡುಬರುತ್ತದೆ. ಇದರೊಂದಿಗೆ ಗುಣಾತ್ಮಕವಾಗಿ ಜಾತಿಸೂಚಕ ನಿಂದನೆಗಳು, ಕೆಲವೊಮ್ಮೆ ಮಾರಣಾಂತಿಕ ಹಲ್ಲೆಗಳಿಗೆ ಒಳಗಾಗುವುದು ಮತ್ತು ಇಂತಹ ಅವಮಾನಗಳನ್ನು ಪ್ರತಿರೋಧಿಸುವುದು ಸಹ ಅಸ್ಪೃಶ್ಯರಲ್ಲೇ ಹೆಚ್ಚು ಎನ್ನುವುದನ್ನು ಆತ್ಮಕಥೆಗಳು ಕಾಣಿಸುತ್ತವೆ. ಈ ಬಹುಸ್ತರೀಯ ಅಪಮಾನ ಮತ್ತು ಪ್ರತಿರೋಧಗಳನ್ನು ಆತ್ಮಕಥೆಗಳು ಸ್ಪಷ್ಟವಾಗಿ ಪ್ರಕಟಿಸುತ್ತವೆ.

೩. ದಮನದ ಪ್ರಧಾನ ಸ್ತರವನ್ನು ವಿಮರ್ಶಿಸುವ ಆತ್ಮಕಥನಕಾರರು ತಮ್ಮ ಸಮುದಾಯವು ಅಧೀನದವರನ್ನು ಸ್ವತಃ ದಮನಿಸುತ್ತಿರುವ ಸಂಗತಿಗಳ ಕುರಿತು ಆತ್ಮವಿಮರ್ಶೆ ಮಾಡಿಕೊಳ್ಳುವುದು ಕೆಲವು ಆತ್ಮಕಥೆಗಳಲ್ಲಿ ಗುರುತಿಸಬಹುದಾಗಿದೆ. ಹಾಗೆಯೇ ಕೆಲವು ಆತ್ಮಕಥನಕಾರರು ಆ ಸಂಗತಿಗಳ ಕುರಿತು ಹೆಚ್ಚು ಆಸಕ್ತಿವಹಿಸಿಲ್ಲದಿರುವುದನ್ನು ಸಹ ಗುರುತಿಸಬಹುದಾಗಿದೆ. 'ಮಣೆಗಾರ', 'ಗೌರ್ಮೆಂಟ್ ಬ್ರಾಹ್ಮಣ' ಮುಂತಾದ ಆತ್ಮಕಥೆಗಳಲ್ಲಿ ತುಂಬಾಡಿ ರಾಮಯ್ಯ ಮತ್ತು ಅರವಿಂದ ಮಾಲಗತ್ತಿಯವರು ತಮಗಿಂತ ಕೆಳಮಟ್ಟದಲ್ಲಿರುವ ಇತರೆ ಸಮುದಾಯಗಳನ್ನು ತಮ್ಮ ಸಮುದಾಯ ಶೋಷಿಸುತ್ತಿರುವುದನ್ನು ಆತ್ಮವಿಮರ್ಶಾತ್ಮಕವಾಗಿ ಉಲ್ಲೇಖಿಸುತ್ತಾರೆ. ಹೀಗೆ ಒಳವಿಮರ್ಶೆ ಇರುವ ಆತ್ಮಕಥೆಗಳಲ್ಲಿ ಒಂದು ಬಗೆಯ ವೈಚಾರಿಕ ಪ್ರಬುದ್ಧತೆ, ತೆರೆದ ಮನಸ್ಸು ಹಾಗೂ ಡೆಮಾಕ್ರಟಿಕ್ ಗುಣವು ಹೆಚ್ಚು ಕಾಣಬರುತ್ತದೆ.

ಈ ಆತ್ಮವಿಮರ್ಶಾತ್ಮಕತೆಯು 'ಊರುಕೇರಿ'ಯಲ್ಲಿ ಅಷ್ಟಾಗಿ ಕಾಣುವುದಿಲ್ಲ. ಮೇಲ್ಜಾತಿಗಳೆಂದು ಕರೆಯಲಾಗಿರುವ ಸಮುದಾಯಗಳು ನಿಮ್ಮೊಳಗೆ ಶೋಷಣೆಗಳಿವೆ ಎಂದು ಆರೋಪಿಸುವರೆಂಬ ಕಾರಣಗಳಿಂದಲೋ, ನಗರ ಕೇಂದ್ರಿತ ಬದುಕಿನ ಕಾರಣಕ್ಕೊ ಅಥವಾ ತಮ್ಮ ಸಮುದಾಯವು ತಮಗಿಂತ ತಳಸಮುದಾಯವನ್ನು ಶೋಷಣೆ ಮಾಡುತ್ತಿದೆ ಎಂಬುದನ್ನು ಉದ್ದೇಶಪೂರ್ವಕವಾಗಿ ಮರೆಮಾಚಬೇಕೆಂದೋ, ಹೀಗೆ ಹಲವು ಕಾರಣಗಳಿಗೆ ಆತ್ಮವಿಮರ್ಶೆಯ ಗುಣ ಕೆಲವು ಆತ್ಮಕಥೆಗಳಲ್ಲಿ ಪಕ್ಕಕ್ಕೆ ಸರಿದಿರುವುದನ್ನು ಗಮನಿಸಬಹುದಾಗಿದೆ, ಇದರಂತೆಯೇ ಧಾರ್ಮಿಕ ಮೂಲಭೂತವಾದದಿಂದ ಅವಮಾನಕ್ಕೆ ಒಳಗಾಗುವುದನ್ನು ವಿವರಿಸಿರುವ ರಂಜಾನ್ ದರ್ಗಾ ಮತ್ತು ಬಿ. ಎ. ಮೊಹಿದೀನ್ ಅವರು ತಮ್ಮ ಧರ್ಮದೊಳಗೆ ಪಿಂಜಾರ್, ನದಾಫ್ ಪಂಗಡದವರನ್ನು ಪರಕೀಯರಂತೆ ನಡೆಸಿಕೊಳ್ಳುವುದನ್ನು ಚರ್ಚಿಸದಿರುವುದು ಸಹ ಕಂಡುಬರುತ್ತದೆ. ಸಾಮಾಜಿಕವಾಗಿ ಶತ್ರುಕೇಂದ್ರಿತವಾದ ನಿರೂಪಣ ವಿಧಾನವನ್ನು ಮಾಡುವ ಆತ್ಮಕಥೆಗಳು ಹೀಗೆ ಸ್ವವಿಮರ್ಶೆಯನ್ನು ಬಿಟ್ಟುಕೊಟ್ಟಿರುವುದು ಗಮನಾರ್ಹ.

೪. ಆತ್ಮಕಥೆಗಳಲ್ಲಿ ಬಡತನ ಮತ್ತು ಹಸಿವು ಹೆಚ್ಚು ಕಾಡಿರುವಂತಹ ಸಂಗತಿಗಳಾಗಿದ್ದು, ಇವು ಆತ್ಮಕಥೆಗಳ ಸ್ಥಾಯಿಭಾವವಾಗಿವೆ. ಈ ಹಸಿವು ಮತ್ತು ಬಡತನದ ತೊಳಲಾಟಗಳು ಕೇವಲ ದಲಿತ ಆತ್ಮಕಥೆಗಳಿಗೆ ಮಾತ್ರ ಸೀಮಿತವಾಗದೆ, ದಲಿತೇತರ ಆತ್ಮಕಥೆಗಳಲ್ಲೂ ಕಾಣುತ್ತವೆ. ಎಸ್.ಎಲ್.ಭೈರಪ್ಪ ಹಾಗೂ ನಾಗಲೋಟಿಮಠ ಅವರು ಬಡತನದ ಕಾರಣಕ್ಕೆ ಅವಮಾನ ಅನುಭವಿಸಿದ್ದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಆತ್ಮಕಥೆಗಳನ್ನು ಹಸಿವಿನ ಮತ್ತು ಬಡತನದ ಮೀಮಾಂಸೆಯ ಕೃತಿಗಳೆಂದು ಕರೆಯಬಹುದು.

೫. ಪುರೋಹಿತಶಾಹಿ ವ್ಯವಸ್ಥೆಯು ಯಾವ ಮಡಿವಂತಿಕೆಯ ಭಾಷೆ, ಶಿಕ್ಷಣ, ಪವಿತ್ರ ಗ್ರಂಥಗಳನ್ನು ಬಳಸಿಕೊಂಡು ಅಸ್ಪೃಶ್ಯತೆಯನ್ನು ಆಚರಿಸುತ್ತಿತ್ತೊ, ಅದೇ ಪರಿಕರಗಳನ್ನು ಶೋಷಿತರು

ವಶಪಡಿಸಿಕೊಳ್ಳಲು ಮುಂದಾದಾಗ ಅವರನ್ನು ನಿಂದಿಸುವ ಮತ್ತು ಆ ಮೂಲಕ ಅಸ್ಪೃಶ್ಯತೆಯನ್ನು ಕಾಪಾಡಿಕೊಳ್ಳುವ ಘಟನೆಗಳನ್ನು ಕೆಲವು ಆತ್ಮಕಥೆಗಳು ಕಾಣಿಸುತ್ತವೆ. ಆದರೆ ತಮ್ಮನ್ನು ಅಪಮಾನಿಸುವ ಪರಿಕರಗಳನ್ನೇ ಬಳಸಿಕೊಂಡು ದಮನಿತರು ಸಾಧನೆ ಮಾಡುವ ಮೂಲಕ ಪ್ರತಿರೋಧವನ್ನು ಒಡ್ಡುವುದನ್ನೂ ಇವೇ ಆತ್ಮಕಥೆಗಳು ಕಾಣಿಸುತ್ತವೆ. ಸಂಸ್ಕೃತ ಕಲಿಯುವ ಸನ್ನಿವೇಶದಲ್ಲಿ ಶೂದ್ರರಾದ ಕುವೆಂಪುರವರು ಬ್ರಾಹ್ಮಣ ಶಿಕ್ಷಕನಿಂದ ಅವಮಾನ ಅನುಭವಿಸುವುದು ಮತ್ತು ಅದೇ ಮಡಿವಂತ ಭಾಷೆಯ ಮೂಲಕವೇ ಉತ್ಕೃಷ್ಟ ಸಾಹಿತ್ಯ ರಚನೆ ಮಾಡಿದ್ದು ಒಂದು ವಿಶಿಷ್ಟ ಹಾಗೂ ಚಾರಿತ್ರಿಕ ಮಹತ್ವದ ಪ್ರತಿರೋಧವಾಗಿದೆ.

೬. ಜಾತಿಕೇಂದ್ರಿತ ಹಾಗೂ ಲಿಂಗಕೇಂದ್ರಿತ ಅವಮಾನಗಳು ಶೈಕ್ಷಣಿಕ ವ್ಯವಸ್ಥೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದು, ಸಮಾನತೆಯ ಪಾಠವನ್ನು ಬೋಧಿಸಬೇಕಿದ್ದ ಶಾಲೆಗಳು ಅಸ್ಪೃಶ್ಯತೆಯನ್ನು ಆಚರಿಸುವುದನ್ನು ಆತ್ಮಕಥೆಗಳು ಢಾಳಾಗಿ ಕಾಣಿಸುತ್ತವೆ. ಆರಂಭದಲ್ಲಿ ಸವರ್ಣೀಯರೇ ಹೆಚ್ಚು ಶಿಕ್ಷಕರಾಗಿ ಕೆಲಸ ನಿರ್ವಹಿಸಿರುವುದು, ಅವರಲ್ಲಿದ್ದ ಮಡಿವಂತಿಕೆಯ ಮನೋಭಾವ, ಅಸ್ಪೃಶ್ಯರು ಸಹ ಮನುಷ್ಯರೇ ಎಂಬ ತಿಳಿವಿನ ಕೊರತೆ, ಜಾತಿ ದೌರ್ಜನ್ಯ ವಿರೋಧಿ ಕಾನೂನಿನ ಅರಿವಿನ ಕೊರತೆ ಹಾಗೂ ಅಸ್ಪೃಶ್ಯರಲ್ಲಿ ಶಿಕ್ಷಣ ಮತ್ತು ತಮ್ಮ ಹಕ್ಕಿನ ತಿಳುವಳಿಕೆಯ ಕೊರತೆಗಳು ಈ ವಿದ್ಯಮಾನಕ್ಕೆ ಚಾರಿತ್ರಿಕವಾದ ಕಾರಣಗಳು. ಇನ್ನೂ ಲಿಂಗಕೇಂದ್ರಿತ ಅವಮಾನಗಳನ್ನು ಗಮನಿಸುವುದಾದರೆ, ಲಿಂಗ ಬದಲಾವಣೆಯನ್ನು ಇಂದಿಗೂ ಅಸಹಜವಾದ ಪ್ರಕ್ರಿಯೆ ಎಂಬ ಧೋರಣೆ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿದೆ. ಲೈಂಗಿಕ ಅಲ್ಪಸಂಖ್ಯಾತರಿಗೆ ಶಾಲಾ ಶಿಕ್ಷಕರಿಂದ ಆಗುವ ಅವಮಾನಗಳು ಶೈಕ್ಷಣಿಕ ವ್ಯವಸ್ಥೆಯೊಳಗೆ ಇರುವ ವೈಚಾರಿಕತೆ ಹಾಗೂ ಮಾನವೀಯತೆಯ ಕೊರತೆಯ ಫಲವಾಗಿವೆ. ಶೈಕ್ಷಣಿಕ ವ್ಯವಸ್ಥೆಯೊಳಗಿನ ಈ ಹಿಂಸೆಯನ್ನು ಆತ್ಮಕಥೆಗಳು ಕಾಣಿಸುತ್ತವೆ.

೭. 'ಮೇಲುಜಾತಿಯ' ಹಿರಿಯ ಪೀಳಿಗೆಗಳಲ್ಲಿ ಜಾತಿ ಕಾರಣಕ್ಕಾಗಿ ಇದ್ದ ಅವಮಾನಿಸುವ ಗುಣವು ಕಿರಿಯ ಪೀಳಿಗೆಗೆ ಕ್ರಮೇಣ ಕಡಿಮೆಯಾಗುತ್ತಿರುವುದನ್ನು ಆತ್ಮಕಥೆಗಳು ಪ್ರಕಟಿಸುತ್ತವೆ. ಅದೇ ರೀತಿ ಹಿರಿಯ ಪೀಳಿಗೆಗಿದ್ದ ಅವಮಾನಗಳನ್ನು 'ಸಹಜ' ಎಂದು ಭಾವಿಸುವ ಗುಣ ಕಿರಿಯ ಪೀಳಿಗೆಗೆ ಕಡಿಮೆಯಾಗುತ್ತಾ, ಅವಮಾನಗಳನ್ನು ಭಿನ್ನ ಭಿನ್ನ ಮಾದರಿಯಲ್ಲಿ ಪ್ರತಿರೋಧಿಸುವ ಬೆಳವಣಿಗೆಗಳನ್ನು ಸಹ ಗುರುತಿಸಬಹುದು. 'ಊರುಕೇರಿ'ಯಲ್ಲಿ 'ಅಸ್ಪೃಶ್ಯತೆ ರುಚಿಯಾದ ತಿಂಡಿ' ಎಂಬ ಸನ್ನಿವೇಶದಲ್ಲಿ ಸಿದ್ಧಲಿಂಗಯ್ಯನವರು ತನ್ನ ಗೆಳೆಯನ ಮನೆಯ ಹಿರಿಯರುಗಳಿಂದ ಅಸ್ಪೃಶ್ಯತೆಗೆ ಒಳಗಾಗುವುದನ್ನು ಮತ್ತು ಈ ಕಾರಣಕ್ಕಾಗಿ ಅವರ ಗೆಳೆಯ ಅಸಹಾಯಕತೆಯಿಂದ ನೊಂದುಕೊಳ್ಳುತ್ತಿದ್ದುದನ್ನು ಇಲ್ಲಿ ಉಲ್ಲೇಖಿಸಬಹುದು. ಗೆಳೆಯನ ಮನೆಯ ಹಿರಿಯರಿಗೆ ಇರುವ ಅವಮಾನಿಸುವ ಗುಣ ಕಿರಿಯರಿಗೆ ಕ್ರಮೇಣ ಇಲ್ಲದಿರುವುದನ್ನು ಗುರುತಿಸಬಹುದಾಗಿದೆ.

ಸಾರಾ ಅಬೂಬಕ್ಕರ್ ಅವರು ತಮ್ಮ ಅತ್ತೆಯು ಮರಣ ಹೊಂದಿದ ನಂತರ ತಾವು ಬುರ್ಕಾದಿಂದ ಬಿಡುಗಡೆ ಹೊಂದಿದ್ದಾಗಿ ಹೇಳಿಕೊಂಡಿರುವುದು ಧಾರ್ಮಿಕ ಕಟ್ಟುಪಾಡುಗಳನ್ನು ಒಪ್ಪಿಕೊಂಡ ಹಿರಿಯ ಪೀಳಿಗೆಯನ್ನು ಹಾಗೂ ಅವುಗಳಿಂದ ಬಿಡುಗಡೆ ಹೊಂದುತ್ತಿರುವ ನವ ಪೀಳಿಗೆಯನ್ನು ಸೂಚಿಸುತ್ತದೆ. ಸಂವಿಧಾನ ಜಾರಿಗೆ ಬಂದ ನಂತರ ಅಕ್ಷರ ವಂಚಿತ ಸಮುದಾಯಗಳು ಅಕ್ಷರ ಜ್ಞಾನ ಪಡೆದದ್ದು, ಅಂಬೇಡ್ಕರರ ವೈಚಾರಿಕತೆಯ ಪ್ರಭಾವ ಹಾಗೂ ದಲಿತ ಬಂಡಾಯ ಚಳವಳಿಯ ಸಾಮಾಜಿಕ ಎಚ್ಚರಿಕೆಯ ಪ್ರಭಾವಗಳು ಇದಕ್ಕೆ ಕಾರಣಗಳಾಗಿವೆ. ಈ ಪ್ರಭಾವಗಳಿಂದ ತಮ್ಮ ಮೇಲೆ ಸವರ್ಣೀಯರು ಮಾಡುತ್ತಿದ್ದ ಅವಮಾನಗಳನ್ನು ಪ್ರತಿರೋಧಿಸುವ ಮಾದರಿಯು ಸಂಘಟನೆ, ಹೋರಾಟದ ಸ್ವರೂಪಕ್ಕೆ ಹೊರಳಿದ್ದನ್ನು ನೆನೆಯಬಹುದು. ಈ ಎಲ್ಲ ವಿದ್ಯಮಾನಗಳಿಗೆ ಆತ್ಮಕಥೆಗಳು ಕನ್ನಡಿ ಹಿಡಿಯುತ್ತವೆ.

೮. ಕನ್ನಡ ಆತ್ಮಕಥೆಗಳು ಏಕಕಾಲಕ್ಕೆ ತಮ್ಮನ್ನು ಶೋಷಿಸುವ ಶೋಷಕ ವ್ಯವಸ್ಥೆಯ ವಿರುದ್ಧ ಆಕ್ರೋಶ ವ್ಯಕ್ತಪಡಿಸುವ ಜನರನ್ನು ಚಿತ್ರಿಸುತ್ತವೆ. ಇದರ ಜೊತೆಗೆ ಶೋಷಕ ಸಮುದಾಯದ ಭಾಗವಾಗಿದ್ದರೂ ದಮನಿತರ ಬಗೆಗೆ ಉದಾರತೆ ಮತ್ತು ಮಾನವೀಯವಾಗಿ ಸ್ಪಂದಿಸುವ ಮನಸ್ಸುಗಳನ್ನು ಕೂಡ ಅಷ್ಟೇ ಪ್ರಾಮಾಣಿಕತೆಯಿಂದ ಚಿತ್ರಿಸುತ್ತವೆ. 'ಮಣೆಗಾರ'ದಲ್ಲಿ ಬರುವ ಕಾಡುಗೊಲ್ಲರ ಹುಲಿಯಪ್ಪ, ತಳವಾರರ ನಾಗರಪ್ಪ, ಕುರುಬರ ದಾಸಪ್ಪನವರ ಹೆಂಡತಿ ರಂಗಮ್ಮ ಇದಕ್ಕೆ ಉದಾಹರಣೆ. ಕಾಡುಗೊಲ್ಲರು ಮಣೆಗಾರರನ್ನು ಮನೆಗಳ ಹತ್ತಿರ ಸುಳಿದಾಡಲೂ ಆಸ್ಪದ ಕೊಡದ ಕಾಲದಲ್ಲಿ, ಅವರು ಲೇಖಕರ ಮೇಲೆ ಅಭಿಮಾನ ಇಟ್ಟಿದ್ದಾಗಲಿ; 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಪರಿಚಯವಾದ ಬ್ರಾಹ್ಮಣರೇ ಮಾಲಗತ್ತಿಯವರಿಗೆ ರಾಘವೇಂದ್ರ ಸ್ವಾಮಿಯ ದರ್ಶನ ಮಾಡಲು ಸಹಕರಿಸುವುದಾಗಲಿ ಶೋಷಕ ವ್ಯವಸ್ಥೆಯೊಳಗಡೆಯೂ ಜೀವಂತವಾಗಿರುವ ಮಾನವೀಯತೆಯನ್ನು ಸೂಚಿಸುತ್ತವೆ.

೯. ಅಸ್ಪೃಶ್ಯರನ್ನು ಪಶುಸಮಾನವಾಗಿ ಕಾಣುವ ಮತ್ತು ಮನುಷ್ಯ ರೂಪಿಸಿಕೊಂಡಿರುವ ಮಡಿವಂತಿಕೆಗಳನ್ನು ಪಶುಗಳಿಗೂ ಅನ್ವಯಿಸಿ ಅಪಮಾನಿಸುವ ಮನೋಧರ್ಮವು ಜಾತಿ ವ್ಯವಸ್ಥೆಯಲ್ಲಿ ಕಂಡುಬಂದರೆ; ಬಡತನದ ಬದುಕನ್ನು ನೀಗಿಸುವುದಕ್ಕಾಗಿ ಕೆಲವು ತಳಸಮುದಾಯಗಳು ಅನಿವಾರ್ಯವಾಗಿ ಪ್ರಾಣಿಗಳಂತೆ ಬಳಕೆಯಾಗಿರುವ ಚಿತ್ರಗಳು ಆತ್ಮಕಥೆಗಳಲ್ಲಿವೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಬರುವ 'ಹಂಡ್ಯಾನ ಲಾಳಿ ಕತ್ತರಿಸಿದ ಪ್ರಸಂಗ' ಮತ್ತು 'ಊರುಕೇರಿ'ಯ 'ಐನೋರ ಹೊಲ' ಸನ್ನಿವೇಶವನ್ನು ಉದಾಹರಣೆಯಾಗಿ ನೋಡಬಹುದು. ಇದಕ್ಕೆ ಭಿನ್ನವಾಗಿ ದಲಿತರನ್ನು ಅಪಮಾನಿಸಲು ಉಪಯೋಗಿಸುವಂತಹ ಪಶುಗಳನ್ನೇ ಬಳಸಿಕೊಂಡು ಉಪಕಥೆಯನ್ನು ಹೇಳುವುದರ ಮೂಲಕ ದಮನಿತರಲ್ಲಿ ಸಾಹಿತ್ಯದ ಮೂಲಕ ಭರವಸೆ ತುಂಬುವ ಪ್ರಯತ್ನವು ಪ್ರತಿರೋಧವಾಗಿದೆ. ಹೀಗೆ ಆತ್ಮಕಥೆಗಳು ದಮನಿತರಲ್ಲಿ ಹೋರಾಟ ಮನೋಭಾವನೆಯನ್ನು ಮೂಡಿಸುವಂತಹ ಭರವಸೆಯನ್ನು ತುಂಬುವಂತಹ ಅಂಶಗಳನ್ನು ಒಳಗೊಂಡಿವೆ.

೧೦. ವರ್ಗ ಮತ್ತು ಜಾತಿ ಕೇಂದ್ರಿತ ಅವಮಾನಗಳು ಪ್ರಾದೇಶಿಕವಾಗಿ ನಗರಗಳಿಗಿಂತ ಗ್ರಾಮೀಣ ಪ್ರದೇಶದಲ್ಲಿಯೇ ಹೆಚ್ಚಾಗಿದ್ದರೆ; ಸಾಮಾಜಿಕವಾಗಿ ಸವರ್ಣೀಯರಿಗಿಂತ ಅಸ್ಪೃಶ್ಯರಲ್ಲಿಯೇ ಹೆಚ್ಚು ಅನುಭವಕ್ಕೆ ಬಂದಿವೆ. ಗ್ರಾಮಗಳು ನಗರಗಳಿಗೆ ಹೋಲಿಸಿದರೆ ಜಾತಿ ವ್ಯವಸ್ಥೆಯು ಗಟ್ಟಿಯಾಗಿ ನೆಲೆಗೊಂಡಿರುವ ತಾಣವಾಗಿದ್ದು, ಇಲ್ಲಿ ಸವರ್ಣೀಯರಿಂದ ದಲಿತರು ಅವಮಾನಕ್ಕೆ ಒಳಗಾಗುತ್ತಾರೆ. ಜಮೀನ್ದಾರಿ ವ್ಯವಸ್ಥೆ ಮತ್ತು ಜಾತಿ ವ್ಯವಸ್ಥೆಯ ಅಡಿಪಾಯದ ಮೇಲೆ ಹಳ್ಳಿಗಳು ರಚನೆಗೊಂಡಿರುವುದರಿಂದ ಮೇಲ್ಜಾತಿಯವರಿಗಿರುವ ಸಾಮಾಜಿಕ, ಆರ್ಥಿಕ ಭದ್ರತೆಯು ಅಸ್ಪೃಶ್ಯರಲ್ಲಿ ಇರುವುದಿಲ್ಲ. ಜೊತೆಗೆ ಅಸ್ಪೃಶ್ಯರಲ್ಲಿ ಶಿಕ್ಷಣ ಮತ್ತು ಸಂಘಟನೆಯ ಕೊರತೆಗಳಿರುವ ಕಾರಣಗಳಿಂದ ಅವಮಾನಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಹೀಗೆ ಪ್ರಭುತ್ವವನ್ನು ಎದುರು ಹಾಕಿಕೊಳ್ಳಲು ಬೇಕಾದ ಸಾಮರ್ಥ್ಯವಿಲ್ಲದಿರುವುದರಿಂದ ನೇರ ಪ್ರತಿರೋಧಗಳಿಲ್ಲದಿದ್ದರೂ, ಪರ್ಯಾಯ ಮಾದರಿಯಲ್ಲಿ ಪ್ರತಿರೋಧಗಳನ್ನು ತೀರಿಸಿಕೊಳ್ಳುವುದು ಆತ್ಮಕಥೆಗಳಲ್ಲಿ ಪ್ರಕಟಗೊಂಡಿವೆ. ನಗರಗಳಲ್ಲಿ ವಲಸೆ, ಶಿಕ್ಷಣ, ವ್ಯಾಪ್ತಿ ಹಿರಿದಾಗಿ ಜಾತಿ ಸಂಕರವಾಗುವುದು ಜಾತಿ ವ್ಯವಸ್ಥೆಯನ್ನು ಅಲ್ಪಮಟ್ಟಿಗೆ ತಗ್ಗಿಸಿರುತ್ತವೆ. ವ್ಯಾಪಾರಿ ಮನೋಭಾವನೆಗಳು ಮತ್ತು ವೃತ್ತಿಪರ ಅವಕಾಶಗಳು ಬಡತನವನ್ನು ನೀಗಿಸಿಕೊಳ್ಳಲು ಕಡಿಮೆ ಪ್ರಮಾಣದಲ್ಲಿ ಪರ್ಯಾಯ ಅವಕಾಶಗಳನ್ನು ಒದಗಿಸಿಕೊಡುತ್ತವೆ. ಜೊತೆಗೆ ಶಿಕ್ಷಣ, ಸಂಘಟನೆ, ಹೋರಾಟಗಳ ಸಂಪರ್ಕದಿಂದ ಅವಮಾನ ಮತ್ತು ಪ್ರತಿರೋಧದ ಪ್ರಜ್ಞೆ ಹಳ್ಳಿಗಳಿಗಿಂತ ಹೆಚ್ಚು ಕಾಣುವುದರಿಂದ ಇಲ್ಲಿ ಹಲವು ಆಯಾಮಗಳಲ್ಲಿ ಪ್ರತಿರೋಧಗಳು ಪ್ರಕಟಗೊಳ್ಳುತ್ತವೆ.

೧೧. ಆತ್ಮಕಥೆಗಳು ಅವಮಾನ ಮತ್ತು ಪ್ರತಿರೋಧಗಳನ್ನು ವಿವಿಧ ಕಥನಕ್ರಮಗಳಲ್ಲಿ ಅಭಿವ್ಯಕ್ತಿಸಿವೆ. 'ಗೌರ್ಮೆಂಟ್ ಬ್ರಾಹ್ಮಣ,' 'ಮಣೆಗಾರ,' 'ಸಂಬೋಳಿ' ಇತ್ಯಾದಿ ಆತ್ಮಕಥೆಗಳು ತಮಗಾದ ಅಪಮಾನಗಳನ್ನು ಓದುಗ ವಲಯಕ್ಕೆ ವೇದನೆ ತುಂಬಿದ, ತಣ್ಣನೆಯ ಧ್ವನಿಯಲ್ಲಿ ಒಪ್ಪಿಸುವಂತೆ ಅಭಿವ್ಯಕ್ತಿಗೊಂಡಿವೆ. ಬಹುಶಃ ಮರಾಠಿ ಆತ್ಮಕಥೆಗಳ ಪ್ರಭಾವ, ತಮ್ಮ ಸಮುದಾಯಗಳು ಇಂದಿಗೂ ಅಪಮಾನಗಳಿಗೆ ಒಳಗಾಗುತ್ತಿರುವುದು ಇನ್ನೂ ಮುಂತಾದ ಕಾರಣಗಳಿಂದ ಈ ಬಗೆಯ ಅಭಿವ್ಯಕ್ತಿ ಬಂದಿದೆ. ಇದಕ್ಕೆ ಭಿನ್ನವಾದ ಕ್ರಮದಲ್ಲಿ ಸಿದ್ಧಲಿಂಗಯ್ಯನವರ ಆತ್ಮಕಥೆಯು ಇದೇ ಅಪಮಾನಗಳನ್ನು ವ್ಯಂಗ್ಯ, ಭರವಸೆಯ, ಯಾವುದೇ ಭೀತಿಯಿಲ್ಲದೇ ಅಭಿವ್ಯಕ್ತಿಸಿದೆ. 'ಊರುಕೇರಿ'ಯು ಪ್ರಕಟಗೊಳ್ಳುವುದಕ್ಕು ಮುಂಚೆ ಪ್ರಕಟಗೊಂಡ ದಲಿತ ಆತ್ಮಕಥೆಗಳು ಅಪಮಾನಿತ ಸಂಗತಿಗಳನ್ನು ಹೆಚ್ಚು ವಿವರಿಸಿರುವುದರಿಂದಲೊ, ದಮನಿತರ ಬದುಕಿನಲ್ಲಿ ಆಗುತ್ತಿರುವ ಬದಲಾವಣೆಯ ಕಾರಣದಿಂದಲೋ, ಆತ್ಮಕಥನಕಾರರ ಹಾಸ್ಯ ದೃಷ್ಟಿಕೋನದಿಂದಲೋ ಅಭಿವ್ಯಕ್ತಿಯಲ್ಲಿ ವೈರುಧ್ಯ ತಂದಿದೆ. ಚಳವಳಿ ಮತ್ತು ಹೋರಾಟಗಳ ಪ್ರಭಾವ ದಮನಿತರ ಬದುಕು ಮತ್ತು ಆತ್ಮಕಥೆಗಳಲ್ಲಿ ಸ್ವಾಭಿಮಾನ ಮತ್ತು ಆತ್ಮವಿಶ್ವಾಸ ಮೂಡಿಸುವಲ್ಲಿ ಪ್ರಧಾನ ಪಾತ್ರವಹಿಸಿರುವುದಷ್ಟೇ ಅಲ್ಲದೇ ಭಿನ್ನ ಭಿನ್ನ ಅಭಿವ್ಯಕ್ತಿ ಮಾದರಿಗಳು ಕಂಡುಬರುವುದಕ್ಕೂ ಇವು ಕಾರಣಗಳಾಗಿವೆ.

೧೨. ಹೋರಾಟದ ಹಿನ್ನೆಲೆಯುಳ್ಳ ಆತ್ಮಕಥನಕಾರರ ಆತ್ಮಕಥೆಗಳ ವಿಶಿಷ್ಟತೆ ಎಂದರೆ ಕೆಲವೊಮ್ಮೆ ಕವನ ಮತ್ತೆ ಕೆಲವೊಮ್ಮೆ ಹೋರಾಟದ ಹಾಡುಗಳು ಹಾಗೆ ಕಥೆ, ಉಪಕಥೆ ಹೀಗೆ ಹಲವು ಬಗೆಯ ಚಂಪೂ ಮಾದರಿಯ ಭಿನ್ನ ನಿರೂಪಣಾ ಮಾದರಿಗಳು ಕಂಡುಬರುತ್ತವೆ. ಇವು ಅವಮಾನ ಮತ್ತು ಪ್ರತಿರೋಧಗಳನ್ನು ಸಾಂಕೇತಿಸುತ್ತವೆ. ಕರ್ನಾಟಕದ ಸಂದರ್ಭದಲ್ಲಿ ನಡೆದ ದಲಿತ, ಬಂಡಾಯ ಚಳವಳಿಯಲ್ಲಿ ಆತ್ಮಕಥನಕಾರರು ಸಹ ಭಾಗವಹಿಸಿದ ಪರಿಣಾಮ ಹಾಗೂ ಆತ್ಮಕಥನಕಾರರು ಮೂಲತಃ ಕವಿಗಳು, ಕವಯಿತ್ರಿಯರು ಇರುವ ಕಾರಣಗಳಿಂದ ಈ ಬಗೆಯ ಅಭಿವ್ಯಕ್ತಿ ಸಾಧ್ಯವಾಗಿದೆ. ಈ ಅಭಿವ್ಯಕ್ತಿ ಮಾದರಿಯು ಓದುಗ ವಲಯ ಸುಲಭವಾಗಿ ಓದಿಸಿಕೊಂಡು ಹೋಗುವಂತೆ ಮಾಡುವಲ್ಲಿ ಸಫಲವಾಗಿದ್ದೂ, ಆಶಯಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಹಿಡಿದಿಡುವಲ್ಲಿ ಪ್ರಮುಖ ಪಾತ್ರವಹಿಸಿವೆ. 'ಸಂಬೋಳಿ'ಯಲ್ಲಿ ಬರುವ 'ನಾಯಿ ಮತ್ತು ಬೆಕ್ಕು' ಉಪಕಥೆಯು ದಲಿತರು, ಮಹಿಳೆಯರು, ಬಡವರೆಲ್ಲರೂ ತಮ್ಮ ಮೇಲಿನ ಅಪಮಾನಗಳನ್ನು ಮೀರಿ, ಅಪಮಾನಿಸುವರ ವಿರುದ್ಧ ಹೋರಾಡಿ ಪ್ರತಿರೋಧ ತೋರಿದರೆ ಖಂಡಿತ ಸಮ ಸಮಾಜವನ್ನು ನಿರ್ಮಿಸಬಹುದು ಎಂಬ ಆಶಯವನ್ನು ಧ್ವನಿಸುತ್ತಿದೆ. ಈ ರೀತಿಯ ಹೋರಾಟದ ಹಾಡುಗಳು ಮತ್ತು ಉಪಕಥೆಗಳು ಓದುಗ ವಲಯದಲ್ಲಿ ಒಂದು ಬಗೆಯ ಸಮ ಸಮಾಜವನ್ನು ನಿರ್ಮಿಸಲು ಪ್ರೇರಣೆ ನೀಡುವಂತೆ ವ್ಯಕ್ತವಾಗಿವೆ. ಆದರೆ ಈ ಅಭಿವ್ಯಕ್ತಿ ಮಾದರಿಯು ಎಸ್.ಎಲ್.ಭೈರಪ್ಪ ಹಾಗೂ ಸ.ಜ. ನಾಗಲೋಟಿಮಠ ಅವರ ಆತ್ಮಕಥೆಗಳಲ್ಲಿ ಕಾಣುವುದಿಲ್ಲ. ಬಹುಶಃ ಇದಕ್ಕೆ ದಲಿತ, ಬಂಡಾಯ ಚಳವಳಿಗಳ ಹಿನ್ನೆಲೆ ಆತ್ಮಕಥನಕಾರರಿಗೆ ಇಲ್ಲದಿರುವುದರ ಕಾರಣವಿರಬಹುದು ಅಥವಾ ಹೊಸ ಮಾದರಿಯ ಅಭಿವ್ಯಕ್ತಿ ವಿಧಾನವನ್ನು ಈ ಕೃತಿಕಾರರು ಅನುಸರಿಸಿರುವುದು ಇರಬಹುದು.

೧೩. ಕನ್ನಡ ಆತ್ಮಕಥೆಗಳ ಶೀರ್ಷಿಕೆಗಳಲ್ಲಿ ಮುಖ್ಯವಾಗಿ ನಾಲ್ಕು ಸಂಗತಿಗಳು ಕಾಣುತ್ತವೆ. ಅಸ್ಪೃಶ್ಯ ಹಿನ್ನೆಲೆಯ ಆತ್ಮಕಥನಕಾರರು ತಮ್ಮ ಸಮುದಾಯಗಳ ಹೆಸರುಗಳನ್ನೇ ಆತ್ಮಕಥೆಗಳ ಶೀರ್ಷಿಕೆಗಳನ್ನಾಗಿ ಬಳಸಿಕೊಂಡಿರುವುದು ಮೊದಲನೆಯ ಸಂಗತಿ; ಇದರ ಮೂಲಕ ತಮ್ಮ ಸಮುದಾಯಗಳ ದುರ್ಭರ ಬದುಕನ್ನು ಲೋಕದೆದುರು ತೆರೆದಿಡುವ ಹಾಗೂ ಅಪಮಾನಿಸುವುದಕ್ಕಾಗಿಯೇ ಅವುಗಳನ್ನು ಬಳಸುತ್ತಾರೆಂದು ಹೇಳುವುದು ಎರಡನೆಯ ಸಂಗತಿ. ಇವುಗಳೆಲ್ಲವನ್ನು ಮೀರಿ ಅವಮಾನಿಸಲು ಕರೆಯುವ ಜಾತಿ ಸೂಚಕ ಪದಗಳನ್ನೇ ಪ್ರತಿರೋಧದ, ಸ್ವಾಭಿಮಾನದ ಸಾಂಕೇತಿಕವಾಗಿ ಬಳಸಿರುವುದು ಮೂರನೆಯ ಸಂಗತಿ. ಈ ರೀತಿ 'ಮಣೆಗಾರ', 'ಸಂಬೋಳಿ' ಸಮುದಾಯ ಕೇಂದ್ರಿತ ಶೀರ್ಷಿಕೆಗಳು ದಲಿತ ಆತ್ಮಕಥೆಗಳಲ್ಲಿದ್ದರೆ; ದಲಿತೇತರ ಆತ್ಮಕಥೆಗಳಲ್ಲಿ ಅವು ಸಾಹಿತ್ಯಕ ರೂಪಕಗಳಾಗಿರುವುದು ನಾಲ್ಕನೆಯ ಸಂಗತಿ. 'ಭಿತ್ತಿ', 'ಬಿಚ್ಚಿದ ಜೋಳಿಗೆ' ಶೀರ್ಷಿಕೆಗಳು ಸಮುದಾಯ ಕೇಂದ್ರಿತ ಶೀರ್ಷಿಕೆಗಳಾಗದೆ ಬದುಕಿನ ಅನುಭವಗಳ ಅಭಿವ್ಯಕ್ತಿಯ ರೂಪಕಗಳಾಗಿ ಬಳಕೆಯಾಗಿವೆ. ಇದಕ್ಕೆ ಕಾರಣ ದಲಿತರಿಗೆ ಜಾತಿ ಮತ್ತು ಜಾತೀಯತೆಗಳು ಉಂಟು ಮಾಡಿದ ಅಪಮಾನಗಳು

ಸವರ್ಣೀಯ ಲೇಖಕರ ಬದುಕಿನಲ್ಲಿ ಹೆಚ್ಚು ಕಂಡುಬಂದಿಲ್ಲದೆ ಇರುವುದು. ಸವರ್ಣೀಯ ಸಮುದಾಯಗಳ ಹೆಸರುಗಳು ಬೈಗುಳಗಳಾಗಿಯೋ ಅಥವಾ ನಿಂದಕಗಳಾಗಿಯೋ ಬಳಕೆಯಾಗದೆ, ಗೌರವ ಸೂಚಕ ಪದಗಳಾಗಿ ರೂಪುಗೊಂಡಿರುವುದು. ದಲಿತ ಆತ್ಮಕಥೆಗಳು ಈಗಾಗಲೇ ಬಳಸಿರುವ ಶೀರ್ಷಿಕೆ ಮಾದರಿಗಳನ್ನು ಮೀರುವ ಕಾರಣಗಳಿರಬಹುದು. ಇವೆಲ್ಲ ಆತ್ಮಕಥೆಗಳಿಂದ ಆತ್ಮಕಥೆಗಳನ್ನು ಭಿನ್ನವಾಗಿಸಿವೆ.

೧೪. ದಲಿತರು ಮತ್ತು ತೃತೀಯ ಲಿಂಗಿಗಳನ್ನು ಅವಮಾನಿಸಲು ಕೆಲವು ವಿಶೇಷ ಪದಗಳನ್ನು ಬಳಸುವುದು ಕನ್ನಡ ಆತ್ಮಕಥೆಗಳು ಕಾಣಿಸುತ್ತವೆ. ಇವು ದಮನಿತರ ಬಗ್ಗೆ ಇರುವ ಅಸಹಿಷ್ಣುತೆಯ ಫಲಗಳಾಗಿವೆ. 'ದೇವರ ಮಕ್ಳು', 'ಸರಕಾರದ ಮಕ್ಳು' 'ಗೌರ್ಮೆಂಟ್ ಬ್ರಾಹ್ಮಣ' ಎಸ್ಸಿ, ಎಸ್ಟಿ, 'ಚಾಂಡಾಲರ ಮಕ್ಕಳು' ಮುಂತಾದ ಕೆಲವು ಪದಗಳು ದಲಿತರನ್ನು ಅಪಮಾನಿಸುವ ಪದಗಳಾಗಿದ್ದರೆ, 'ನಂಬರ್ ನೈನ್' 'ಹಿಜಡಾ' 'ಚಕ್ಕ' ಇವು ತೃತೀಯ ಲಿಂಗಿಗಳನ್ನು ಅಪಮಾನಿಸಲು ಮತ್ತು ಗುರುತಿಸಲು ಬಳಸುವ ಪದಗಳಾಗಿವೆ. ದಲಿತರ ಬದುಕಿನಲ್ಲಿ ಆಗುತ್ತಿರುವ ಸುಧಾರಣೆಯನ್ನು ಸಹಿಸದ ದಲಿತೇತರ ಸಮುದಾಯಗಳು ಕೆಲವು ವಿಶೇಷ ನಿಂದನಾ ನುಡಿಗಟ್ಟುಗಳನ್ನು ದಲಿತರಿಗೆ ಅವಮಾನಿಸುವುದಕ್ಕೆ ಬಳಸುವುದನ್ನು ಕಾಣಬಹುದು. ಅವಕಾಶಗಳಿಂದ ವಂಚಿತರಾದ ದಮನಿತರು ಇರುವ ಕಡಿಮೆ ಅವಕಾಶಗಳನ್ನೇ ಪಡೆದು ಸುಧಾರಣೆಯಾಗುವುದರ ಕಡೆ ಚಲಿಸುತ್ತಿರುವುದನ್ನು ಸಹಿಸದಿರುವುದು ಒಂದು ಕಾರಣವಾದರೆ, ದಮನಿತರು ಏನು ಸಾಧಿಸಿದರೂ ಅದು ಮೀಸಲಾತಿಯಿಂದಲೇ ಎಂದು ತಿಳಿದುಕೊಂಡಿರುವುದು ಎರಡನೆಯ ಕಾರಣ. ಇಲ್ಲಿ ದಲಿತರ ಪ್ರತಿಭೆಗೆ ಬೆಲೆಯಿಲ್ಲ. ಇದರ ಜೊತೆಗೆ ಮತ್ತೊಂದು ಕ್ರಮವಿದೆ ಅದು ದಲಿತರೆಲ್ಲ ಇಂದು ಬಲಿತರಾಗಿದ್ದಾರೆ ಎನ್ನುವುದು. ಆದರೆ ವಾಸ್ತವ ಬೇರೆಯೇ ಇದೆ. ನಿಜವಾದ ಅವಕಾಶ ವಂಚಿತರಿಗೆ ಸೌಲಭ್ಯಗಳು ಪರಿಪೂರ್ಣವಾಗಿ ತಲುಪದಂತಾಗಿವೆ.

ಮೇಲೆ ವಿವರಿಸಿದ ಪದಗಳೇ ದಲಿತರಿಗೆ ಮತ್ತು ತೃತೀಯ ಲಿಂಗಿಗಳಿಗೆ ಎಷ್ಟೋ ಬಾರಿ ಅವಮಾನಗಳನ್ನುಂಟು ಮಾಡಿವೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಇವರಿಗೆ ಗೌರವ ಕೊಡಲಾಗುತ್ತದೆ. ಇನ್ನುಳಿದ ಸಂದರ್ಭಗಳಲ್ಲಿ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. ಈ ಎಲ್ಲಾ ಸಂಕೀರ್ಣ ಆಯಾಮಗಳನ್ನು ಆತ್ಮಕಥೆಗಳು ಸೂಕ್ಷ್ಮವಾಗಿ ಕಾಣಿಸುತ್ತವೆ. ಈ ಅರ್ಥದಲ್ಲಿ ಆತ್ಮಕಥೆಗಳು ಕರ್ನಾಟಕ ಸಮಾಜದ ಚಲನೆಯನ್ನು ಕಾಣಿಸುವ ಕನ್ನಡಿಗಳಾಗಿವೆ.

೧೫. ಎಲ್ಲಾ ಜಾತಿಯೊಳಗಿನ ಬಡವರು ಆಯಾ ಜಾತಿಯೊಳಗಡೆ ದಮನಿತರಿದ್ದಂತೆ. ಒಂದೇ ಜಾತಿಯೊಳಗಿನ ಭಿನ್ನ ವರ್ಗಗಳ (ಬಡವ ಮತು ಶ್ರೀಮಂತ) ನಡುವಿನ ತಾರತಮ್ಯಗಳು ಸಹ ಅವಮಾನಗಳಿಗೆ ಕಾರಣಗಳಾಗಿವೆ. ಎಸ್.ಎಲ್. ಭೈರಪ್ಪನವರು ತಮ್ಮದೇ ಸಮುದಾಯದವರಿಂದ ಅವಮಾನಕ್ಕೆ ಒಳಗಾಗುವುದಾಗಿರಬಹುದು; 'ಗೊಂದಲಿಗ್ಯಾ'ದಲ್ಲಿ ತಮ್ಮದೇ ಸಮುದಾಯದ ಹೆಣ್ಣು

ಮಗಳನ್ನು ಹೊರಗಡೆ ನಿಲ್ಲಿಸುವ ಪ್ರಸಂಗವಾಗಿರಬಹುದು. ಜಾತಿ ಯಾವುದಾದರೂ ಅದರೊಳಗಿರುವ ವರ್ಗ ತಾರತಮ್ಯ ಅವಮಾನಗಳನ್ನುಂಟು ಮಾಡಿ ಆಯಾ ಜಾತಿಯೊಳಗಿನ ಬಡವರನ್ನು ದಮನಿತರಂತೆ ನೋಡಲಾಗುತ್ತದೆ. ವರ್ಗಭೇದ ಮತ್ತು ವರ್ಗಾಪಮಾನವು ಸ್ವಜಾತಿಗಳಲ್ಲಿ ಸಹಜವಾಗಿರುವ ಸಹಾನುಭೂತಿಯನ್ನು ಕೂಡ ಮೀರಿ ಪ್ರಕಟವಾಗುತ್ತದೆ. ಆದರೆ ಈ ವರ್ಗಾಪಮಾನಕ್ಕೆ ಇನ್ನೊಂದು ಆಯಾಮವಿದೆ. ಸಾಂಸ್ಕೃತಿಕ, ಆರ್ಥಿಕ ಶ್ರೇಷ್ಠತೆ ಮತ್ತು ಕನಿಷ್ಠತೆಗಳು ಅವಮಾನ ಮತ್ತು ಪ್ರತಿರೋಧಗಳನ್ನು ಪ್ರಭಾವಿಸುತ್ತವೆ. ಆರ್ಥಿಕ ದುಸ್ಥಿತಿಯ ಕಾರಣಕ್ಕಾಗಿ ಎಸ್.ಎಲ್.ಭೈರಪ್ಪನವರು ಅವಮಾನ ಅನುಭವಿಸಿದ್ದರೂ, ಅವರ ಜಾತಿಯಾಧಾರಿತ ಸಾಂಸ್ಕೃತಿಕ ಶ್ರೇಷ್ಠತೆ ಅವಮಾನದ ಪ್ರಮಾಣವನ್ನು ನಿಯಂತ್ರಿಸಿದೆ. ಇದರ ಜೊತೆಗೆ ಹಸಿವು ನೀಗಿಸಿಕೊಳ್ಳಲು ಪರ್ಯಾಯ ಅವಕಾಶಗಳನ್ನು ನೀಡಿದೆ. ದಲಿತರ ಸಾಂಸ್ಕೃತಿಕ ಮತ್ತು ಆರ್ಥಿಕ ಕನಿಷ್ಠತೆ (ಅಸ್ಪೃಶ್ಯತೆ ಮತ್ತು ಬಡತನ)ಗಳೆರಡೂ ಹಲವು ಬಗೆಯ ಅವಮಾನಗಳಿಗೆ ಕಾರಣವಾಗಿವೆ.

೧೬. 'ಸಾಂಸ್ಕೃತಿಕ ಶ್ರೇಷ್ಠತೆ'ಯ ಸವರ್ಣೀಯರು ಆರ್ಥಿಕ ಕನಿಷ್ಠತೆಯ ಕಾರಣಕ್ಕೆ ಅವಮಾನಗಳನ್ನು ಅನುಭವಿಸಿದ್ದರೂ ಸಹ ಆರ್ಥಿಕ ಪರಿಸ್ಥಿತಿ(ಬಡತನ) ಸುಧಾರಿಸಿದ ನಂತರ ಅವರಿಗೆ ಅವಮಾನಗಳಾಗದಿರುವುದು ಕಂಡುಬರುತ್ತದೆ; ಆದರೆ ಆರ್ಥಿಕ ಕನಿಷ್ಠತೆಯ ಕಾರಣಕ್ಕಾಗಿ ದಲಿತರು ಅವಮಾನಗಳನ್ನು ಅನುಭವಿಸಿ, ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸಿದರೂ ಸಾಂಸ್ಕೃತಿಕ ಕನಿಷ್ಠತೆಯ (ಅಸ್ಪೃಶ್ಯತೆಯ) ಕಾರಣಕ್ಕಾಗಿ ಅವಮಾನಗಳನ್ನು ಅನುಭವಿಸುವುದು ತಪ್ಪುವುದಿಲ್ಲ. 'ಮಣೆಗಾರ' ಆತ್ಮಕಥೆಯ ಚೆನ್ನಿಗರಾಮಯ್ಯ ಮಂತ್ರಿಯಾದರೂ ಅಸ್ಪೃಶ್ಯತೆಯ ಅವಮಾನ ಅನುಭವಿಸುವುದನ್ನು ಗಮನಿಸಬಹುದು. ಆತ್ಮಕಥೆಗಳಲ್ಲಿ ಹುಟ್ಟು ವ್ಯಕ್ತಿಯ ಬದುಕನ್ನು ಪ್ರಬಲವಾಗಿ ಪ್ರಭಾವಿಸುವ ಅಂಶವಾಗಿದೆ. ಹುಟ್ಟಿನ ವಿಷಯಕ್ಕೆ ಬಂದರೆ ವ್ಯಕ್ತಿಗಳು ಯಾವ ಸಾಮಾಜಿಕ, ಆರ್ಥಿಕ ಹಿನ್ನೆಲೆಯಲ್ಲಿ ಹುಟ್ಟಿರುತ್ತಾರೆ. ಎಂಬುದರ ಮೇಲೆ ಅವರ ಬದುಕು ನಿರ್ಧಾರವಾಗಿರುತ್ತದೆ. ಜಾತಿಯ ಮೂಲ ಸ್ವರೂಪವಿರುವುದು ಈ ಹುಟ್ಟಿನಲ್ಲಿಯೇ. ಹುಟ್ಟಿನಿಂದ ದಲಿತರಾದವರು ಆರ್ಥಿಕವಾಗಿ ಸಬಲರಾದರೂ ಹುಟ್ಟಿನ ಹಿನ್ನೆಲೆ ಅವರನ್ನು ಅನೇಕ ಅವಮಾನಗಳಿಗೆ ದೂಡುತ್ತದೆ. ಜೊತೆಗೆ ತೃತೀಯ ಲಿಂಗಿಗಳೂ ಸಹ ಆರ್ಥಿಕವಾಗಿ ಸಬಲರಾದರು ಲಿಂಗದ ಕಾರಣಕ್ಕೆ ಅವಮಾನಗಳಿಗೆ ಒಳಗಾಗುವುದನ್ನು ಆತ್ಮಕಥೆಗಳಲ್ಲಿ ಗುರುತಿಸಬಹುದಾಗಿದೆ.

೧೭. ಅವಮಾನ ಮತ್ತು ಪ್ರತಿರೋಧಗಳು ಕಾಲ, ಪ್ರಜ್ಞೆ, ಮತ್ತು ಸಂಘಟನೆಯ ಹಿನ್ನೆಲೆಗಳನ್ನು ಆಧರಿಸಿ ಭಿನ್ನ ಭಿನ್ನವಾಗಿ ಅಭಿವ್ಯಕ್ತಿಯಾಗಿರುವುದು ಕನ್ನಡ ಆತ್ಮಕಥೆಗಳಲ್ಲಿ ಕಾಣುವ ಮುಖ್ಯ ಸಂಗತಿಗಳು. ಆತ್ಮಕಥನಕಾರರ ಆರಂಭದ ದಿನಗಳು ಅವಮಾನಗಳನ್ನು ಸಹಿಸಿಕೊಳ್ಳುವುದರ ಭಾಗವಾಗಿಯೇ ಹೆಚ್ಚು ಕಂಡುಬರುತ್ತವೆ. ದಮನಿತರಲ್ಲಿನ ಅವಮಾನದ ಪ್ರಜ್ಞೆಯ ಕೊರತೆ, ಸಮುದಾಯದ ಅಸಹಾಯಕತೆ, ಆರ್ಥಿಕ ಬಲವಿಲ್ಲದೆ ಪ್ರತಿಯೊಂದಕ್ಕೂ ಪ್ರಭುತ್ವವನ್ನೇ ಅವಲಂಬಿಸಿರುವುದು,

ಪ್ರಭುತ್ವದ ಆರ್ಥಿಕ, ಸಾಮಾಜಿಕ ದಬ್ಬಾಳಿಕೆ ಮನೋಭಾವನೆ ಅವಮಾನಗಳನ್ನು ಸಹಿಸಿಕೊಳ್ಳುವುದರ ಹಿಂದಿನ ಕಾರಣಗಳಾಗಿವೆ. 'ಗೊಂದಲಿಗ್ಯಾ'ದಲ್ಲಿ ಮೇಲ್ಜಾತಿಯ ತಿಮ್ಮನಗೌಡ ಮಾಡಿದ ತಪ್ಪಿಗೆ, ತಪ್ಪೇ ಮಾಡದ ಲೇಖಕರು ಹಲ್ಲೆಗೊಳಗಾಗುವುದು ಮತ್ತು ಭಯದಿಂದ ಅವರ ತಾಯಿ ಗೌಡನ ಬಳಿ ಕ್ಷಮೆ ಬೇಡುವುದು ದಮನಿತರು ಅವಮಾನಗಳನ್ನು ಪ್ರತಿರೋಧಿಸಲಾಗದ ಅಸಹಾಯಕತೆಯನ್ನು ಪ್ರಕಟಿಸುತ್ತವೆ.

೧೮. ಆತ್ಮಕಥೆಗಳ ಆರಂಭದ ದಿನಗಳಲ್ಲಿ ಪ್ರತಿರೋಧಗಳು ಕಂಡುಬಂದರೂ ಅವು ಅಸಹಾಯಕ ರೂಪದಲ್ಲಿಯೇ ಹೆಚ್ಚಾಗಿವೆ. ಕೆಲವೊಮ್ಮೆ ಪ್ರತಿರೋಧ ತೋರಿಸಲು ದೈವತ್ವದ ಮೊರೆ ಹೋಗುವುದು, ಶಾಪ ಹಾಕುವುದರ ಜೊತೆಗೆ ಪರ್ಯಾಯ ಮಾರ್ಗಗಳ ಮೂಲಕ ಪ್ರತಿರೋಧ ತೋರುವುದು ಕಂಡುಬರುತ್ತದೆ. ಈ ಅಸಹಾಯಕತೆಯ ಪ್ರತಿರೋಧಗಳು ಶೋಷಕರ ಮೇಲೆ ಯಾವ ಪರಿಣಾಮ ಬೀರದಿದ್ದರೂ, ಅಪಮಾನಿತರಲ್ಲಿ ಒಂದು ಬಗೆಯ ಮಾನಸಿಕ ಕಿರುಕುಳವನ್ನು ತಪ್ಪಿಸಿ, ನೆಮ್ಮದಿಯನ್ನುಂಟು ಮಾಡುವುದರ ಭಾಗವಾಗಿವೆ. ಉದಾಹರಣೆಗೆ 'ಗೌರ್ಮೆಂಟ್ ಬ್ರಾಹ್ಮಣ'ದ ದೈವಿಕ ಶಕ್ತಿಯ ಮೊರೆ ಹೋಗುವುದರ ಪ್ರಸಂಗವಿದೆ. 'ಭಿತ್ತಿ'ಯಲ್ಲಿ ಅವಮಾನಿಸಿದವರಿಗೆ ಶಾಪ ಹಾಕುವ ಸನ್ನಿವೇಶವಿದೆ. 'ಸಂಬೋಳಿ' ಯಲ್ಲಿ ತಮಗೆ ಹಲ್ಲೆ ಮಾಡಿದವನನ್ನು ಶಿಳ್ಳೆ ಹೊಡೆಯುವುದರ ಮೂಲಕ ಕಿಚಾಯಿಸುವ ಸನ್ನಿವೇಶವಿದೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿ ಊಟದ ಮೇಲಿನ ನಿರ್ಬಂಧಗಳನ್ನು ಮೀರುವ ತಂತ್ರವಿದೆ. ಈ ನಾಲ್ಕು ಸನ್ನಿವೇಶಗಳಲ್ಲಿನ ಪ್ರತಿರೋಧಗಳು ದಮನಿತರಲ್ಲಿ ಅಪಮಾನಗಳ ನಡುವೆಯು ಬದುಕುವ ಭರವಸೆಯನ್ನು ಮೂಡಿಸಿವೆ. ಸಾಮಾಜಿಕ ಅಸಹಾಯಕತೆಯು ದೈವಶ್ರದ್ಧೆಗೆ ಕಾರಣವಾಗಿರುವುದನ್ನು ಆ ಮೂಲಕ ಪರೋಕ್ಷವಾಗಿ ಸನ್ನಿವೇಶ ಎದುರಿಸಲು ಶಕ್ತಿ ತುಂಬಿರುವುದನ್ನು ಈ ಪ್ರಸಂಗಗಳು ಕಾಣಿಸುತ್ತವೆ. ಮಾರ್ಕ್ಸ್ ಹೇಳುವಂತೆ ಧರ್ಮವು ಅಫೀಮಾಗಿದ್ದರೂ, ಅದು ಹೃದಯಹೀನ ಸಮಾಜದಲ್ಲಿ ಹೃದಯವಾಗಿ ಕೆಲಸ ಮಾಡಿರುವುದನ್ನೂ ಈ ಸನ್ನಿವೇಶಗಳು ಧ್ವನಿಸುತ್ತವೆ.

೧೯. ಆತ್ಮಕಥೆಗಳಲ್ಲಿ ಲೇಖಕರ ಬಾಲ್ಯದ ನಂತರದ ದಿನಗಳು ಬಹುತೇಕ ಅವಮಾನಗಳನ್ನು ಸಹಿಸದಿರುವ, ಪ್ರತಿರೋಧ ತೋರುವುದರ ಭಾಗವಾಗಿವೆ. ಲೇಖಕರ ತಾರುಣ್ಯದ ಭಾಗಗಳು ದಮನಿತರು ಸಂಘಟನೆಗೊಂಡಿದ್ದು, ವೈಚಾರಿಕ ಪ್ರಜ್ಞೆ ಬಂದಿರುವುದರ ಕಾರಣಗಳಿಂದ ಶೋಷಕ ವ್ಯವಸ್ಥೆಯನ್ನು ನಿರಾಕರಣೆ ಮಾಡುವುದು, ಪ್ರಶ್ನಿಸುವುದು, ಕೆಲವೊಮ್ಮೆ ಹೋರಾಟಗಳ ಮೂಲಕ ಪ್ರತಿರೋಧಿಸುವುದರ ಭಾಗವಾಗಿವೆ. 'ಭಿತ್ತಿ'ಯಲ್ಲಿ ಪ್ರಶ್ನಿಸುವ ಪ್ರತಿರೋಧಗಳು ಕಂಡುಬಂದರೆ, 'ಉಚಲ್ಯಾ'ದಲ್ಲಿನ ಕಾರ್ಮಿಕ ಹೋರಾಟವು ಸಂಘಟನಾತ್ಮಕ ಪ್ರತಿರೋಧಗಳಿಗೆ ಉದಾಹರಣೆಯಾಗಿದೆ. ಲೇಖಕರ ವಯಸ್ಸಿಗೂ ಅವರು ಅನುಭವಿಸುವ ಅಪಮಾನ ಮತ್ತು ಮಾಡುವ ಪ್ರತಿರೋಧಗಳಿಗೂ ಹೀಗೆ ಸಂಬಂಧ ಏರ್ಪಟ್ಟಿದೆ.

೨೦. ಪ್ರಭುತ್ವದ ಕುರಿತಾದ ಧೋರಣೆಯು ದಲಿತ ಆತ್ಮಕಥೆಗಳಲ್ಲಿ ಏಕಮುಖವಾಗಿಲ್ಲ; ಬದಲಿಗೆ ವೈರುಧ್ಯಗಳಿಂದ ಕೂಡಿದ್ದು, ಆಯಾ ವ್ಯಕ್ತಿಗಳ, ಸಮುದಾಯದ ಸ್ಥಿತಿಗತಿಗಳಿಗೆ ಅನುಗುಣವಾಗಿವೆ. 'ಊರುಕೇರಿ'ಯನ್ನು ಸಿದ್ಧಲಿಂಗಯ್ಯನವರು ರಾಮಕೃಷ್ಣ ಹೆಗಡೆಯವರಿಗೆ ಅರ್ಪಣೆ ಮಾಡಿದ್ದಾರೆ; ಇದಕ್ಕೆ ಭಿನ್ನವಾಗಿ 'ಮಣೆಗಾರ'ದ ರಾಮಕೃಷ್ಣ ಹೆಗಡೆಯವರ ಆಡಳಿತದಲ್ಲಿನ ದಲಿತರ ಮೇಲಿನ ಹಲ್ಲೆಗಳ ಕುರಿತು ಹೋರಾಟ ಮಾಡುವಾಗ ಮುಖ್ಯಮಂತ್ರಿಯಾದ ಹೆಗಡೆಯವರು ಪಲಾಯನ ಮಾಡುವುದರ ಕುರಿತು ವಿವರಣೆಯಿದೆ. ಹೀಗೆ ಭಿನ್ನ ನಿಲುವುಗಳು ಕನ್ನಡ ಆತ್ಮಕಥೆಗಳಲ್ಲಿವೆ. ಸಮಾಜದಲ್ಲಿ ಲೇಖಕರು ಅನುಭವಿಸುವ ಅಪಮಾನ ಮತ್ತು ತೋರುವ ಪ್ರತಿರೋಧಗಳ ನಂತರ ಬೆಳವಣಿಗೆಗಳಲ್ಲಿ ಪಡೆಯುವ ಮಾನ್ಯತೆಯು ಒಟ್ಟು ಪ್ರಕ್ರಿಯೆಯ ಭಾಗವಾಗಿದೆ. ಈ ಮಾನ್ಯತೆ ಪಡೆಯುವಿಕೆಯ ಹಂತದಲ್ಲಿ ಪ್ರಭುತ್ವವು ಬೇರೆ ಬೇರೆ ಬಗೆಯಲ್ಲಿ ಪಾತ್ರವಹಿಸುತ್ತದೆ.

೨೧. ಸಂಪ್ರದಾಯಗಳೆಂದು ಕರೆಯಲಾಗುವ ಕೆಲವು 'ನಂಬಿಕೆ', ಮೂಢನಂಬಿಕೆಗಳು ದಲಿತರಿಗೆ, ಮಹಿಳೆಯರಿಗೆ ಅವಮಾನಿಸುವ ಪರಿಕರಗಳಾಗಿವೆ. ಇಂತಹ ಅವಮಾನಗಳು ಬಹುತೇಕ ಸಾಮೂಹಿಕವಾಗಿ ನಡೆಯುತ್ತವೆ. 'ಗೌರ್ಮೆಂಟ್ ಬ್ರಾಹ್ಮಣ'ದಲ್ಲಿರುವ ಬಿದುರಕುಂದಿಯ ಪ್ರಸಂಗವು ಸಂಪ್ರದಾಯದ ಹೆಸರಲ್ಲಿ ನಡೆಯುವ ಶೋಷಣೆಗೆ ಉದಾಹರಣೆಯಾಗಿದೆ. ಇಂತಹ ಅವಮಾನಗಳು ಕೇವಲ ಅಸ್ಪೃಶ್ಯರಿಗೆ ಮತ್ತು ಅಸ್ಪೃಶ್ಯ ಮಹಿಳೆಯರಿಗೆ ಮಾತ್ರ ಸೀಮಿತವಾಗಿವೆ. ಆದ್ದರಿಂದ ಅಪಮಾನಗಳು ಲಿಂಗಸಂಬಂಧಿಯಾದ ಆಯಾಮವನ್ನು ಸಹ ಒಳಗೊಂಡಿವೆ. ಕೆಲವು ಆತ್ಮಕಥೆಗಳು ಮಹಿಳೆಯನ್ನು 'ಸಾಂಪ್ರದಾಯಿಕ ಆದರ್ಶ'ಗಳ ನೆಲೆಗಳಲ್ಲಿ ಆರಾಧಿಸುವ ಹಾಗೂ ವಾಸ್ತವದಲ್ಲಿ ಶೋಷಿಸುವ ಎರಡೂ ಮಾದರಿಗಳನ್ನು ಅಲ್ಲಗಳೆಯುತ್ತವೆ. ಈ ಮೂಲಕ ಸಮತೆಯ ನೆಲೆಯಲ್ಲಿ ಸಮಾಜವನ್ನು ಕಟ್ಟಲು ಬೇಕಾದ ಅನಿವಾರ್ಯತೆಯನ್ನು ತಿಳಿಸಿಕೊಡುತ್ತವೆ. 'ಮಾತಂಗಿ ದೀವಟಿಗೆ'ಯಲ್ಲಿನ ದೇವದಾಸಿ ಪದ್ಧತಿಯ ವಿರೋಧ, 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರೆಹದಲ್ಲಿ ಬರುವ ತಲಾಕ್ ಪದ್ಧತಿ, ಪರದಾ ಪದ್ಧತಿಯ ನಿರಾಕರಣೆ, ಗೌರ್ಮೆಂಟ್ ಬ್ರಾಹ್ಮಣ'ದ ಬಿದರಕುಂದಿಯ ಪ್ರಸಂಗವನ್ನು ವಿರೋಧಿಸುವ ಸಂಗತಿಗಳನ್ನು ಉದಾಹರಣೆಗಳಾಗಿ ನೋಡಬಹುದಾಗಿದೆ.

೨೨. ಆತ್ಮಕಥೆಗಳಲ್ಲಿ ಕೌಟುಂಬಿಕವಾಗಿ ಹುಟ್ಟಿದ ಶಿಕ್ಷಣದ ಅರಿವು ಮತ್ತು ವೈಚಾರಿಕ ಪ್ರಜ್ಞೆಯು ಕೌಟುಂಬಿಕತೆಯ ಹೊರಗಿನಿಂದ ಬರುವ ಸಾಂಪ್ರದಾಯಿಕ ಮೂಲಭೂತವಾದಿತನಗಳನ್ನು ಹೇರುವ ಮನೋಭಾವನೆಗಳನ್ನು ಧಿಕ್ಕರಿಸಿ ಹೊಸ ಬದುಕಿಗೆ ತೆರೆದುಕೊಂಡಿದ್ದು ಒಂದು ಬಗೆಯ ಪ್ರತಿರೋಧವಾಗಿದೆ. ಸಾರಾ ಅಬೂಬಕ್ಕರ್ ಅವರ ತಂದೆ ಮತ್ತು ಸಹೋದರರು ಧಾರ್ಮಿಕ ಮೌಢ್ಯರು ಸಾರಾ ಅವರಿಗೆ ಕೊಡುವ ಶಿಕ್ಷಣ ನಿಲ್ಲಿಸಿ, ಬುರ್ಕಾ ಹಾಕಿಸುವಂತೆ ಹೇಳಿದಾಗ ಅದನ್ನು ಅವರು ಧರ್ಮದ ಚೌಕಟ್ಟಿನೊಳಗಡೆಯೇ ವಿರೋಧಿಸುವುದು ಕಾಣುತ್ತದೆ. 'ಮಾತಂಗಿ ದೀವಟಿಗೆ'ಯ ಸಮತಾ ದೇಶಮಾನೆಯವರ ತಂದೆ ಮತ್ತು ತಾಯಿಯರು ದೇವದಾಸಿ ಪದ್ಧತಿಗೆ ಮಗಳನ್ನು

ಒಳಪಡುವಂತೆ ಮಾಡಲು ಪ್ರಯತ್ನಿಸಿದ ವ್ಯವಸ್ಥೆಯನ್ನು ವಿರೋಧಿಸಿ ಮಗಳಿಗೆ ಡಾಕ್ಟರ್ ಮಾಡುವರು. ಈ ಸನ್ನಿವೇಶಗಳು ಕಂದಾಚಾರಗಳಿಗೆ ಸ್ವತಃ ಎಚ್ಚೆತ್ತ ದಮನಿತರು ತೋರಿದ ಪ್ರತಿರೋಧಗಳೇ ಆಗಿವೆ. ಆಧುನಿಕೀಕರಣ, ಶಿಕ್ಷಣೀಕರಣ ಹಾಗೂ ನಗರಕ್ಕೆ ಸ್ಥಳಾಂತರಗಳು ಅಪಮಾನದಿಂದ ತಪ್ಪಿಸಿಕೊಳ್ಳುವ ಪರ್ಯಾಯ ಉಪಾಯಗಳಾಗಿ ಹಾಗೂ ಪರೋಕ್ಷವಾಗಿ ಪ್ರತಿರೋಧದ ಮಾರ್ಗಗಳಾಗಿ ಬರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ.

೨೩. ಕನ್ನಡದಲ್ಲಿ ಮಹಿಳಾ ಆತ್ಮಕಥೆಗಳು ಪುರುಷ ಆತ್ಮಕಥೆಗಳಿಗೆ ಹೋಲಿಸಿದರೆ ಕಡಿಮೆ ಪ್ರಮಾಣದಲ್ಲಿದ್ದು, ಇವುಗಳ ಭಾಗವಾಗಿ ಪುರುಷ ಪ್ರಧಾನ ಮನೋಭಾವನೆಗಳು ಜನಸಾಮಾನ್ಯರಲ್ಲಷ್ಟೇ ಅಲ್ಲದೆ, ಪ್ರಧಾನ ಧಾರೆಯ ಕೆಲವು ಲೇಖಕರಲ್ಲೂ ಕಾಣಬಹುದಾಗಿದೆ. ಇಂತಹವುಗಳನ್ನು ಮೀರಿ ಲೇಖಕಿಯರು ಬರಹಕ್ಕೆ ತೊಡಗಿಸಿಕೊಂಡಿರುವುದೇ ಪ್ರತಿರೋಧವಾಗಿದೆ. ಆರಂಭದಲ್ಲಿ ಸಾಹಿತ್ಯ ಕ್ಷೇತ್ರವು ಮಹಿಳಾ ಸಾಹಿತ್ಯವನ್ನು ಉಪೇಕ್ಷೆಯಿಂದ ನೋಡಿರುವುದು, ಮಹಿಳೆ ತನ್ನ ಅಂತರಂಗದ ಮತ್ತು ಬಹಿರಂಗದ ಬದುಕನ್ನು ಅಭಿವ್ಯಕ್ತಿಸಲು ಮುಕ್ತ ಅವಕಾಶ ಇಲ್ಲದಿರುವುದು ಮಹಿಳಾ ಆತ್ಮಕಥೆಗಳ ಅಭಿವ್ಯಕ್ತಿಗೆ ತೊಡಕಾಗಿವೆ. ಪುರುಷ ಪ್ರಧಾನ ಮನೋಭಾವನೆಗಳು ಜನಸಾಮಾನ್ಯರಲ್ಲಷ್ಟೇ ಅಲ್ಲದೆ, ಪ್ರಧಾನ ಧಾರೆಯ ಕೆಲವು ಲೇಖಕರಲ್ಲೂ ಕಂಡುಬರುವುದರ ಪುರಾವೆಗಳಿವೆ. ಖುಷ್ವಂತ್ ಸಿಂಗ್ ಅವರ ಮಾತಿಗೆ ಪ್ರತಿಯಾಗಿ ಅಮೃತ ಪ್ರೀತಂರವರು ಅವಮಾನಿತ ಪದವನ್ನೇ ತಮ್ಮ ಆತ್ಮಕಥೆಯ ಶೀರ್ಷಿಕೆಯನ್ನಾಗಿ 'ರಸೀದಿ ತಿಕೀಟು' ಎಂದು ಇಟ್ಟಿರುವುದು ಬರಹವೇ ಸ್ವಾಭಿಮಾನ ಮತ್ತು ಪ್ರತಿರೋಧದ ರೂಪಕವಾಗಿರುವುದರ ಸಂಕೇತವಾಗಿದೆ. ಇದನ್ನು 'ಗೌರ್ಮೆಂಟ್ ಬ್ರಾಹ್ಮಣ' ಶೀರ್ಷಿಕೆಯಲ್ಲೂ ಕಾಣಬಹುದು.

೨೪. ಆರ್ಥಿಕತೆಗೆ ಸಂಬಂಧಿಸಿದಂತೆ ಗಂಡ, ಹೆಂಡತಿ ಎಂಬುದು ಒಂದು ರೀತಿಯಲ್ಲಿ ಮಾಲಿಕ ವರ್ಗ, ದುಡಿಯುವ ವರ್ಗ ಇದ್ದಂತೆ. ಹೆಂಡತಿ ದುಡಿಯುತ್ತಿದ್ದರೂ ತನ್ನ ಶ್ರಮದ ಬಂಡವಾಳದಿಂದ ಬರುವ ಎಲ್ಲಾ ಆದಾಯವನ್ನು ಗಂಡ ಎಂಬ ಮಾಲಿಕ ವರ್ಗ ತನ್ನ ಸುಪರ್ದಿಗೆ ತೆಗೆದುಕೊಳ್ಳುತ್ತಾ ಹಾಗೂ ತನ್ನ ದುಡಿಮೆಯಿಂದ ಬಂದ ಆದಾಯದ ಮೇಲಿನ ಹಕ್ಕನ್ನು ಹೆಂಡತಿ ತಾನಾಗಿಯೇ ಬಿಟ್ಟುಕೊಡುವಂತೆ ಮಾಡಲಾಗುತ್ತದೆ. ಇಂತಹ ಹೆಣ್ಣನ್ನು ಮಾತ್ರ ನಮ್ಮ ಸಮಾಜ ಆದರ್ಶದ ವ್ಯಾಪ್ತಿಗೆ ತಂದಿಟ್ಟು ನೋಡುತ್ತದೆ. ಇದಕ್ಕೆ ಸ್ವಲ್ಪ ಪ್ರತಿರೋಧ ತೋರಿದರು ಸಹ ಆಕೆಯನ್ನು ಗಯ್ಯಾಳಿ, ಮಾರಿ ಮುಂತಾದ ನಿಂದಾವಾಚಕಗಳಿಂದ ಅವಮಾನ ಮಾಡಲಾಗುತ್ತದೆ. ಪ್ರತಿಭಾ ನಂದಕುಮಾರ್ ಅವರು ದುಡಿಯದ ಪತಿಗೆ ತಾನು ದುಡಿದ ಪ್ರತಿ ತಿಂಗಳ ಹಣವನ್ನು ಕೊಟ್ಟು ತನ್ನ ಖರ್ಚಿಗಾಗಿ ಪತಿಗೆ ಕೇಳುವ ಅಸಹಾಯಕತೆ ಮೇಲಿನ ಅವಸ್ಥೆಗೆ ಉದಾಹರಣೆಯಾಗಿದೆ. ಆದರೆ ಈ ಅವಸ್ಥೆಯನ್ನು ದಮನಿತರು ಮೀರುವ ಸಾಧ್ಯತೆಗಳನ್ನು ಸಹ ಆತ್ಮಕಥೆಗಳು ಕಾಣಿಸುತ್ತವೆ. ಹೀಗಾಗಿ ಅಸಹಾಯಕತೆಯು ಇಲ್ಲಿ ಖಾಯಮ್ಮಾಗಿ ಉಳಿಯವುದಿಲ್ಲ.

೨೫. ಪುರುಷ ಪ್ರಧಾನ ಮನೋಧೋರಣೆಯು ಕೇವಲ 'ಪುರುಷ'ರಲ್ಲಿ ಮಾತ್ರ ಇರುವುದಿಲ್ಲ. ಇದರರ್ಥ ಮಹಿಳೆಯರಿಗೆ ಅವಮಾನವು ಕೇವಲ ಪುರುಷರಿಂದ ಮಾತ್ರವಾಗಿದೆಯೆಂದು ಹೇಳಲು ಬರುವುದಿಲ್ಲ. ಮಹಿಳೆಯರಿಂದಲೂ ಅವಮಾನಗಳಾಗಿವೆ. ಆದರೆ ಅವಮಾನಿಸಿದ ಮಹಿಳೆಯರಲ್ಲಿರುವುದು ಪುರುಷ ಪ್ರಧಾನ ಸಮಾಜದ ಮನೋಧೋರಣೆಯೇ ಆಗಿದೆ ಎಂಬುದನ್ನು ಆತ್ಮಕಥೆಗಳ ಮೂಲಕ ಕಂಡುಕೊಳ್ಳಲಾಗಿದೆ. ಗಂಡನನ್ನು ತೊರೆದ ಉಮಾಶ್ರೀಯವರನ್ನು ಅವರ ತಾಯಿಯೇ ನಿಂದಿಸುವುದು ಮತ್ತು ಹೆರಿಗೆ ಸಮಯದಲ್ಲಿ ಮಗಳಿಗೆ ಸಹಾಯ ಮಾಡದಿರುವುದು ಕಂಡುಬರುತ್ತದೆ. ಈ ಘಟನೆಗಳ ಹಿಂದೆ ಮಹಿಳೆಯರಲ್ಲಿ ನೆಲೆಸಿರುವ ಪುರುಷ ಪ್ರಧಾನ ಮನೋಧೋರಣೆ ಇದೆ. ಅಪಮಾನಕ್ಕೆ ಕಾರಣವಾಗುವ ಪುರುಷವಾದ, ಜಾತೀಯತೆ, ಫ್ಯೂಡಲಿಸಂ ಇವು ಲಿಂಗಾತೀತವಾಗಿ ಕ್ರಿಯಾಶೀಲವಾಗಿರುವುದನ್ನು ಇದು ಕಾಣಿಸುವುದು.

೨೬. ಕೆಲವು ಮಹಿಳಾ ಆತ್ಮಕಥೆಗಳಲ್ಲಿ ಹೆಂಡತಿಯು ಗಂಡನೊಂದಿಗಿದ್ದರೂ, ಗಂಡನನ್ನು ತೊರೆದರು ಅವಮಾನ ಅನುಭವಿಸುವುದನ್ನು ಕಾಣಬಹುದಾಗಿದೆ. ಇದರ ಜೊತೆಗೆ ಗಂಡನಿಂದ ಆಗುವಂತಹ ಅವಮಾನಗಳನ್ನು ಕೆಲವು ಮಹಿಳಾ ಆತ್ಮಕಥನಕಾರರು ನಿರಾಕರಣೆ ಮಾಡುವುದರ ಮೂಲಕ ಪ್ರತಿರೋಧ ತೋರಿದರೆ, ಮತ್ತೆ ಕೆಲವು ಆತ್ಮಕಥೆಗಳಲ್ಲಿ ಕೌಟುಂಬಿಕ ವಾತಾವರಣದಲ್ಲಿ ಇದ್ದೇ ಪರ್ಯಾಯ ಮಾರ್ಗಗಳ ಮೂಲಕ ಪ್ರತಿರೋಧ ತೋರುವುದು ಕಂಡುಬರುತ್ತದೆ. ಮೇಲಿನ ಸಂಗತಿಗಳಲ್ಲಿ ಸಂಸಾರವು ಕೆಲವು ಮಹಿಳಾ ಆತ್ಮಕಥೆಗಳಲ್ಲಿ ಒಂದು ಬಗೆಯ 'ಶೋಷಕ' ವ್ಯವಸ್ಥೆಯಾಗಿ ಭಾಸವಾಗಿದೆ. ಹೆಂಡತಿ ಗಂಡನೊಂದಿಗಿದ್ದರೂ ಗಂಡನಿಂದ ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಹರಣಗಳಿಂದ ಅವಮಾನಗಳಾಗಿವೆ. ಈ ಬಗೆಯ ಅವಮಾನಗಳನ್ನು ಪ್ರತಿಭಾ ಅನುಭವಿಸಿದ್ದಾರೆ. ಗಂಡನನ್ನು ತೊರೆದಿದ್ದಕ್ಕಾಗಿ ಸ್ಥಾಪಿತ ಆರೋಪಗಳ ಫಲಗಳಿಂದ ಉಮಾಶ್ರೀಯವರು ಅವಮಾನ ಅನುಭವಿಸುವುದನ್ನು ಉದಾಹರಿಸಬಹುದು. ಇದರ ಜೊತೆಗೆ ಉಮಾಶ್ರೀಯವರು ತಮ್ಮ ದೇವಾಂಗ ಜನಾಂಗದ ಹಿರಿಯರು ಬಂದು ಗಂಡನನ್ನು ಸಹಿಸಿಕೊಡು ಹೋಗುವಂತೆ ಹೇಳಿದಾಗ, ಗಂಡ ತೊಂದರೆ ಕೊಡುವುದಿಲ್ಲವೆಂದು ಅಗ್ರಿಮೆಂಟ್ ಮಾಡಿಕೊಟ್ಟರೆ ಹೋಗುವುದಾಗಿ ಹೇಳುತ್ತಾರೆ. ಒಂದೆಡೆ ಲೇಖಕಿ ಗಂಡು ಪ್ರಧಾನ ಕುಟುಂಬದ ಅವಮಾನಿತ ವ್ಯವಸ್ಥೆಯನ್ನು ತೊರೆದು ಪ್ರತಿರೋಧ ತೋರಿದರೆ, ಇನ್ನೊಂದಡೆ ಲೇಖಕಿ ಸಿನಿಮಾ ನೋಡುವುದರ ಮೇಲೆ ಗಂಡ ಹೇರಿದ್ದ ನಿರ್ಬಂಧವನ್ನು ಜಾಣ್ಮೆಯಿಂದ ಮೀರುವುದು ಕಾಣುತ್ತದೆ. ಆಕ್ರೋಶ ಮತ್ತು ಉಪಾಯಗಾರಿಕೆಗಳು ಪ್ರತಿರೋಧದ ವಿಭಿನ್ನ ತಂತ್ರಗಳಾಗಿ ಇಲ್ಲಿ ಬರುತ್ತವೆ.

೨೭. ಅಧ್ಯಯನಕ್ಕೆ ಆಯ್ದುಕೊಂಡ ಕೆಲವು ಆತ್ಮಕಥೆಗಳಲ್ಲಿ ಪತ್ನಿಯು ಗೌಣವಾಗಿದ್ದರೆ ಮತ್ತೆ ಕೆಲವು ಆತ್ಮಕಥೆಗಳಲ್ಲಿ ಪತ್ನಿಯನ್ನು ಅವಮಾನಗೊಳಿಸುವುದರ ಕುರಿತು ವೈಯಕ್ತಿಕವಾಗಿ ಮತ್ತು ಸಾಮುದಾಯಿಕವಾಗಿ ಆತ್ಮವಿಮರ್ಶೆ ಮಾಡಿಕೊಳ್ಳುವುದನ್ನು ಗುರುತಿಸಬಹುದು. 'ಭಿತ್ತಿ' 'ಬಿಚ್ಚಿದಜೋಳಿಗೆ',

'ಮಣೆಗಾರ' ಆತ್ಮಕಥೆಗಳಲ್ಲಿ ಲೇಖಕಿಯರ ಮಡದಿಯರ ಬಗ್ಗೆ ಹೆಚ್ಚು ಪ್ರಸ್ತಾಪವಿಲ್ಲ. 'ಊರುಕೇರಿ', 'ಗೌರ್ಮೆಂಟ್ ಬ್ರಾಹ್ಮಣ' ಇನ್ನಿತರ ಕೆಲವು ಆತ್ಮಕಥೆಗಳಲ್ಲೂ ಇಲ್ಲ. ಇವಕ್ಕೆ ಹೋಲಿಸಿದರೆ 'ಉಚಲ್ಯಾ' ಮತ್ತು 'ಗೊಂದಲಿಗ್ಯಾ'ಗಳಲ್ಲಿ ಲೇಖಕರು ತಾವು ಮತ್ತು ತಮ್ಮ ಸಮುದಾಯದೊಳಗಿರುವ ಸ್ತ್ರೀ ಶೋಷಣೆಯನ್ನು ಉಲ್ಲೇಖಿಸುತ್ತ ಆತ್ಮವಿಮರ್ಶೆ ಮಾಡಿಕೊಳ್ಳುವ ಪ್ರಸಂಗಗಳಿವೆ. ಲಿಂಗಸಂವೇದನೆಯು ವ್ಯವಸ್ಥೆಯಲ್ಲಿ ಇಲ್ಲದಿರುವುದನ್ನು ಹೆಚ್ಚಿನ ಮಹಿಳಾ ಆತ್ಮಕಥೆಗಳು ಕಾಣಿಸಿದರೆ, ಕೆಲವು ಆತ್ಮಕಥೆಗಾರರಲ್ಲೇ ಈ ಸಂವೇದನೆ ಇಲ್ಲದಿರುವುದು ಸಹ ಕಾಣುತ್ತದೆ. ಇದೊಂದು ವೈರುಧ್ಯವಾಗಿದೆ.

೨೮. ಮಹಿಳೆಯರು ತಾವು ಪ್ರತಿನಿಧಿಸುತ್ತಿರುವ ಬಹುತೇಕ ಕ್ಷೇತ್ರಗಳಲ್ಲಿ ಅವಮಾನಗಳನ್ನು ಅನುಭವಿಸುತ್ತಿರುವಂತೆ ತಾವು ಕ್ರಿಯಾಶೀಲರಾಗಿರುವ ಕಲಾಕ್ಷೇತ್ರದದಲ್ಲೂ ಅವಮಾನಗಳನ್ನು ಅನುಭವಿಸುತ್ತಿರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ. 'ಬೆಂಕಿ ಬೆಡಗು'ನಲ್ಲಿ ಲೇಖಕಿ ಕಲಾಜಗತ್ತಿನೊಳಗೆ ತೊಡಗಿಸಿಕೊಂಡಿದ್ದಕ್ಕಾಗಿ ವೃತ್ತಿ ಕ್ಷೇತ್ರದಲ್ಲಿ ಕೆಲವು ಪುರುಷರ ಲೈಂಗಿಕ ಪ್ರಚೋದನೆಗಳಿಂದ ಹಾಗೂ ವೃತ್ತಿ ಕ್ಷೇತ್ರದ ಹೊರಗಡೆ ಸೂಳೆ, ವೇಶ್ಯೆಯಂತೆ ಕಾಣುವ ಸಾಮಾಜಿಕ ಅವ್ಯವಸ್ಥೆಯಿಂದ ಅವಮಾನ ಅನುಭವಿಸುವುದನ್ನು ಗುರುತಿಸಬಹುದಾಗಿದೆ. ಸಾಮಾನ್ಯವಾಗಿ ಸೃಜನಶೀಲ ಕಲೆಯು ಸಮಾಜದ ದೋಷಗಳನ್ನು ವಿಮರ್ಶಿಸುವ ಒಂದು ಮಾಧ್ಯಮವಾಗಿದೆ. ಆದರೆ ಅದಕ್ಕೂ ಸಮಾಜದಲ್ಲಿರುವ ತರತಮದ ಲಿಂಗಭೇದ ಸ್ತ್ರೀದ್ವೇಷದ ಕಾಯಿಲೆಗಳು ತಗುಲಿರುವ ವಿಷಾದಕರ ಸನ್ನಿವೇಶವನ್ನು ಆತ್ಮಕಥೆಗಳು ಬಿಂಬಿಸುತ್ತವೆ.

೨೯. ಹೆಣ್ಣನ್ನು ಕೇವಲ ಭೋಗದ ವಸ್ತುವನ್ನಾಗಿ ನೋಡುವ ಕುರುಡು ಸಾಂಪ್ರದಾಯಿಕತೆ ಆತ್ಮಕಥೆಗಳಲ್ಲಿ ಬಂದಿದೆ. ಇದಕ್ಕೆ ಅನಕ್ಷರತೆ, ಆರ್ಥಿಕ ಸಮಸ್ಯೆ, ಹೆಂಡತಿಯೂ ಸಮಾನವಾದವಳು ಎಂದು ಭಾವಿಸದಿರುವುದು, ಕುಡಿತ ಇನ್ನೂ ಮುಂತಾದ ಕಾರಣಗಳಿವೆ. 'ಉಚಲ್ಯಾ' ಆತ್ಮಕಥೆಯಲ್ಲಿ ಭೋಗದ ವಸ್ತುವಿನಂತೆ ಮಾರಾಟಕ್ಕೆ ಒಳಗಾದ ಪದ್ಮಿನಿಯು ಅಸಹಾಯಕ ಮಹಿಳೆಯರ ಪ್ರತಿನಿಧಿಯಾಗಿದ್ದಾಳೆ. ಈ ಸನ್ನಿವೇಶ ಕುರಿತ ಪದ್ಮಿನಿಯ ಪ್ರತಿಕ್ರಿಯೆಯು ಗೌಣವಾಗಿದೆ. ಇದರ ಕರ್ತೃ ಪುರುಷರಾದ್ದರಿಂದ ಆಕೆಯ ಪ್ರತಿಕ್ರಿಯೆಯು ವಿವರವಾಗಿ ವ್ಯಕ್ತವಾಗಿಲ್ಲ. ಮಹಿಳಾ ಆತ್ಮಕಥನಕಾರರ ಕೆಲವು ಆತ್ಮಕಥೆಗಳಲ್ಲಿ ಪತಿಯು ಪ್ರಮಾಣಾತ್ಮಕವಾಗಿ ಹೆಚ್ಚು ಪ್ರಮಾಣದಲ್ಲಿದ್ದು, ಶೋಷಿಸುವ, ಅಪಮಾನಿಸುವವನಂತೆ ಪ್ರಕಟಗೊಂಡಿದ್ದಾನೆ. ಜೊತೆಗೆ ಲೇಖಕರಿಗೆ ಹೋಲಿಸಿದರೆ ಲೇಖಕಿಯರ ಆತ್ಮಕಥೆಗಳಲ್ಲಿಯೇ ಕೌಟುಂಬಿಕ ಚಿತ್ರಣಗಳು ಹೆಚ್ಚು ಕಂಡುಬರುತ್ತವೆ. ಮಹಿಳೆ ಕುರಿತ ಅವಮಾನ ಮತ್ತು ಪ್ರತಿರೋಧಗಳು ಒಂದು ಧರ್ಮಕ್ಕೆ, ಒಂದು ಜಾತಿಗೆ, ಒಂದು ವರ್ಗಕ್ಕೆ ಸೀಮಿತವಾಗದೆ ಎಲ್ಲ ಕಡೆ ಕಂಡುಬಂದರೂ, ಅದು ಮಹಿಳೆಯ ಸಾಂಸ್ಕೃತಿಕ ಹಿನ್ನೆಲೆ, ಶಿಕ್ಷಣ, ಸಾಮಾಜಿಕ ಪ್ರಜ್ಞೆಯ ಆಧಾರದ ಮೇಲೆ ಭಿನ್ನ ಭಿನ್ನವಾಗಿರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ. ಪಿತೃಸಂಸ್ಕೃತಿಯ ಪ್ರಭಾವದಿಂದಾಗಿ ಸಾಮಾಜಿಕವಾಗಿ ಸವರ್ಣೀಯರಾದ ಮಹಿಳೆಯರು ಅವಮಾನ ಅನುಭವಿಸಿದ್ದರೆ,

ತುಳಿತಕ್ಕೊಳಪಟ್ಟ ಸಮುದಾಯಗಳ ಪುರುಷರಿಂದಲೂ ಮಹಿಳೆಯರು ಅವಮಾನ ಅನುಭವಿಸಿರುವುದನ್ನು ಗುರುತಿಸಬಹುದಾಗಿದೆ.

೩೦. ಮುಸ್ಲಿಂ ಸಮುದಾಯದ ಲೇಖಕರ ಆತ್ಮಕಥೆಗಳು ಆಹಾರ, ದೇಶಭಕ್ತಿ, ಇತಿಹಾಸದಲ್ಲಿ ನಡೆದಿರುವ ಆಳ್ವಿಕೆಯ ಹೆಸರಲ್ಲಿ ಧಾರ್ಮಿಕ ಅಸ್ಪೃಶ್ಯತೆ ಅಥವಾ ಪರಕೀಯತೆಗೆ ಒಳಗಾಗುತ್ತಿರುವುದನ್ನು ಚಿತ್ರಿಸುತ್ತವೆ. ಬಾಲ್ಯದ ದಿನಗಳಲ್ಲಿ ರಂಜಾನ್ ದರ್ಗಾರವರು ದೇಶಭಕ್ತಿಗೆ ಸಂಬಂಧಿಸಿದಂತೆ ಅನುಭವಿಸಿದ ಅವಮಾನವಾಗಿರಬಹುದು, ಆಹಾರಕ್ಕೆ ಸಂಬಂಧಿಸಿದಂತೆ ದನತಿನ್ನುವವರು ಎಂಬ ನಿಂದನೆಗೆ ಕಟ್ಪಾಡಿಯವರು ಒಳಗಾಗುವುದು ಮೇಲಿನ ಮನೋಭಾವಗಳನ್ನು ಸಮರ್ಥಿಸುತ್ತವೆ. ಇದರ ಜೊತೆಗೆ ಮುಸ್ಲಿಂ ಆಳುವ ವರ್ಗಗಳು ಮಾಡಿರುವ ರಾಜಕೀಯ ಒಪ್ಪುತಪ್ಪುಗಳನ್ನು ಇಂದಿನ ಮುಸ್ಲಿಮರಿಗೆ ಆರೋಪಿಸಿ ಅವಮಾನಿಸುವುದು ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ಔರಂಗಜೇಬ್ ಪಾಠ ಬಂದ ತಕ್ಷಣ ವಿದ್ಯಾರ್ಥಿಗಳು ಕಟ್ಪಾಡಿಯವರನ್ನು ಅಪರಾಧಿಯಂತೆ ನೋಡುವುದನ್ನು ಗುರುತಿಸಬಹುದಾಗಿದೆ. ಇಂತಹ ಸಂದರ್ಭಗಳನ್ನು ಆತ್ಮಕಥನಕಾರರು ಅನುಭವಿಸಿದ ಕಾಲಕ್ಕೂ ಅಭಿವ್ಯಕ್ತಿಸುವ ಕಾಲಕ್ಕೂ ಅಸಹಾಯಕತೆಯ ಅಂಶವು ಸಮಾನವಾಗಿ ಮುಂದುವರೆದಿರುವುದನ್ನು ಗುರುತಿಸಬಹುದಾಗಿದೆ. ದಲಿತ ಮತ್ತು ಮಹಿಳಾ ಆತ್ಮಕಥೆಗಳಲ್ಲಿ ಸಾಮಾಜಿಕ ವಾಸ್ತವ ಅಪಮಾನಕ್ಕೆ ಕಾರಣವಾದರೆ, ಮುಸ್ಲಿಮರ ಆತ್ಮಕಥೆಗಳಲ್ಲಿ ಚರಿತ್ರೆಯ ಭಾರವು ಅಪಮಾನಕ್ಕೆ ಕಾರಣವಾಗಿದೆ.

೩೧. ಯಾವುದೇ ಧರ್ಮದ ಮೇಲೆ ಮಾಡುವ ಆರೋಪಗಳು ಅಥವಾ ಅಭಿಪ್ರಾಯಗಳು ಹಾಗೂ ಕೋಮುಗಲಭೆಗಳು ಜನರ ಜತೆ ಬದುಕಿದ ಅನುಭವದ ಭಾಗವಾಗಿ ಬಂದಿರುವಂತಹವಲ್ಲ. ಅವು ಸಾಮಾಜಿಕ, ಆರ್ಥಿಕ, ರಾಜಕೀಯ ಲಾಭಗಳಿಗಾಗಿ ಕೆಲವು ಮತಾಂಧ ಮೂಲಭೂತವಾದಿಗಳಿಂದ ಸೃಷ್ಟಿಯಾಗಿರುವಂತಹ ಸೈದ್ಧಾಂತಿಕ ಭಾಗವಾಗಿ ಬಂದಿರುವಂತಹವು. ಇವು ನಿರ್ದಿಷ್ಟ ಧರ್ಮದಲ್ಲಿ ಹುಟ್ಟಿದ ಕಾರಣದಿಂದಲೇ ಆ ಧರ್ಮದ ಸದಸ್ಯರನ್ನು ಪರಕೀಯರನ್ನಾಗಿ ನೋಡುವ ಪ್ರಯತ್ನ ಮಾಡುತ್ತವೆ. 'ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ' ಆತ್ಮಕಥೆಯಲ್ಲಿ ಆಮಿರ್‌ಖಾನ್‌ನನ್ನು ಭಯೋತ್ಪಾದಕನೆಂದು ಆರೋಪಿಸುವ ಹಾಗೂ ದೇಶಾಭಿಮಾನ ಮತ್ತು ಧರ್ಮದ ಕಾರಣಕ್ಕಾಗಿ ರಂಜಾನ್ ದರ್ಗಾ ಅವರನ್ನು ಪಾಕಿಸ್ತಾನದ ಪರ ಎಂದು ಅವಮಾನಿಸವುದರ ಹಿಂದೆ ಮತೀಯವಾದ ಇರುವುದನ್ನು ಗಮನಿಸಬಹುದಾಗಿದೆ. ಜೊತೆಗೆ 'ನನ್ನೊಳಗಿನ ನಾನು' ಆತ್ಮಕಥೆಯಲ್ಲಿ ಹಿಂದೂ ಧರ್ಮದ ಶಿಕ್ಷಕರನ್ನು ಪರಕೀಯವಾಗಿ ನೋಡುವ ಮುಸ್ಲಿಂ ಮೂಲಭೂತವಾದದ ಧೋರಣೆಗಳು ಮೇಲಿನ ಮನೋಭಾವಗಳನ್ನು ಸಮರ್ಥಿಸುತ್ತವೆ. ಭಾರತೀಯ ಸಮಾಜದಲ್ಲಿ ಅಪಮಾನ ಮತ್ತು ಅನ್ಯಾಯಗಳ ಹಿಂದೆ ಜಾತಿ ಲಿಂಗ ಮತ್ತು ಧಾರ್ಮಿಕ ಸಂಗತಿಗಳು ಚಾರಿತ್ರಿಕ ಒತ್ತಡಗಳಾಗಿ ಕೆಲಸ ಮಾಡುವುದನ್ನು ಇವು ಕಾಣಿಸುತ್ತವೆ. ಧಾರ್ಮಿಕ ಕೋಮುವಾದಗಳು ತಲೆಮಾರುಗಳಿಂದ ತಲೆಮಾರುಗಳಿಗೆ ಬದಲಾಗುತ್ತ ಹೆಚ್ಚು ಅಪಾಯಗಳನ್ನು ಸೃಷ್ಟಿಸುತ್ತಿವೆ. ಇದಕ್ಕೆ ಉದಾಹರಣೆಯಾಗಿ

ರಂಜಾನ್ ದರ್ಗಾ ಅವರ ಆತ್ಮಕಥನಾತ್ಮಕ ಬರಹದಲ್ಲಿಲ್ಲದ ಅಪಾಯಕಾರಿ ಕೋಮುಗಲಭೆ ಬಿ.ಎ ಮೊಹಿದೀನ್ ಅವರ ಆತ್ಮಕಥೆಯಲ್ಲಿ ಬಹಳ ಮುಖ್ಯವಾದ ಸಂಗತಿಯಾಗಿ ಕಂಡುಬರುವುದನ್ನು ಗುರುತಿಸಬಹುದಾಗಿದೆ. ಇಂತಹ ಕೆಲವು ಕೋಮುಗಲಭೆಗಳು ರಾಜಕೀಯ, ಆರ್ಥಿಕ ಲಾಭಗಳ ಫಲವಾಗಿರುವ ಸಂಗತಿಗಳು ಕನ್ನಡ ಆತ್ಮಕಥೆಗಳಲ್ಲಿ ಕಾಣಬಹುದು.

೩೨. ಮುಸ್ಲಿಂ ಧರ್ಮದಲ್ಲಿನ ಧಾರ್ಮಿಕ ಮೂಲಭೂತವಾದಿತನಗಳು ಮಹಿಳೆಯರನ್ನು ತಲಾಖ್, ಪರದಾ ಪದ್ಧತಿಗಳ ಮೂಲಕ ಶೋಷಣೆ ಮಾಡುತ್ತಲೇ ಬಂದಿದ್ದರೂ, ಶಿಕ್ಷಣ, ಕಾನೂನಿನ ಅರಿವು ಹಾಗೂ ವೈಚಾರಿಕ ಮನೋಭಾವನೆಯ ಕಾರಣಗಳಿಂದ ಅವುಗಳಿಂದ ಅಲ್ಪ ಪ್ರಮಾಣದಲ್ಲಿ ವಿಮುಖರಾಗುತ್ತಿರುವುದನ್ನು ಆತ್ಮಕಥೆಗಳು ಕಾಣಿಸುತ್ತವೆ. 'ಮುಸ್ಲಿಮ್ ಹುಡುಗಿ ಶಾಲೆ ಕಲಿತದ್ದು' ಆತ್ಮಕಥನಾತ್ಮಕ ಬರಹದಲ್ಲಿ ೧೨ ವರ್ಷದ ಯುವತಿ ತಲಾಖ್ ನೀಡಿದ ಗಂಡನನ್ನು ಮರಳಿ ಸೇರಲು ಮೌಲ್ವಿ ಹಾಕುವ ಕಟ್ಟುಪಾಡುಗಳಾಗಿರಬಹುದು; ಸಾರಾ ಅಬೂಬಕ್ಕರ್ ಅವರು ಶಿಕ್ಷಣ ಪಡೆಯುವುದನ್ನು ನಿರ್ಬಂಧಿಸುವುದಾಗಿರಬಹುದು. ಇಂತಹ ಧಾರ್ಮಿಕ ಕಟ್ಟುಪಾಡುಗಳು ಮಹಿಳೆಯರನ್ನು ಶೋಷಿಸುವುದನ್ನು ಸೂಚಿಸುತ್ತವೆ. ಇದನ್ನು ಕುರಿತು ಆತ್ಮಕಥೆಗಳಲ್ಲಿ ಆಕ್ರೋಶದ ದನಿಯಿದೆ. ಸಾರಾ ಅಬೂಬಕ್ಕರ್ ಹಾಗೂ ನಜ್ಮಾ ನಾಸೀರ್ ಅವರು ಬುರ್ಕಾ ತೊಡುವುದನ್ನು ನಿಲ್ಲಿಸುವುದು ಬದಲಾಗುತ್ತಿರುವ ಸ್ವರೂಪವನ್ನು ಸೂಚಿಸುತ್ತದೆ. ಹೀಗೆ ಆತ್ಮಕಥೆಗಳು ಚರಿತ್ರೆಯಲ್ಲಾದ ಮತ್ತು ವರ್ತಮಾನದಲ್ಲಿ ಆಗುತ್ತಿರುವ ಅಪಮಾನಗಳ ನೆಲೆಯಿಂದ ಅವು ಕಡಿಮೆಯಾಗುವ ಮೂರನೇ ಹಂತವನ್ನು ಚಿತ್ರಿಸುತ್ತ, ಸಮಾಜ ಬದಲಾಗುತ್ತಿದೆ ಎಂಬ ಆಶಾವಾದವನ್ನು ಪ್ರಕಟಿಸುತ್ತವೆ. ಆರಂಭಿಕ ಹಂತದಲ್ಲಿ ಮುಸ್ಲಿಂ ಹಿನ್ನೆಲೆಯ ಲೇಖಕರು ಸ್ವಧರ್ಮದೊಳಗೂ ಮತ್ತು ಪರಧರ್ಮಗಳೊಳಗಿನ ಕೆಲವು ಮೂಲಭೂತವಾದಿಗಳಿಂದ ಪರಕೀಯತೆಯನ್ನು ಅನುಭವಿಸಿರುವುದು ಕಂಡುಬರುತ್ತದೆ. 'ಚಂದ್ರಗಿರಿಯ ತೀರದಲ್ಲಿ' ಕೃತಿ ಬರೆದದಕ್ಕಾಗಿ ಸಾರಾ ಅಬೂಬಕ್ಕರ್ ಅವರು ಹಾಗೂ ವೈಚಾರಿಕ ಕಥೆಗಳನ್ನು ಬರೆದದ್ದಕ್ಕಾಗಿ ಬೊಳುವಾರು ಮಹಮದ್ ಕುಂಞ ಅವರು ಮುಸ್ಲಿಂ ಮೂಲಭೂತವಾದಿಗಳಿಂದ ನಿಂದನೆಗೆ ಒಳಗಾಗುವುದು ಕಾಣುತ್ತದೆ. ಆದರೆ ಹೀಗೆ ಸಮುದಾಯವು ಆರಂಭದಲ್ಲಿ ತನ್ನೊಳಗಿನ ಬರಹಗಾರರನ್ನು ಅನ್ಯರಂತೆ ನೋಡಿದರೂ, ಕಾಲಕ್ರಮೇಣ ವಾಸ್ತವ ಅರಿವಾಗಿ ಅವರನ್ನು ಮನ್ನಿಸುವ ಪಲ್ಲಟಗಳನ್ನು ನೋಡಬಹುದು. ಇದನ್ನು ಸಮುದಾಯಗಳ ಪ್ರಬುದ್ಧೀಕರಣ ಎಂದು ಕರೆಯಬಹುದು.

೩೩. ಮುಸ್ಲಿಂ, ಕ್ರೈಸ್ತ ಹಾಗೂ ಇತರೆ ಧರ್ಮಗಳಲ್ಲೂ ಸಹ ಹಿಂದೂ ಧರ್ಮದಲ್ಲಿರುವಂತೆ ಕೆಲವು ಒಳ ಪಂಗಡ(ಜಾತಿ)ಗಳಿವೆ. ಪಿಂಜಾರರು, ಬಾಗವಾನರು ಸಾಮಾನ್ಯವಾಗಿ ಮುಸ್ಲಿಮರಾದರೂ ಸ್ವಧರ್ಮದೊಳಗೆ ಅವಮಾನಗಳನ್ನು ಅನುಭವಿಸುತ್ತಿದ್ದಾರೆ. 'ಹಳ್ಳಿಯಿಂದ ಹೂಬಳ್ಳಿ'ಗೆ ಆತ್ಮಕಥೆಯಲ್ಲಿ ಮುಸ್ಲಿಮರು ಪಿಂಜಾರ್‌ರ ನಡುವೆ ವಿವಾಹದ ವಿಷಯಕ್ಕೆ ಸಂಬಂಧಿಸಿದಂತೆ ಇರುವ ಪರಕೀಯತೆಯನ್ನು

ಗಮನಿಸಬಹುದಾಗಿದೆ. ಹಿಂದೂಗಳಲ್ಲಿಯೂ ತಳಸಮುದಾಯಗಳ ಹೆಸರುಗಳನ್ನು ಏಕಕಾಲಕ್ಕೆ ಜಾತಿ ಸೂಚಕವಾಗಿಯೂ ಹಾಗೂ ಜಾತಿ ನಿಂದಕವಾಗಿಯೂ ಬಳಸಿರುವಂತೆ 'ಬ್ಯಾರಿ' 'ಪಿಂಜಾರ' 'ನದಾಫ್' ಇತ್ಯಾದಿ ಪದಗಳನ್ನು ಸಾಮುದಾಯಿಕ ನಿಂದಕಗಳಾಗಿಯೂ ಬಳಸಲಾಗಿದೆ. ಇವು ಹೊಲೆಯ, ಮಾದಿಗ ಎಂಬಂತೆಯೇ ಅಪಮಾನಜನಕವಾಗಿವೆ.

೩೪. ತಳಸಮುದಾಯಗಳು ಹಿಂದೂ ಧರ್ಮದಲ್ಲಿನ ಅಸಮಾನತೆಗೆ ಬೇಸತ್ತು ಅಥವಾ ಆಸೆ ಆಮಿಷಗಳಿಗೆ ಆಕರ್ಷಿತರಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡರೂ; ಅಲ್ಲಿಯೂ ಪೂರ್ವಾಶ್ರಮದ ಶೋಷಣೆಯ ಪ್ರಭಾವವು ಮುಂದುವರಿದು ಹಲವಾರು ಅವಮಾನಗಳನ್ನು ಅನುಭವಿಸುವುದು ಭಾಮಾ (ಫಾಸ್ಟಿನಾ ಮೇರಿ) ಅವರ 'ತಾಳೆಗರಿ'ಯಲ್ಲಿ ಕಾಣಬಹುದು. ದಲಿತ ಕ್ರೈಸ್ತರನ್ನು ಪ್ರತ್ಯೇಕವಾಗಿ ಮಣ್ಣು ಮಾಡುವುದು ಮತ್ತು ಪ್ರಮುಖ ಸ್ಥಾನಗಳಿಗೆ ಅವಕಾಶ ಕೊಡದಿರುವುದನ್ನು ಗುರುತಿಸಬಹುದು.

೩೫. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಆತ್ಮಕಥನಾತ್ಮಕ ಬರಹಗಳು ಭಾಷಿಕವಾಗಿ ಅವಮಾನ ಮತ್ತು ಪ್ರತಿರೋಧಗಳ ಸಂಭಾಷಣೆ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯನ್ನು ಹಾಗೂ ನಿರೂಪಣೆ ಸಂದರ್ಭದಲ್ಲಿ ಶಿಷ್ಟ ಭಾಷೆಯನ್ನು ಬಳಸಿಕೊಂಡಿವೆ. ಅವಮಾನಗಳ ನೈಜತೆಗಾಗಿಯೋ ಅಥವಾ ಅವಮಾನಕ್ಕೆ ಒಳಗಾದ ಘಟನೆಯ ಮಾತುಗಳು ಇನ್ನು ನೆನಪಿನಲ್ಲಿರುವ ಕಾರಣಕ್ಕಾಗಿಯೋ ಅವುಗಳು ಪ್ರಾದೇಶಿಕ ಭಾಷೆಯಲ್ಲಿಯೇ ಸಹಜವಾಗಿ ಮೂಡಿಬಂದಿವೆ ಮತ್ತು ಆಪ್ತವಾಗಿವೆ. ಭಾಷಿಕವಾಗಿ ನಡೆಯುವ ಅವಮಾನಗಳು ಕೇವಲ ಭಾಷೆಗೆ ಮಾತ್ರ ಸೀಮಿತವಾಗದೆ, ಭಾಷೆಯ ಹಿಂದಿರುವ ಸಮುದಾಯವನ್ನು ಅವಮಾನಿಸುವುದರ ಸೂಚಕವಾಗಿಯೂ ಬಳಕೆಯಾಗಿದೆ. ಬ್ಯಾರಿ ಎಂಬುದು ಕರಾವಳಿ ಭಾಗದ ಭಾಷೆಯಷ್ಟೇ ಅಲ್ಲದೆ, ಮುಸ್ಲಿಮರನ್ನು ಸೂಚಿಸುವ ಪದವೂ ಆಗಿದೆ. ಶೂದ್ರರು ಸಂಸ್ಕೃತ ಕಲಿಯಬಾರದು ಎಂಬುದು ಭಾಷಿಕ ಮತ್ತು ಜಾತಿ ಮಡಿವಂತಿಕೆಯನ್ನೂ ಸೂಚಿಸುತ್ತಿದೆ. ಅದೇ ರೀತಿಯಾಗಿ ಭಾಷಿಕವಾಗಿ ನಡೆಯುವ ಪ್ರತಿರೋಧಗಳು ಕೇವಲ ಭಾಷಿಕವಾಗಿ ನಡೆಯುವಂತಹವುಗಳಲ್ಲ, ತಮ್ಮ ಮತ್ತು ತಮ್ಮ ಸಮುದಾಯದ ಅಸ್ಮಿತೆಯೂ ಆಗಿವೆ. ಮೊಹಿದೀನ್ ಅವರು ಬ್ಯಾರಿ ಸಮ್ಮೇಳನ ಮಾಡಿದ್ದಾಗಲಿ, ಕುವೆಂಪು ಸಂಸ್ಕೃತ ಕಲಿತು ಸಾಹಿತ್ಯ ರಚನೆ ಮಾಡಿದ್ದಾಗಲಿ ಇವೆರಡು ವೈಯಕ್ತಿಕ ಮತ್ತು ಸಮುದಾಯ ಕೇಂದ್ರಿತ ಪ್ರತಿರೋಧಗಳಾಗಿ ಕಂಡುಬರುತ್ತವೆ.

೩೬. ಮುಸ್ಲಿಂ ಎಂಬುದು ಕರಾವಳಿ ಭಾಗದ ಬಿ.ಎ ಮೊಹಿದೀನ್ ಅವರಲ್ಲಿ ಒಂದು ಧರ್ಮವಾಗಿ ಬಳಕೆಗೊಂಡಿದ್ದರೆ, ಉತ್ತರ ಕರ್ನಾಟಕದ ರಂಜಾನ್ ದರ್ಗಾಅವರು ಅದನ್ನು ಜಾತಿ ಸೂಚಕವಾಗಿಯೇ ಬಳಸಿರುವುದನ್ನು ಗುರುತಿಸಬಹುದಾಗಿದೆ. ಅಂದಿನ ಕಾಲದ ಹಳ್ಳಿಗಳಲ್ಲಿ ಮುಸ್ಲಿಮರನ್ನು ಒಂದು ಜಾತಿಯಾಗಿಯೇ ನೋಡುತ್ತಿದ್ದುದರ ಕಾರಣ ಹೀಗೆ ಅಭಿವ್ಯಕ್ತಿಗೊಂಡಿರಬಹುದು. ಕರಾವಳಿ ಭಾಗದಲ್ಲಿ ಮುಸ್ಲಿಂ ಎಂಬುದು ಪ್ರತ್ಯೇಕ ಧರ್ಮ ಎಂಬ ಅರಿವು ಇರಬಹುದಾದ ಕಾರಣದಿಂದಲೂ

ಹಾಗೂ ಮೊಹಿದೀನ್ ಅವರ ಆತ್ಮಕಥೆ ಬರೆದ ಕಾಲಕ್ಕಾಗಲೇ ಸಮಾಜದಲ್ಲಿ ಕೋಮುವಾದಿ ಮನೋಭಾವನೆ ಬೆಳೆದಿರುವ ಕಾರಣದಿಂದಲೂ ಹೀಗೆ ಬಳಸಿರಬಹುದಾದ ಸಾಧ್ಯತೆ ಇದೆ.

೩.೭. ಆತ್ಮಕಥೆಗಳಲ್ಲಿ ಅವಮಾನಗಳು ಜಾತಿ, ವರ್ಗ, ಲಿಂಗ, ಧರ್ಮಾಧಾರಿತ ಅವಮಾನಗಳು ಜಾತಿ ಮತ್ತು ಧರ್ಮ ಕೇಂದ್ರಿತ ನಿಂದನೆಗಳಿಂದ, ನಿರ್ಬಂಧಗಳನ್ನು ಹೇರುವುದು, ಕೆಲವೊಮ್ಮೆ ಹಲ್ಲೆಗಳನ್ನು ಮಾಡುವುದರ ಮೂಲಕ ಕಂಡುಬಂದಿವೆ. ಪ್ರತಿರೋಧಗಳು ಅಪಮಾನಿತ ಸನ್ನಿವೇಶಗಳನ್ನು ನಿರಾಕರಿಸುವುದು, ಸಂಘಟನಾತ್ಮಕ ಹೋರಾಟಗಳ ಮೂಲಕ, ಕೆಲವೊಮ್ಮೆ ಪರ್ಯಾಯ ಮಾರ್ಗಗಳ ಮೂಲಕವೂ ನಡೆದಿವೆ. ಆತ್ಮಕಥೆಗಳಲ್ಲಿ ಕಂಡುಬರುವ ಕೆಲವು ಪ್ರತಿರೋಧಗಳು ಅಪಮಾನಿಸುವ ವ್ಯವಸ್ಥೆಯ ವಿರುದ್ಧದ ಹೋರಾಟದಲ್ಲಿ ಯಶಸ್ವಿಯಾಗಿದ್ದರೆ, ಮತ್ತೆ ಕೆಲವು ತಾತ್ಕಾಲಿಕವಾಗಿ ಹಿನ್ನೆಡೆಯಾದರೂ ಪರಿಣಾಮದಲ್ಲಿ ದಮನಿತರ ಮೇಲೆ ಧನಾತ್ಮಕ ಪ್ರಭಾವ ಬೀರಿರುವುದನ್ನು ಗುರುತಿಸಬಹುದಾಗಿದೆ. 'ಉಚಲ್ಯಾ'ದಲ್ಲಿನ ಕಾರ್ಮಿಕ ಹೋರಾಟಗಳು ತಮ್ಮ ಮೇಲಿನ ದೌರ್ಜನ್ಯವನ್ನು ತಡೆಯುವಲ್ಲಿ ಯಶಸ್ವಿಯಾಗಿದ್ದರೆ, 'ಮಣೆಗಾರ'ದಲ್ಲಿ ಸತ್ತ ದನ ಎತ್ತಲಿಲ್ಲ ಎಂದು ದಲಿತರ ಮೇಲೆ ಮಾಡಿದ ಹಲ್ಲೆಯ ವಿರುದ್ಧದ ಹೋರಾಟ ಅಲ್ಪಮಟ್ಟಿಗೆ ಹಿನ್ನೆಡೆಯಾದರೂ ಆತ್ಮಕಥನಕಾರರಲ್ಲಿ ಮತ್ತು ದಮನಿತರಲ್ಲಿ ಹೋರಾಟದ ಜಾಗೃತಿ ಮೂಡಿಸುವಲ್ಲಿ ಪ್ರಧಾನ ಪಾತ್ರವಹಿಸಿರುವುದನ್ನು ನೋಡಬಹುದು.

ಪ್ರಸ್ತುತ ಅಧ್ಯಯನದಲ್ಲಿ ಆತ್ಮಕಥೆಗಳು ಭಾಷಿಕವಾಗಿ ನಿರೂಪಿಸಲ್ಪಟ್ಟಿರುವ ಜಾತಿ, ವರ್ಗ, ಲಿಂಗ, ಧರ್ಮಧಾರಿತವಾದ ಮಾನವ ಸಮುದಾಯದೊಳಗಿನ ಸಂಘರ್ಷದ ಬದುಕನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದು ಈ ಸಂಘರ್ಷಗಳು ಹಲವು ವೈರುಧ್ಯಗಳಿಂದ ಕೂಡಿರುವಂತಹದ್ದಾಗಿದೆ. ಇಂತಹ ಸಂಘರ್ಷಗಳ ಉತ್ಪನ್ನಗಳಾದ ಅವಮಾನಗಳ ಕುರಿತು ಆತ್ಮಕಥೆಗಳು ಕೊರಗುವ ಮತ್ತು ಆಕ್ರೋಶವನ್ನು ಹೊರಹಾಕುವ ಎರಡೂ ಮಾದರಿಗಳ ಜೊತೆಗೆ ವ್ಯಂಗ್ಯವಾಗಿ ಕಾಣುವ ವಿಧಾನಗಳನ್ನು ಅಭಿವ್ಯಕ್ತಿಸಿದೆ. ಪ್ರತಿರೊಧಗಳು ಭೂತದಲ್ಲಿ ಗಿರಕಿ ಹೊಡೆಯದೇ ಭವಿಷ್ಯದ ಬದುಕಿಗೆ ಅನೇಕ ಅವಕಾಶಗಳನ್ನು ತೆರೆದಿಟ್ಟಿವೆ. ಹೀಗೆ ಆತ್ಮಕಥೆಗಳ ಮೇಲಿನ ಪ್ರಸ್ತುತ ಅಧ್ಯಯನವು ಸಾಹಿತ್ಯದ ಮೂಲಕ ಸಮುದಾಯಗಳ ಚಾರಿತ್ರಿಕ ಅಭಿವ್ಯಕ್ತಿಗಳನ್ನು ವರ್ತಮಾನದ ಸಂಗತಿಗಳಿಗೆ ಮುಖಾಮುಖಿಯಾಗಿಸಿದೆ.

## ಅ) ಪ್ರಾಥಮಿಕ ಆಕರಗಳು

೧. ಅರವಿಂದ ಮಾಲಗತ್ತಿ, **ಗೌರ್ಮೆಂಟ್ ಬ್ರಾಹ್ಮಣ**, ಚೇತನ್ ಬುಕ್ ಹೌಸ್, ಮೈಸೂರು, ೨೦೦೪

೨. ಉಮಾಶ್ರೀ, **ಬೆಂಕಿ ಬೆಡಗು**, ಬಿ ಗಣಪತಿ (ನಿರೂಪಣೆ), ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೦೩

೩. ನಾಗಲೋಟಿಮಠ ಸ. ಜ., **ಬಿಚ್ಚಿದ ಜೋಳಿಗೆ**, ಡಿವಿಕೆ ಮೂರ್ತಿ, ಮೈಸೂರು, ೨೦೦೩

೪. ಪ್ರತಿಭಾ ನಂದಕುಮಾರ್, **ಅನುದಿನದ ಅಂತರಗಂಗೆ**, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೦೩

೫. ಭೈರಪ್ಪ ಎಸ್.ಎಲ್, **ಭಿತ್ತಿ**, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೨

೬. ಮದರಿ ಎ. ಎಂ, **ಗೊಂದಲಿಗ್ಯಾ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೪

೭. ಮುಹಮ್ಮದ್ ಕುಳಾಯಿ, ಮುಹಮ್ಮದ್ ಅಲಿ, ಬಿ.ಎ. ಮೊಹಿದೀನ್, **ನನ್ನೊಳಗಿನ ನಾನು**, ಭಾರತ ಪ್ರಕಾಶನ, ಮಂಗಳೂರು, ೨೦೧೮

೮. ಲಕ್ಷಣ್ ಎಂ, **ಸಂಬೋಳಿ**, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೩

೯. ಸಮತಾ ಬಿ. ದೇಶಮನೆ, **ಮಾತಂಗಿ ದೀವಟಿಗೆ**, ಅನ್ನಪೂರ್ಣ ಪಬ್ಲಿಕೇಶನ್ಸ್, ದಾಸರಹಳ್ಳಿ, ಬೆಂಗಳೂರು, ೨೦೧೫

೧೦. ಸಾರಾ ಅಬೂಬಕ್ಕರ್, ಚಂದ್ರಗಿರಿಯ ತೀರದಲ್ಲಿ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೯

೧೧. ಸಿದ್ಧಲಿಂಗಯ್ಯ, **ಊರುಕೇರಿ**, (ಭಾಗ ೧ ಮತ್ತು ೨) ಅಂಕಿತ ಪುಸ್ತಕ, ಬೆಂಗಳೂರು, ೨೦೧೪

## ಆ) ಪೂರಕ ಆಕರಗಳು (ಆತ್ಮ ನಿರ್ವೇದನಾತ್ಮಕ ಬರಹಗಳು)

೧. ಅನುಪಮಾ ನಿರಂಜನ, **ಬರಹಗಾರ್ತಿಯ ಬದುಕು**,ಡಿ.ವಿ.ಕೆ ಮೂರ್ತಿ, ಮೈಸೂರು,೧೯೯೦

೨. ಅಬ್ದುಲ್ ರಶೀದ್, **ನಾನು ಸಾಬಿ ಅಲ್ಲ**, ಲಂಕೇಶ್ ಪತ್ರಿಕೆ, ಜುಲೈ, ೦೧.೧೯೯೮

೩. ಕಾರಂತ.ಬಿ.ವಿ, **ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ**, ವೈದೇಹಿ,(ಸಂಗ್ರಹ ಮತ್ತು ಕೃತಿರೂಪ), ಅಭಿನವ ಪ್ರಕಾಶನ, ೨೦೦೩

೪. ಕಾಳೇಗೌಡರ ನಾಗವಾರ (ಸಂ), ಜಿ.ವಿ. ಆನಂದಮೂರ್ತಿ, **ಗರಿಗೆದರಿದ ನವಿಲುಗಳು**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧

೫. ಕುವೆಂಪು, ನೆನಪಿನ ದೋಣಿಯಲ್ಲಿ, ಉದಯರವಿ ಪ್ರಕಾಶನ, ಮೈಸೂರು, ೧೯೮೦

೬. ಗೋಗೇರಿ.ಎಂ.ಡಿ, **ಹಳ್ಳಿಯಿಂದ ಹೂಬಳ್ಳಿ** ಸಾಹಿತ್ಯಸೌಧ ಪ್ರಕಾಶನ, ಹುಬ್ಬಳ್ಳಿ, ೨೦೦೨

೭. ಫಕೀರ್ ಮುಹಮ್ಮದ್ ಕಟ್ಪಾಡಿ, **ಶತಮಾನದ ಬೆಳಕು**, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ೨೦೧೮

೮. ಪ್ರೊತಿಮಾ ಬೇಡಿ, **ಟೈಮ್‌ಪಾಸ್**,ರವಿಬೆಳಗೆರೆ(ಅನು), ಭಾವನಾ ಪ್ರಕಾಶನ, ಬೆಂಗಳೂರು,೧೯೯೯

೯. ಫಾತಿಮಾ ರಾಣಿ, ಅನುಪಮಾ ಹೆಚ್.ಎಸ್.(ಅನು) **ತಾಳೀಗರಿ**, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೧೬

೧೦. ಬಶೀರ್.ಬಿ.ಎಂ, **ಬಾಡೂಟದ ಜೊತೆಗೆ ಗಾಂಧಿ ಜಯಂತಿ**, ಲಡಾಯಿ ಪ್ರಕಾಶನ, ಗದಗ, ೨೦೧೪

೧೧. ಬಸವರಾಜ ಕಟ್ಟೀಮನಿ, **ಕಾದಂಬರಿಕಾರನ ಕಥೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೧೯೮೧

೧೨. ಮೊಹಮ್ಮದ್ ಆಮಿರ್‌ಖಾನ್, ನೂರ್ ಅಹಮದ್ ಎ.ಎಸ್.(ಅನು) **ನಾನು ಆಮಿರ್‌ಖಾನ್ ಭಯೋತ್ಪಾದಕನಲ್ಲ**, ಲಡಾಯಿ ಪ್ರಕಾಶನ, ಗದಗ, ೨೦೧೮

೧೩. ಎಲ್ಲಪ್ಪ ಕೆ.ಕೆ.ಪುರ, ಕೇರಿಯಿಂದ ತೇರಿಗೆ, ಶ್ರೀ ಶಾ ಎಂಟರ್ ಪ್ರೈಸಸ್ ಪ್ರೈ.ಲಿ., ಬೆಂಗಳೂರು, ೨೦೦೯

೧೪. ರಹಮತ್ ತರೀಕೆರೆ, **ಧರ್ಮಪರೀಕ್ಷೆ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೦

೧೫. ರಾಮಯ್ಯ ಕೆ, (ಸಂ), **ತಲಪರಿಗೆ**, ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು,೨೦೦೫

೧೬. ರೀಟಾ ರೀನಿ (ಸಂ), **ಫಾದರ್ ಅಂತಪ್ಪ ಕನ್ನಡದ ಸೃತಿ** ಶಿಲ್ಪಿ, ಸಂಚಲನ, ಬೆಂಗಳೂರು, ೨೦೦೭

೧೭. ರೇವತಿ.ಎ, ದು.ಸರಸ್ವತಿ (ಅನು), **ಬದುಕು ಬಯಲು**, ಲಂಕೇಶ್ ಪ್ರಕಾಶನ, ೨೦೧೫

೧೮. ರಂಜಾನ್ ದರ್ಗಾ, **ಸಾಹಿತ್ಯ ಮತ್ತು ಸಮಾಜ**, ಭಾರತೀ ಪ್ರಕಾಶನ, ಮೈಸೂರು, ೧೯೭೫

೧೯. ಲಕ್ಷ್ಮಣ ಗಾಯಕವಾಡ, ಚಂದ್ರಕಾಂತ್ ಪೋಕಳೆ, (ಅನು) **ಉಚಲ್ಯಾ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೧

೨೦. ವಾಸಂತಿ ಪಡುಕೋಣೆ, **ಜೀವನ ಹೋರಾಟ**, ಸಾಹಿತ್ಯ ದೂತ,ಬೆಂಗಳೂರು,೧೯೯೮

೨೧. ವಿಜಯಾದಬ್ಬೆ(ಸಂ), **ಲೇಖಲೋಕ**, ಕರ್ನಾಟಕ ಲೇಖಕಿಯರ ಸಂಘ, ಚಾಮರಾಜಪೇಟೆ, ಬೆಂಗಳೂರು, ೨೦೧೦

೨೨. ಶೆಣೈ ಟಿ.ಎ.ಪಿ, **ಕ್ರೈಸ್ತ ಕ್ರೌರ್ಯ ಪರಂಪರೆ**, ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩

೨೩. ಷಡಕ್ಷರಪ್ಪ, **ನನ್ನ ಶೈಕ್ಷಣಿಕ ಬದುಕು**, ಶತಮಾನೋತ್ಸವ ಸಮಿತಿ, ಮಸ್ಕಿ, ೧೯೯೬

೨೪. ಸ್ಟ್ಯಾನಿ ಬ್ಯಾಪ್ಟಿಸ್ಟ್, (ಸಂ) **ಕ್ರೈಸ್ತರ ಕಣ್ಮಣಿ**, ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘ, ಬೆಂಗಳೂರು ೨೦೦೨

೨೫. ಸುಕನ್ಯಾ ಕನಾರಳ್ಳಿ, **ಹೇಳುತೇನೆ ಕೇಳು**, ಲಂಕೇಶ್ ಪ್ರಕಾಶನ, ೨೦೧೨

೨೬. ಸುಶೀಲಾ ರಾಯ್, ಜಿ.ಕುಮಾರಪ್ಪ (ಅನು), **ನಿರಕ್ಷರಿಯ ಆತ್ಮಕತೆ**, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೨೦೦೯

## ಇ) ಪರಾಮರ್ಶನ ಗ್ರಂಥಗಳು

೧. ಅರ್ಜುನ ಗೊಳಸಂಗಿ, **ದಲಿತಜ್ಞ**, ದಲಿತ ಸಾಹಿತ್ಯ ಪರಿಷತ್ತು, ಗದಗ, ೨೦೦೧

೨. ಜೋಗನ್ ಶಂಕರ್, ಮಹೇಶ್ ತಿಪ್ಪಶೆಟ್ಟಿ, ಮಲ್ಲಿಕಾ ಘಂಟಿ, ವೆಂಕಟಗಿರಿ ದಳವಾಯಿ (ಸಂ), ಕಪ್ಪು ಕಾಲಿನ ಕಡಗ, ಬಾಬುರಾವ್ ಮುಡಬಿಯವರ ಅಭಿನಂದನಾ ಸಮಿತಿ, ಬೆಂಗಳೂರು, ೨೦೧೨

೩. ಡೇವಿಡ್ ಪ್ರಾಲಿ, ಮಂಗಳಾ ಭಟ್(ಅನು), **ನಾ ಹೇಗೆ ಹಿಂದುವಾದೆ**, ರಾಷ್ಟ್ರೋತ್ಥಾನ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೨

೪. ಪುಟ್ಟಯ್ಯ ಬಿ.ಎಂ, **ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೫. ಮರುಳಸಿದ್ಧ ಪಂಡಿತರಾಧ್ಯ, **ಆತ್ಮಕಥನ : ಸಂಘರ್ಷದ ವಿಭಿನ್ನ ನೆಲೆಗಳು**, ದಶ ಪ್ರಕಾಶನ, ಬೆಂಗಳೂರು, ೨೦೧೬

೬. ಶರಣಮ್ಮ ಅ. ಗೋರೇಬಾಳ, **ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ**, ದಲಿತ ಸಾಹಿತ್ಯ ಪರಿಷತ್ತು, ಗದಗ, ೨೦೦೨

೭. ಸರಸ್ವತಿ. ದು, ಈಗೇನ್ ಮಾಡೀರಿ, ಮಾನಸ ಪಂಚಾಯಿತಿ, ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು, ೨೦೦೧

೮. ಹೇಮಾವತಿ ಸಿ.ಹೆಚ್, **ಲಿಂಗ, ಜಾತಿ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ಆತ್ಮಕಥೆಗಳ ಸಾಮಾಜಿಕ ವಿಶ್ಲೇಷಣೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

## ಈ) ಲೇಖನಗಳು

೧. ಚಂದ್ರಮತಿ ಸೋಂದಾ, **ಕನ್ನಡದ ಮಹಿಳಾ ಆತ್ಮಕಥೆ ಒಂದು ಅನುಸಂಧಾನ**, ಡಾ.ಸಬಿಹಾ ಭೂಮಿಗೌಡ,(ಸಂ) ಮಹಿಳಾ ಆತ್ಮಕಥೆಗಳು: ಅನುಸಂಧಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭

೨. ನಾಗರಾಜ್ ಡಿ.ಆರ್. **'ಬಡವರ ನಗುವಿನ ಶಕ್ತಿ,'** ಸಿದ್ಧಲಿಂಗಯ್ಯ, **ಊರುಕೇರಿ ಭಾಗ ೧**, ಅಂಕಿತ ಪುಸ್ತಕ, ಬೆಂಗಳೂರು, ೧೯೯೯

೩. ನೀಲಗಿರಿ ತಳವಾರ, **ದಲಿತ ಆತ್ಮಕಥೆಗಳು**, ಚಂದ್ರಶೇಖರ ಪಾಟೀಲ್(ಸಂ), ಸಂಕ್ರಮಣ, ೩೪೮, ಆಗಸ್ಟ್, ೨೦೧೨

೪. ಬಸವರಾಜ ಕಲ್ಗುಡಿ, **ಆತ್ಮಕಥನ: ವಾಗ್ವಾದ ಮತ್ತು ಸಂವಾದ ಮತ್ತು...** , ನ.ರವಿಕುಮಾರ,(ಸಂ) ಆಯ್ದ ವಿಮರ್ಶೆ, ಅಭಿನವ ಪ್ರಕಾಶನ, ೨೦೧೫

೫. ಮೃತ್ಯುಂಜಯ ರುಮಾಲೆ, ದಲಿತ ಆತ್ಮಚರಿತ್ರೆಗಳು, ಸಂಕ್ರಮಣ, ಚಂದ್ರಶೇಖರ ಪಾಟೀಲ (ಸಂ), ಸಂಪುಟ ೨೬, ಸಂಚಿಕೆ–೨, ಏಪ್ರಿಲ್ ,೨೦೧೧

೬. ರಹಮತ್ ತರೀಕೆರೆ, 'ಆತ್ಮಕಥೆ : ಕನ್ನಡ ಗದ್ಯದ ಅಧೋಲೋಕ', ದೇಶಕಾಲ, ಸಂಚಿಕೆ ೧೪, ಜುಲೈ, ಸೆಪ್ಟೆಂಬರ್, ೨೦೦೮

೭. ವಿಠಲರಾವ್ ಗಾಯಕ್ವಾಡ್ – **ಹಸಿವು, ಅಕ್ಷರ, ಅಭಿವ್ಯಕ್ತಿ ಮತ್ತು ಇತ್ಯಾದಿ.** ಚಂದ್ರಶೇಖರ ಪಾಟೀಲ್.(ಸಂ), ಸಂಕ್ರಮಣ, ೩೨೫, ಸೆಪ್ಟೆಂಬರ್, ೧೯೯೯

೮. ಸುಜಾತ ಅಕ್ಕಿ – ಆತ್ಮಕಥೆ, ದಶಕದ ಕನ್ನಡ ಸಾಹಿತ್ಯ, ಎಫ್. ಓ ಹಳ್ಳಿಕೆರೆ, ರವಿಂದ್ರನಾಥ ಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨

**ಉ) ಸಂದರ್ಶನಗಳು**

೧. ಬೊಳುವಾರು ಮಹಮದ್ ಕುಂಞ – ಮಾನವೀಯ ನೆಲೆಗಟ್ಟಿನ ಕವಿಯಾದ ಬೊಳುವಾರ ಅವರು 'ಸ್ವಾತಂತ್ರ್ಯದ ಓಟ', 'ತಟ್ಟು ಚಪ್ಪಾಳೆ ಪುಟ್ಟ ಮಗು' ಮುಂತಾದ ಕೃತಿಗಳನ್ನು ಬರೆದಿದ್ದಾರೆ. ಇವರನ್ನು ದಿನಾಂಕ.೧೨.೦೮.೨೦೧೯ ರಂದು ಚಿತ್ರದುರ್ಗದ ವಿಚಾರಗೋಷ್ಠಿಯಲ್ಲಿ ಸಂದರ್ಶನ ಮಾಡಲಾಗಿದೆ

೨. ಮೇಲಿನ ಮನಿ ಅಬ್ಬಾಸ್ – ಕನ್ನಡದ ಜನಪ್ರಿಯ ಕಥೆಗಾರರಾದ ಇವರು ಬಾಗಲಕೋಟೆಯವರು. 'ಕಥೆಯಾದಳು ಹುಡುಗಿ', 'ಪ್ರೀತಿ ಬದುಕಿನ ಹಾಡು', 'ಕಣ್ಣ ಮುಂದಿನ ಕಥೆ' ಹೀಗೆ ಹಲವು ಕೃತಿಗಳನ್ನು ರಚಿಸಿದ್ದಾರೆ. ಇವರನ್ನು ೦೮.೦೪.೨೦೧೯ ರಂದು ದಾವಣಗೆರೆಯಲ್ಲಿ 'ಉಮ್ಮಾ' ಕಾದಂಬರಿ ಬಿಡುಗಡೆ ಸಮಾರಂಭದಲ್ಲಿ ಸಂದರ್ಶನ ಮಾಡಲಾಯಿತು.

೩. ಸನಾವುಲ್ಲಾ ನವಿಲೇಹಾಳ್ – ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲೋಕಿನ ನವಿಲೇಹಾಳಿನವರಾದ ಸನಾವುಲ್ಲಾರವರು, 'ಒಂಟಿ ಮರದ ಕೆಳಗೆ' ಹಾಗೂ ಇತರೆ ಕೃತಿಗಳನ್ನು ಬರೆದಿರುವ ಸಂವೇದನಯ ಕವಿಯಾಗಿದ್ದಾರೆ. ಇವರನ್ನು ನವಿಲೇಹಾಳಿನಲ್ಲಿ ಸಂದರ್ಶನ ಮಾಡಲಾಗಿದೆ.

೪. ನಾ. ಡಿಸೋಜಾ – ಡಿಸೋಜಾ ಅವರು ಶಿವಮೊಗ್ಗದ ಸಾಗರದಲ್ಲಿ ನೆಲೆಸಿದ್ದು, ಕಥೆ, ಕಾದಂಬರಿಗಳ ಮೂಲಕ ಕನ್ನಡ ಸಾಹಿತ್ಯವನ್ನು ವಿಸ್ತರಿಸಿದ ಕವಿ. ಇವರನ್ನು ಬೆಂಗಳೂರಿನಲ್ಲಿ ದಿ.೨೬.೫.೨೦೧೮ರಂದು ನಡೆದ ಅಂಬೇಡ್ಕರ್ ಜ್ಞಾನದರ್ಶನ ಅಭಿಯಾನದಲ್ಲಿ ಸಂದರ್ಶನ ಮಾಡಲಾಯಿತು.

೫. ನಜ್ಮಾ ನಾಸೀರ್ – ವರ್ತಮಾನದ ಯುವ ಹೋರಾಟಗಾರ್ತಿಯಾದ ಇವರು, ಸಾಮಾಜಿಕ ತಾಣಗಳಲ್ಲಿ ಹೆಚ್ಚಿನ ಬರಹವನ್ನು ವ್ಯಕ್ತಪಡಿಸುತ್ತಿದ್ದಾರೆ. ಇವರನ್ನು ದಿ.೧೦.೦೪.೧೯ ರಂದು ಧಾರವಾಡದ ಸುರಕೋಡರ ಅಭಿನಂದನಾ ಸಮಾರಂಭದಲ್ಲಿ ಸಂದರ್ಶನ ಮಾಡಲಾಯಿತು.

೬. ಕಲಿಮುಲ್ಲಾ – ಶಿವಮೊಗ್ಗ ಜಿಲ್ಲೆಯಲ್ಲಿ ವಾಸವಾಗಿದ್ದಾರೆ. ಇವರು ಅಂಕಣಕಾರರಾಗಿದ್ದು, ದಿ.೨೨.೦೪.೧೯ ರಂದು ಶಿವಮೊಗ್ಗದಲ್ಲಿ ಸಂದರ್ಶನ ಮಾಡಲಾಯಿತು.

**ಯ್ಯೂಟ್ಯೂಬ್ ಲಿಂಕ್**

೧. https://youtu.be./dclzxjrcyl4 (ನಾನು ಅವನಲ್ಲ ಅವಳು, ಬಿ.ಎಸ್. ಲಿಂಗದೇವರು, ನಿರ್ದೇಶಕರು, ೨೦೧೫)

* * *

